# ಕಸ್ತೂರಿ

ಏಪ್ರಿಲ್ 1991 ಬೆಲೆ : ರೂ. 3.00

ಕಾಡಲೆದವರೀಗ

ನಾಡಿಗೆ

ಬಂದಿದ್ದಾರೆ !

ಚುಂಬನದ

ಮೂಲವೆಲ್ಲಿ ?






# ಕಸ್ತೂರಿ

ಕನ್ನಡ ಡೈಜೆಸ್ಟ್

ವರ್ಷ: 35

ಸಂಚಿಕೆ: 8

ಎಪ್ರಿಲ್ 1991

ವ್ಯವಸ್ಥಾಪಕ ಸಂಪಾದಕ

ಕೆ.ಶಾಮರಾವ್

ಸಂಪಾದಕ

ಆರ್.ಎ.ಉಪಾಧ್ಯ

ನಿರ್ವಹಣೆ

ರವಿ ಬೆಳಗೆರೆ

ಮುಖಪುಟ ಚಿತ್ರ:

ಅನಿಲ ಫೋಟೋ ಸ್ಟುಡಿಯೋ

ಶಶಿ ಸಾಲಿ

ಕಸ್ತೂರಿ ಕಾರ್ಯಾಲಯ

ಕೊಪ್ಪೀಕರ ರಸ್ತೆ

ಹುಬ್ಬಳ್ಳಿ - 580 020


## ಬೆಳಕಿಂಡಿ

★ ಆಂತಾರಾಷ್ಟ್ರೀಯ ಜಗಳಗಳು ಅಶಾಂತ ಮಾರ್ಗಗಳಿಂದ ಎಂದೂ ಸರಿಪಡಲಾರವು.

– ನೆಹರು

★ ಅತೃಪ್ತಿಯು ಪ್ರಗತಿಯ ಹಾದಿಯಲ್ಲಿಯ ಮೊದಲನೆಯ ಹೆಜ್ಜೆ.

– ಆಸ್ಕರ್‌ವೈಲ್ಡ್

★ ಆತ್ಮಶುದ್ಧಿ ಇಲ್ಲದವನ ನಾಯಕತ್ವವು, ಮನೋನಿಗ್ರಹವಿಲ್ಲದವನ ತಪಶ್ಶಕ್ತಿಯು, ಹಣಕ್ಕಾಗಿ ಬರೆಯುವವನ ಕಾವ್ಯಗಳು ನಿಷ್ಪ್ರಯೋಜಕ.

– ಭಟ್ಟ ನಾರಾಯಣ

★ ಓಡುವವರಿಗೆ ಒಂದೇ ದಾರಿ, ಬೆನ್ನು ಹತ್ತಿದವರಿಗೆ ನೂರು.

– ರಶಿಯನ್ ಗಾದೆ

★ ಕಷ್ಟದ ನಂತರ ಸುಖ ಮತ್ತು ಕಠಿಣತೆಯ ನಂತರ ಮೃದುತ್ವ ಇರುತ್ತದೆ.

– ಪೈಗಂಬರ


ಚಂದಾ ದರಗಳು

| | | |
|---|---|---|
| ಬಿಡಿ ಸಂಚಿಕೆ | ..... | ರೂ.3-00 |
| 1 ವರ್ಷಕ್ಕೆ | ಅಂಚೆ ಸೇರಿ | ರೂ.34-00 |
| 2 ವರ್ಷಕ್ಕೆ | ಅಂಚೆ ಸೇರಿ | ರೂ.65-00 |
| 3 ವರ್ಷಕ್ಕೆ | ಅಂಚೆ ಸೇರಿ | ರೂ.100-00 |

ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ 1ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ 5ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರ ವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

KASTURI

APRIL 1991

# ಸಹಚಿಂತನ

## ಪಾರಿವಾಳಗಳೆ ರೆಕ್ಕೆಬಿಚ್ಚಿರಿ......

"ಪಾರಿವಾಳಗಳೆ ರೆಕ್ಕೆಬಿಚ್ಚಿರಿ ಯುದ್ಧನಾಡಿನಲ್ಲಿ" (ಎಸ್.ಬಿ. ನರಗುಂದಕರ) ಲೇಖನದಲ್ಲಿ ದಾಖಲಾದ ಕೊಲ್ಲಿಯುದ್ಧದ ಕಾರಣ ಮತ್ತು ಕೊಲ್ಲಿ ರಾಷ್ಟ್ರಗಳ ಬಗೆಗಿನ ಮಾಹಿತಿ ಅಚ್ಚುಕಟ್ಟಾಗಿತ್ತು. ಯುದ್ಧದ ರಣಹದ್ದುಗಳು ಶಾಂತಿದೂತ ಪಾರಿವಾಳಗಳನ್ನು ರೆಕ್ಕೆ ಬಿಚ್ಚಲು ಬಿಡದೆ ಅವುಗಳ ಕ್ರೂರಹತ್ಯೆ ನಡೆಸಿವೆ.

**ಪರ್ಕಳ (ದ.ಕ) — ಕೆ. ಪ್ರೀತಾ ಪೈ**

ಈ ವರ್ಷದ ಅತ್ಯುತ್ತಮ ಲೇಖನವೆಂದು ಪರಿಗಣಿಸಲು ಅರ್ಹವಾಗಿರುವ "ಪಾರಿವಾಳಗಳೇ ರೆಕ್ಕೆ ಬಿಚ್ಚಿರಿ..." ಬಗ್ಗೆ ಹೃತ್ಪೂರ್ವಕ ಧನ್ಯವಾದಗಳು. ಈ ಸಂಚಿಕೆ ತೀರ ತಡವಾಗಿ ಕೈಸೇರಿದ್ದು ಅಷ್ಟೇ ವಿಷಾದಕರ ಸಂಗತಿ. ಇನ್ನು ಮುಂದೆ ಹೀಗಾಗದಿರಲಿ..

**ಮುಂಬಯಿ — ಸಾತಪ್ಪ ಭರಭರಿ**

ಸದ್ಯ ಇರಾಕ-ಕುವೈತ್ ಬಿಕ್ಕಟ್ಟಿಗೆ ಪೂರ್ಣವಿರಾಮ ಬಿದ್ದಿದೆ. ಆದರೂ ಇದರ ವಿನಾಶಕಾರಿ ಪರಿಣಾಮ ಇನ್ನೂ ಹಲವು ವರ್ಷ ಮಾಸಲಿಕ್ಕಿಲ್ಲ. ಈ ಬಗ್ಗೆ ಪ್ರಕಟವಾದ ಲೇಖನ ಹಲವು ವಿಚಾರಪೂರ್ಣ ಮಾಹಿತಿಗಳನ್ನು ಒದಗಿಸಿದ್ದಲ್ಲದೆ ಸಂದರ್ಭೋಚಿತವಾಗಿತ್ತು.

**ಉಪ್ಪಿನಂಗಡಿ — ಲಿಂಗಪ್ಪ. ಎನ್**

## ಕಾಡುಕಡಿದು ಊರು ಮಾಡಿದರು

ಲೇಖಕಿ ಪ್ರೇಮಾಭಟ್ ಅವರು ಅಲೆಮಾರಿ ಜನಾಂಗದ ವಸತಿ ಸಮಸ್ಯೆಯನ್ನು ಹತ್ತಾರು ಪಾತ್ರಗಳೊಡನೆ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕೊನೆಗೆ ಎಲ್ಲರೂ ಕಾಡು ಬಿಟ್ಟು ಊರಿಗೆ ಬಂದದ್ದು ಒಂದು ಆರೋಗ್ಯಕರ ಚಿಹ್ನೆ, ಒಟ್ಟಿನಲ್ಲಿ ಒಂದು ಉತ್ತಮ ಕತೆ.

**ಕಾರ್ಕಳ — ವನಜ**

ಬಿಸಿಲಿನ ಕಿರಣಗಳೂ ಪ್ರವೇಶಿಸದಿದ್ದ ಕಾಡನ್ನು ವಲಸೆ ಬಂದ ಪರಿವಾರ ನಾಶಮಾಡುತ್ತ ಭೀಮ ದ್ರುಮನಂಥವರಿಂದ ಮೋಸ ಹೋಗುವುದು ಚೆನ್ನಾಗಿ ಚಿತ್ರಿತವಾಗಿದೆ. ಪಾಂಡು. ಬೀರಿಯರ ತಂಡದ ಬಗ್ಗೆ ಬೇಸರವಾಯಿತು. ಹಾಲಜ್ಜನ ವನ್ಯ ಪ್ರಾಣಿ ಬಗೆಗಿನ ಮಮತೆ ಮನ ಮುಟ್ಟಿತು. ಪ್ರೇಮಾಭಟ್ ಅವರಿಗೆ ಧನ್ಯವಾದಗಳು

**ಚೆನಕಟ್ಟೆ — ಪಾಂಡುರಂಗ ಎಚ್. ಕಟಗೇರಿ**

ನನ್ನ ಬಾಲ್ಯದ ಬಹಳಷ್ಟು ವರ್ಷಗಳನ್ನು 'ಬಿಸಿಲೆ'ಯ ಪರಿಸರದಲ್ಲಿ ಕಳೆದು ಅಲ್ಲಿಯ ದಟ್ಟಾರಣ್ಯ, ಆನೆ, ಹುಲಿ, ಚಿರತೆ, ಕಾಡುಕೋಣ, ಕಡವೆ, ಸಬ್ಬಾವುಗಳನ್ನು ನೋಡಿ ರೋಮಾಂಚನ ಅನುಭವಿಸಿರುವ ನನಗೆ ಶ್ರೀಮತಿ ಪ್ರೇಮಾ ಭಟ್ ಅವರ ಕಾಡಿನ ವರ್ಣನೆ ಓದಿ ಅಯ್ಯೋ ಪಾಪ ಅನಿಸಿತು! ಅವರು ಬರೆದಿರುವಂಥ ಕಾಡು ಜನರು (ಕಾಡು ಕುರುಬರು) ನಮ್ಮ ಬಿಸಿಲೆ ಕಾಡಿನಲ್ಲಿ ವಾಸವಾಗಿದ್ದ ಯಾವುದೇ ಕುರುಹುಗಳಿಲ್ಲ. ಈ ಕಥೆಯಲ್ಲಿ ವರ್ಣಿತವಾಗಿರುವ ಮರಸೇಬು, ಮುತ್ತುಗದೆಲೆ, ಹುಣಸೆ ಮರ ಅಲ್ಲಿ ಬೆಳೆಯುವುದಿಲ್ಲ.

**ಚಿಕ್ಕುಂದೂರು — ಆನಂದಕುಮಾರ್**

## ಚೆನ್ನಪ್ಪನ ಮಕ್ಕಳು

ಚೆನ್ನಪ್ಪನ ಮಕ್ಕಳಂತಹ ಪದ್ಯಗಳ ಸುರಿಮಳೆ ಕಸ್ತೂರಿಯಲ್ಲಿ ಆಗಲೆಂದು ಆಶಿಸುತ್ತೇನೆ. ಜಯಂತ ಕಾಯ್ಕಿಣಿಯವರ ಪದ್ಯದ ಶೈಲಿ ಮಹಾಕವಿ ಬೋದಿಲೇರ್ ಅಥವಾ ಬ್ಲೇಕ್‌ನ ಮಟ್ಟದ್ದು. ಅವರ ಮಾನವತೆಯ ತಿಳಿವಳಿಕೆ ಅತ್ಯಂತ ಸೂಕ್ಷ್ಮವಾದುದು ಅವರ ವಿಶ್ಲೇಷಣೆ ವಿಜ್ಞಾನಿಯಂತಿದೆ.

**ಮುಂಬಯಿ — ಡಾ. ನಾಗರಾಜ ಹುಯಿಲಗೋಳ**

## ಭಾರತದ ಸಾಧುಗಳು

ಭಾರತದ ಸಾಧುಗಳು (ಚಂದ್ರಕಾಂತ ಪೆಡ್ನು) ಲೇಖನ ಸಾಧು ಸನ್ಯಾಸಿಗಳ ಬಗ್ಗೆ 'ಕ್ಷ'ಕಿರಣ ಬೀರುತ್ತದೆ. ಲೇಖಕರು ಓದುಗರನ್ನು ತಮ್ಮ ಲೇಖನಿಯ ಜೊತೆಯಲ್ಲಿಯೇ ಕೊಂಡೊಯ್ಯುತ್ತಾರೆ. ಅಂತೂ ಭಾರತದಂತಹ ಪುಣ್ಯ ಭೂಮಿಯಲ್ಲಿ

ಸಾಧುಸಂತರ ನೆಲೆಯೂ ಹಿಂದೆ ವೈಭವಭರಿತವಾಗಿತ್ತೆಂಬುದನ್ನು ಲೇಖನ ಪ್ರತಿಬಿಂಬಿಸುತ್ತದೆ.

**ಬೆಂಗಳೂರು ರಿಗ್ರೆಟ್ ಅಯ್ಯರ**

ಈ ಸಮಗ್ರ ಲೇಖನ ಸನ್ಯಾಸಿಗಳ ಮೂಲವನ್ನು ಎಳೆಎಳೆಯಾಗಿ ಕೆದಕುತ್ತಾ ಓದುಗರನ್ನು ವಿಮರ್ಶಾತ್ಮಕ ಹಾಗೂ ವಿಚಾರಾತ್ಮಕ ಪ್ರಪಂಚಕ್ಕೆ ಸೆಳೆಯುತ್ತದೆ.

**ರಾಮನಾಥಪುರ ಆರ್.ಎಸ್. ಸುಬ್ರಹ್ಮಣ್ಯ**

**ಕಥೆಗಳು**

ರವಿ ಬೆಳಗೆರೆಯವರ 'ಪರಿಚಯ' ಕತೆಯು ತುಂಬಾ ಸೋಗಸಾಗಿಯೂ, ಕುತೂಹಲ ಕೆರಳಿಸುವಂತೆಯೂ ಮೂಡಿಬಂದಿದೆ.

**ಮಾಗಡಿ ಶಿವಾನಂದ ರಾ ಕುಂದಿ**

ಪುತ್ತೂರು ಶ್ರೀಕಾಂತ ಅವರ (ಫೆಬ್ರವರಿ ೯೧) 'ತರುಣ ಇಂಜಿನಿಯರನ ರಾಜಿ' ಕತೆ ಮನ ಸೆಳೆಯಿತು. ಕತೆ ಇಂದಿನ ಪರಿಸ್ಥಿತಿಗೆ ಕನ್ನಡಿಯಾಗಿದೆ.

**ದಾವಣಗೆರೆ ರಾಜಗೋಪಾಲ ವಾಂಜ್ರೆ**

'ನಿರಾಶ್ರಿತ' ವಾಸ್ತವತೆಗೆ ತೀರ ಹತ್ತಿರವಾಗಿದ್ದು ಶ್ರೀಮತಿ ಜ್ಯೋತ್ಸ್ನಾ ದೇವಧರ ಅವರು ಘಟನೆಯನ್ನು ಸುಂದರವಾಗಿ ಚಿತ್ರಿಸಿದ್ದಾರೆ.

**ಹಾಣಾಕುಶನೂರ ಮೂಲಿಮನಿ ಎಸ್.ವಿ.**

ಆ ಮನೆ ಹೆಂಡತಿಯದು, ಈ ಮನೆ ತಾಯಿಯದು ಎಂದು ಮನದಲ್ಲೇ ನೆನೆದು ತಾನೇ ನಿರಾಶ್ರಿತ ಎಂಬ ಭಾವನೆ ಅಭಿವ್ಯಕ್ತಗೊಂಡ ಕತೆ ಚೆನ್ನಾಗಿದೆ.

**ಕಾದರವಳ್ಳಿ ವೈ.ಸಿ. ಮೇಲಿನಮನಿ**

'ಪರಿಚಯ' ಅತ್ಯಂತ ಕುತೂಹಲಕಾರಿಯಾಗಿ ಓದಿಸಿಕೊಂಡು ಹೋಯಿತು. ಸಮಾಜದಲ್ಲಿ ಅಡಗಿದ ಸಜ್ಜನ ಮುಖವಾಡದವರನ್ನು ಬಯಲಿಗೆಳೆದಿದೆ.

**ನರಗುಂದ ರಾಮಕೃಷ್ಣ ದ ಕುಲಕರ್ಣಿ**

ಮಾರ್ಚ್ ತಿಂಗಳ 'ಕಸ್ತೂರಿ' ತುಂಬಾ ಓದಿಸಿತು. ರವಿ ಬೆಳಗೆರೆಯವರ 'ಪರಿಚಯ' ಬರಹಗಾರನ ಒಳಪ್ರಪಂಚದ ಪರಿಚಯವನ್ನು ಸಮರ್ಥವಾಗಿ ಮಾಡಿದೆ.

**ಶಹಪೂರ - ಶಿವರಂಜನ ಸತ್ಯಂಪೇಟೆ**

ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಶೀಘ್ರ ಬಟವಾಡೆ' ಕತೆಯನ್ನು ವೈಜ್ಞಾನಿಕ ಕತೆ ಎಂದು ಕರೆದಿರುವುದು ಸರಿಯಲ್ಲ. ಅದನ್ನು 'ಕಲ್ಪನಾ ಕತೆ' ಎಂದು ಕರೆಯಬಹುದು.

**ಶ್ರೀರಂಗ ಪಟ್ಟಣ ಬದರೀನಾಥ ಹೆಚ್.ಜಿ.**

**ಮೆದುಳುಃ ಅನುಮಾನಕ್ಕೆ ಪರಿಹಾರ**

'ಮೆದುಳು: ಒಂದು ಜೈವಿಕ ಸಮಯ ಯಂತ್ರ?' (ಫೆಬ್ರವರಿ ೯೧) ಲೇಖನ ಕುರಿತು ಎನ್.ಎಸ್. ಚಿದಂಬರರಾವ್ ಅವರು ಎತ್ತಿದ ಅನುಮಾನಕ್ಕೆ ಲೇಖಕರು ನೀಡಿದ ಉತ್ತರ:

ಯಾರೇ ದೀರ್ಘಾಯುಷಿಯನ್ನು ಆತನ ದೀರ್ಘಾಯುಷ್ಯದ ಗುಟ್ಟಿನ ಬಗ್ಗೆ ಪ್ರಶ್ನಿಸಿದಾಗ ಆತ ನೀಡುವ ಕಾರಣಗಳು ಎರಡು. ಮೊದನೆಯದು ದುಶ್ಚಟಗಳಿಂದ ದೂರವಿರುವಿಕೆ. ಎರಡನೆಯದು ಚಿತ್ತ ಶಾಂತಿಯನ್ನು ಕಳೆದುಕೊಳ್ಳದೆ ಜೀವಿಸುವಿಕೆ. ಮೊದಲ ಕಾರಣ ಆತನನ್ನು ಕೃತಕ ಸಾವಿನಿಂದ (ಅನೈಸರ್ಗಿಕ) ದೂರ ಕೊಂಡೊಯ್ದರೆ ಎರಡನೆಯ ಕಾರಣ ಆತನನ್ನು ನೈಸರ್ಗಿಕ ಸಾವಿನಿಂದ ರಕ್ಷಿಸುತ್ತದೆ. ಈ ವ್ಯಕ್ತಿಯು ತನ್ನ ಕರ್ತವ್ಯವನ್ನು ಮಾಡುತ್ತಲೇ ಇರುತ್ತಾನೆ. ಆದರೆ ಆತನ ಆಲೋಚನೆಗಳು ಯಾವಾಗಲೂ ಸ್ಪಷ್ಟವಾಗಿರುತ್ತದೆ. ಜೀವನವನ್ನು ಎದುರಿಸಲಾರದವರು ಆಲೋಚನೆಯ ಭಾರದಿಂದ ಕುಗ್ಗಿ ಬೇಗನೆ ವಯಸ್ಸಾದವರಂತೆ ಕಾಣುವದಿಲ್ಲವೇ?

ಆಹಾರವಿಲ್ಲದೆ ಹಲವಾರು ದಿನ (ಚಳಿ ನಿದ್ರೆ ಸ್ಥಿತಿಯಲ್ಲಿ) ಜೀವವನ್ನು ಹಿಡಿದುಕೊಂಡಿರಲು ಸಾಧ್ಯ, ಆದರೆ ನಿದ್ರೆಯೇ ಇಲ್ಲದಿದ್ದರೆ ಕೆಲವೇ ದಿನಗಳಲ್ಲಿ ಸಾವನ್ನಪ್ಪಬೇಕಾಗುತ್ತದೆ ಏಕೆ? ಬೆಕ್ಕು ನಾಯಿ ಇತ್ಯಾದಿ ಪ್ರಾಣಿಗಳು ತಾವು ಹೊಂದಿರುವ ಮೆದುಳಿನ ಸಾಮರ್ಥ್ಯಕ್ಕೆ ಅನುಗುಣವಾಗಿ ಯೋಚಿಸುತ್ತವೆ. ಸದಾ ಶತ್ರುವಿನ ಭಯದಲ್ಲೇ ಬದುಕಬೇಕಾಗಿರುವ ಬೀದಿ ಬೆಕ್ಕಿಗಿಂತ ಮನೆಯಲ್ಲೇ ಸಾಕಿದ ಬೆಕ್ಕು ಹೆಚ್ಚುಕಾಲ ಬದುಕಬಹುದು. ಇದೇನಿದ್ದರೂ ಕೆಲವೇ ವಾರ, ತಿಂಗಳುಗಳ ವ್ಯತ್ಯಾಸವಷ್ಟೇ. ಇದು ನಮ್ಮ ಗಣನೆಗೆ ಬಾರದೆ ಹೋಗುತ್ತದೆ.

**ಬೆಂಗಳೂರು ಪ್ರಸನ್ನ ತಂತ್ರಿ.ಕೆ**

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ



ಸಂಗ್ರಹ: ಉಮೇಶ ಕಾರಂತ

ಕಾಡುಮೇಡುಗಳಲ್ಲಿ ಅಲೆಯುತ್ತ ದಟ್ಟಡವಿಯ ಕಠಿಣತಮ ಬದುಕಿನೊಂದಿಗೇ ಒಂದಾದ ಲಮಾಣಿ ಜನಾಂಗದ ಬೆನ್ನಿಗೆ ಸಾಂಸ್ಕೃತಿಕ ಪರಂಪರೆಯೇ ಇದೆ. ವಿಶಿಷ್ಟ ಉಡುಗೆ ತೊಡುಗೆಗಳೊಂದಿಗೆ ಅಡವಿಯಲ್ಲಿ ಅಲೆದವರೀಗ ನಾಡಿನಲ್ಲಿ ನೆಲೆಯೂರತೊಡಗಿದ್ದಾರೆ. ಅತ್ಯಂತ ವರ್ಣರಂಜಿತ ಜೀವನಕ್ರಮ ರೂಢಿಸಿಕೊಂಡಿರುವ ಈ ಜನಾಂಗದ ಒಂದು ಅರ್ಥಪೂರ್ಣ ಅಧ್ಯಯನವಿಲ್ಲಿದೆ.



# ಕಾಡಲೆದವರೀಗ ನಾಡಿಗೆ ಬಂದಿದ್ದಾರೆ!

ಡಿ.ವಿ. ಬಡಿಗೇರ

ದೂರ ಪಶ್ಚಿಮದಲ್ಲಿ ನಿಧಾನವಾಗಿ ಸೂರ್ಯ ಕತ್ತಲಿನೊಳಕ್ಕೆ ಕಾಲದ್ದುತ್ತಿದ್ದಾನೆ. ಬೆಟ್ಟದ ಕಣಿವೆಯಲ್ಲಿ ಹೆಣ್ಣು ಮಗಳೊಬ್ಬಳು ಕಟ್ಟಿಗೆಯ ಹೊರೆ ಹೊತ್ತು ಓಡುತ್ತಿದ್ದಾಳೆ. ಓಡುವ ವೇಗಕ್ಕೆ, ನೆತ್ತಿಯ ಮೇಲಿನ ಭಾರಕ್ಕೆ ಈಡಾದ ಆಕೆಯ ಇಡೀ ದೇಹದಲ್ಲೊಂದು ಲಯವಿದೆ, ಕುಣಿತವಿದೆ, ಮೋಹಕತೆಯಿದೆ. ಆ ಶ್ರಮಜೀವಿಯ ಬೆನ್ನು ಹಗಲಿಡೀ ಉರಿವ ಸೂರ್ಯನ ಕಿರಣಗಳಿಗೆ ಸಿಕ್ಕು ಬೆಂದಿದ್ದರೂ, ದುಡಿದ ರಟ್ಟೆಗಳು ಸೋತಿದ್ದರೂ ಆವಳು ತೊಟ್ಟ ಲಂಗದ, ಹೊದ್ದ ಮುಸುಕಿನ, ಬಿಗಿದು ಕಟ್ಟಿದ ರವಿಕೆಯ ತುಂಬ ಹೊಳೆಯುವ ಆಗಸದ ನಕ್ಷತ್ರಗಳಂತಹ ಪುಟ್ಟ ಕನ್ನಡಿಗಳಲ್ಲಿ ಬದುಕುವ ಅದಮ್ಯ ಉತ್ಸಾಹವಿದೆ. ಏನೆಲ್ಲ ಶ್ರಮದ ನಂತರವೂ ನಗುವ ಚೈತನ್ಯವಿದೆ.

ಆಕೆ ಲಮಾಣಿ ಹೆಂಗಸು!

ಉತ್ತರದ ಗುಜರಾತವೋ, ರಾಜಸ್ಥಾನವೋ ಮತ್ಯಾವ ಗಿರಿಪರ್ವತದ ನಡುವಿನ ಊರಿನಿಂದ ಬಂದವಳೋ.... ಗೊತ್ತಿಲ್ಲ! ಆದರೆ ಎಲ್ಲಿಂದಲೋ ಬಂದವಳು ತನ್ನೊಂದಿಗೆ ಏನೆಲ್ಲ ತಂದಿದ್ದಾಳೆ. ಒಂದು ಸಂಸ್ಕೃತಿಯ, ಸಮೃದ್ಧತೆಯ, ಶ್ರಮದ



ಮತ್ತು ಚೈತನ್ಯದ ಕುರುಹಾಗಿ ನಿಂತಿದ್ದಾಳೆ ಲಮಾಣಿ ಹೆಣ್ಣುಮಗಳು !

ವಿಶೇಷವಾಗಿ ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರದ ಉದ್ದಗಲಕ್ಕೂ ಬಂದು ನೆಲೆಗೊಂಡಿರುವ ಈ ಲಮಾಣಿಗರು ಯಾರು ? ಎಲ್ಲಿಯವರು ? ಬಂದರೇಕೆ ? ಎಂದು ಬಂದವರು ? ನಮ್ಮ ನಡುವೆ ವರುಷಾನುಗಟ್ಟಲೆ ಉಳಿದರೂ ಬದಲಾಗದ ಈ ಜನಾಂಗ ನಿಜಕ್ಕೂ ಅನೇಕ ಆಸಕ್ತಿಕರ ಪ್ರಶ್ನೆಗಳನ್ನೊಡ್ಡುತ್ತದೆ. ಲಮಾಣಿಗರನ್ನು ಕುರಿತಾದ ಅಧ್ಯಯನ ಸಂಪೂರ್ಣವಾಗಿ ಆಗಿಲ್ಲವೆಂಬುದು ನಿಜವಾದರೂ ಅವರ ಬಗ್ಗೆ ಈತನಕ ತಿಳಿದುಬಂದಿರುವ ವಿವರಗಳೇ ಸಾಕಷ್ಟು ಅಚ್ಚರಿ ಹುಟ್ಟಿಸುತ್ತವೆ. ಅವುಗಳಲ್ಲಿ ಕೆಲವು ಅಂಶಗಳ ಬಗ್ಗೆ ಇಲ್ಲಿ ಚರ್ಚೆಯಿದೆ.

ಲಮಾಣಿ, ಲಂಬಾಣಿ, ಲಂಬಾಡಿ, ಸುಕಾಲ, ಬಂಜಾರಾ, ಬಣಜಾರ, ವಂಜಾರ, ಬ್ರಿಂಜಾರಿ, ಚಾರಣ, ಜೋಗಿ ಬಂಜಾರಾ, ಗವಾರ, ಶಿರಕಿವಾಲಾ ಮುಂತಾದ ವಿವಿಧ ಹೆಸರುಗಳನ್ನು ಹೊತ್ತು ಭಾರತ ದೇಶದ ಮತ್ತು ವಿಶ್ವದ ನಾನಾ ಭಾಗಗಳಲ್ಲಿ ನೆಲೆಗೊಂಡ ಲಮಾಣಿಗರು ಮೂಲತಃ ಹಿಂದುಗಳು. ಅವರದೊಂದು ಬುಡಕಟ್ಟು ಜಾತಿ. 'ಗೋರಮಾಟಿ' ಎಂಬುದು ಅವರು ತಮ್ಮ ಜಾತಿಗಿಟ್ಟುಕೊಂಡ ಹೆಸರು. ಒಂದು ಸಮೀಕ್ಷೆಯ ಪ್ರಕಾರ ಅವರಲ್ಲಿ ೧೬ ಉಪಜಾತಿಗಳಿವೆ. ('ಲಂಬಾಣಿ ಸಂಸ್ಕೃತಿ'- ಡಾ. ಪಿ.ಕೆ. ಖಂಡೋಬಾ) ಇವರ ಪೈಕಿ ಧಾಡಿ, ಧಾಲಿಯಾ, ಸನಾರ, ನಾವಿ, ಜೋಗಿ, ಮಾರವಾ, ವಾಡಿ, ರೋಹಿದಾಸ ಮುಂತಾದವರು ಅಸ್ಪೃಶ್ಯರು. ಸಾಮಾನ್ಯವಾಗಿ ಅನೇಕ ಕಡೆ ಲಮಾಣಿಗಳನ್ನು ಪರಿಶಿಷ್ಟ ಜಾತಿಯವರೆಂದು ಪರಿಗಣಿಸಿದಾಗ್ಯೂ, ಅವರು ಅಸ್ಪೃಶ್ಯರಲ್ಲವೆಂಬುದು ಗಮನೀಯ ಅಂಶ.

ಲಮಾಣಿಗರು ಮೂಲತಃ ಉತ್ತರ ಭಾರತದವರೆಂಬುದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಅವರನ್ನು ಗುಜರಾತ ಮತ್ತು ರಾಜಸ್ಥಾನಕ್ಕೆ ಸೇರಿದವರೆಂದು ಗುರುತಿಸುವ ಯತ್ನ ನಡೆದಿದೆ. ಲಮಾಣಿಗರ ಸ್ಫುರದ್ರೂಪ, ಗೌರವರ್ಣ ಮುಂತಾದವುಗಳ ಆಧಾರದ ಮೇಲೆ ಅವರನ್ನು ಆರ್ಯರ ಗುಂಪಿಗೆ ಸೇರಿಸುವ ವಾದವೂ ಮೊಳೆತು ನಿಂತಿದೆ. ಅದೇನೇ ಇರಲಿ, ವಿಂಧ್ಯದಾಚೆಗಿನ ಈ ಸುಂದರ ಸಂತತಿ ನಮ್ಮ ಈ ದ್ರಾವಿಡ ಭೂಮಿಗೆ ಬಂದುದಾದರೂ ಏಕೆ ? ಮೊದಲಿನಿಂದಲೂ ಒಂದಲ್ಲ ಒಂದು ಅವಘಡಕ್ಕೆ ತುತ್ತಾಗುತ್ತಿದ್ದ ಉತ್ತರ ಭಾರತದಿಂದ ಗುಳೇ ಎದ್ದು ಬಂದಿರಬಹುದಾದ ಈ ಅಲೆಮಾರಿ ಜನಾಂಗ ಮೂಲದಲ್ಲಿ ವ್ಯಾಪಾರಿ ಸಮೂಹವಾಗಿತ್ತೆಂಬುದು ನಿರ್ವಿವಾದ ಅಂಶ. ಸಮುದ್ರ ತೀರದಿಂದ ಕತ್ತೆ, ಎತ್ತು, ಕುದುರೆಗಳ ಮೇಲೆ 'ಲವಣ'ವನ್ನು (ಉಪ್ಪು) ಹೊತ್ತು ತರುತ್ತಿದ್ದ ಈ ಅಲೆಮಾರಿಗಳೇ ಲವಣಿಗರಾಗಿ, ಕಾಲಾಂತರದಲ್ಲಿ ಲಮಾಣಿ, ಲಂಬಾಣಿ ಇತ್ಯಾದಿ ಹೆಸರು ಪಡೆದಿರಬಹುದು. ಅಂತೆಯೇ ವಾಣಿಜ್ಯ ರಂಗದಲ್ಲಿದ್ದ 'ವಣಿಕ'ರೇ ಮುಂದೆ ವಣಜಾರರೂ, ಬಣಜಾರರೂ, ಬಂಜಾರರೂ ಆಗಿರಬಹುದು. ಒಟ್ಟಿನಲ್ಲಿ ಅಲೆಮಾರಿ ವ್ಯಾಪಾರಿಗಳಾಗಿದ್ದವರು ಈ ಜನ.

ಅಂದು ಬಸ್ಸು, ರೈಲುಗಳಿಲ್ಲದ ಕಾಲದಲ್ಲಿ ಊರಿಂದೂರಿಗೆ ಪಶುಗಳ ಮೇಲೆ ಆಹಾರ ಧಾನ್ಯ, ಜೀವನಾವಶ್ಯಕ ವಸ್ತುಗಳು ಮತ್ತು ಕೆಲವೊಮ್ಮೆ ಮುತ್ತು ರತ್ನಗಳನ್ನೂ ಹೊತ್ತು ತಂದು, ಮಾರಿ ಜೀವಿಸುತ್ತಿದ್ದ ಈ ಜನ ಕಾಲಾಂತರದಲ್ಲಿ ರೈಲು, ಬಸ್ಸುಗಳು ಹುಟ್ಟಿಕೊಂಡಾಗ ಕಂಗಾಲಾಗಿರಬೇಕು. ತಮ್ಮ ಸೋತ ಎತ್ತುಗಳ ಜೊತೆಗೆ ತಾವೂ ಈ ದ್ರಾವಿಡ ಭೂಮಿಯಲ್ಲಿ ನೆಲೆಗೊಂಡಿರಬೇಕು !

ನಿರಂತರ ಅಲೆಮಾರಿತನಕ್ಕೀಡಾದ ಮತ್ತು ತಮ್ಮ ಅಲೆದಾಟದ ವ್ಯಾಪಾರದ ಮೇಲೆ ವಿಪರೀತ ಭರವಸೆಯಿಟ್ಟುಕೊಂಡಿದ್ದ ಲಮಾಣಿಗರು ಬದಲಾದ ಕಾಲಘಟ್ಟದಲ್ಲಿ ನಿರ್ಗತಿಕರಾಗಬೇಕಾಯಿತು. ಅವರೆಲ್ಲೂ ಆಸ್ತಿ ಖರೀದಿಸಿರಲಿಲ್ಲ. ಅವರದೆನ್ನುವ ನೆಲ ಅವರಿಗಿರಲಿಲ್ಲ. ದಕ್ಷಿಣ ಭಾರತದ ಕಾಡುಗಳಲ್ಲೊ, ಇಲ್ಲಿನ ಊರುಗಳ ಅಕ್ಕಪಕ್ಕದಲ್ಲೋ



ಗುಡಿಸಲುಗಳನ್ನೆಬ್ಬಿಸಿಕೊಂಡು ಬದುಕಬೇಕಾಯಿತು.

ಇದು ಒಂದು ಸಾಧ್ಯತೆ

ಮತ್ತೊಂದು ಸಾಧ್ಯತೆಯೆಂದರೆ, ಅಂದಿನ ರಾಜರ ಸೈನ್ಯಗಳಲ್ಲಿ ವೀರ ಸೈನಿಕರಾಗಿದ್ದ ಈ ಜನಾಂಗ ತಮ್ಮ ರಾಜರನ್ನು ವೈರಿಗಳು ಸದೆಬಡಿದಾಗ ಅನಿವಾರ್ಯವಾಗಿ ಕಾಡುಪಾಲಾಯಿತು. ಹಣ್ಣುಹಂಪಲು, ಕಟ್ಟಿಗೆ, ಜೇನು ಮಾರಿಕೊಂಡು, ಮರಗಳಿಂದ ಹೆಂಡವಿಳಿಸಿಕೊಂಡು ಬದುಕಿದ್ದೂ ನಿಜವಿರಬಹುದು. ಮೊಘಲರ ಪತನದ ನಂತರ ಆ ಸೇನೆ ಚೆಲ್ಲಾಚೆದುರಾಗಿ ಕೆಲವು ತುಕಡಿಗಳು ವೃತ್ತಿಪರ ಅಪರಾಧಿ ಸಮೂಹಗಳಾದಂತೆಯೇ (ಉದಾಹರಣೆಗೆ: ಪಿಂಡಾರಿಗಳು) ಕೆಲ ಲಮಾಣಿ ಜನರು ಸಣ್ಣಪುಟ್ಟ ಅಪರಾಧಗಳನ್ನು ಮಾಡಿದ್ದಿರಬಹುದು. ಆದರೆ ಆಂಗ್ಲಪ್ರಭುಗಳು ಇಡೀ ಜನಾಂಗವನ್ನೇ ಅಪರಾಧಿ ಸಮೂಹವೆಂದು ಗುರುತಿಸಿ ಅದರ ಮೇಲೆ ಅಕ್ಷಮ್ಯ ಅತ್ಯಾಚಾರ ನಡೆಸಿದರು. ಮೊದಲೇ ಅಲೆಮಾರಿಗಳಾಗಿದ್ದವರನ್ನು, ಪೂರ್ತಿ ನೆಲೆಯಿಲ್ಲದಂತೆ ಮಾಡಿದುದು ಒಂದು ದೊಡ್ಡ ದುರಂತ. ಎಲ್ಲೇ ಕಳ್ಳತನಗಳಾದರೂ ಅವುಗಳನ್ನು ಮುಗ್ಧ ಲಮಾಣಿಗಳ ತಲೆಗೆ ಕಟ್ಟಿದ ಉದಾಹರಣೆಗಳು ಎಷ್ಟೋ ಇವೆ.

ಮತ್ತೊಂದು ಅಭಿಪ್ರಾಯದಂತೆ, ಲಮಾಣಿಗರು ಮೊಘಲ್ ಸಾಮ್ರಾಜ್ಯದ ಸೇನಾಧಿಪತಿ ಆಸಫ್ ಖಾನನೊಂದಿಗೆ ಸೈನಿಕರಾಗಿ ದಕ್ಷಿಣಕ್ಕೆ ಬಂದರಂತೆ. ಬಹುಶಃ ಯುದ್ಧದ ದಿನಗಳು ಮುಗಿದಾಗ ಇದರಲ್ಲಿ ಹೆಚ್ಚಿನವರು ಪಶುಸಂಗೋಪನೆಗೆ ತೊಡಗಿರಬೇಕು. ಲಮಾಣಿ ತಂಡದ ಒಡೆಯರು ಇಂತಿಷ್ಟು ದನಕರುಗಳನ್ನೂ, ಇಷ್ಟಿಷ್ಟು ಕುರಿಗಳನ್ನೂ ಹೊಂದಿದ್ದರೆಂಬ ಲಿಖಿತ ಐತಿಹಾಸಿಕ ದಾಖಲೆಗಳು ದೊರತಿವೆ. ವ್ಯಾಪಾರವನ್ನೇ ಮುಂದುವರೆಸಿ ಊರು ಸೇರಿದವರು ಶ್ರೀಮಂತರಾಗಿ ಮಾರವಾಡಿಗಳಾದರೆಂದೂ, ಕೈ ಸೋತು ಕಾಡುಸೇರಿದ ಬಡವರು ಲಮಾಣಿಗಳಾದರೆಂದೂ ಹೇಳುವುದುಂಟು. ಈ ಎರಡೂ ಜನಾಂಗಗಳ ವೇಷ, ಭಾಷೆ, ಸಂಪ್ರದಾಯಗಳಲ್ಲಿ ಕೊಂಚ ಸಾಮ್ಯ ಕಂಡುಬರುವುದು ನಿಜವೇ ಆದರೂ ಮೇಲಿನ ವಾದಕ್ಕೆ ಮತ್ತಾವ ಪುಷ್ಟಿಯೂ ಇಲ್ಲ.

ಕೇವಲ ಹಿಂದೂಸ್ತಾನದಲ್ಲೇ ಅಲ್ಲದೆ ಲಮಾಣಿಗಳು ಜಗತ್ತಿನ ಐವತ್ತಕ್ಕಿಂತ ಹೆಚ್ಚು ದೇಶಗಳಲ್ಲಿ ನೆಲೆಗೊಂಡಿದ್ದಾರೆನ್ನಲಾಗಿದೆ. ರುಮಾನಿಯಾ, ಹಂಗರಿ, ಜರ್ಮನಿ, ಸ್ಪೇನ್ ಮುಂತಾದ ದೇಶಗಳಲ್ಲಿ ನೆಲೆಸಿರುವ ಲಮಾಣಿಗಳನ್ನು ಜಿಪ್ಸಿ, ಸಿಂಧಿ, ರೋಮಾನೊಗಳೆಂದು ಕರೆಯುತ್ತಾರೆಂಬುದಾಗಿ ಶಾಸಕಿ ಬಿ.ಟಿ. ಲಲಿತಾನಾಯಕ್ ಅವರು ಒಂದೆಡೆ ಹೇಳಿದ್ದಾರೆ.

ಲಮಾಣಿ ಎಂಬ ಹೆಸರು ಕೇಳಿದೊಡನೆ ಕೈತುಂಬ ವಿಚಿತ್ರವಾದ ದಂತದ ಬಳೆ ಧರಿಸಿ, ಹಣೆಯ ಮೇಲೆ ಜಾರಿದ ಕೂದಲ ಕುಚ್ಚಿಗೆ ಬೆಳ್ಳಿಯ ಆಭರಣ ನೇತಾಡಿಸಿ ಮೈತುಂಬ ಕನ್ನಡಿ ಮೆತ್ತಿಕೊಂಡ ಲಂಗ, ಅರೆ ಮುಚ್ಚಿದ ಬೆನ್ನು ಮತ್ತು ಬೆಳ್ಳನೆಯ ಮೈಯ್ಯಲ್ಲಿ ಅರಳಿ ನಿಂತ ಹಚ್ಚೆಗಳಿಂದ ಸಿಂಗರಗೊಂಡ ಹೆಂಗಸೊಬ್ಬಳ ಚಿತ್ರ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ಬಣ್ಣದ ಬಟ್ಟೆ, ಕನ್ನಡಿ, ಬಳೆ, ಆಭರಣಗಳ ಅಲಂಕಾರ ಈ ಬುಡಕಟ್ಟಿನ ವೈಶಿಷ್ಟ್ಯ ಮಾತ್ರವಲ್ಲ........ ಅದರ ಸೌಂದರ್ಯವೂ ಹೌದು. ಎಲ್ಲಿದ್ದರೂ ಅವರನ್ನು ಗುರುತಿಸಬಹುದು. ಆ ಶ್ರದ್ಧೆಯನ್ನು ಅಭಿನಂದಿಸಬಹುದು. ವಿಶೇಷವೆಂದರೆ ಭಾರತದ ಮತ್ತಾವ ಬುಡಕಟ್ಟಿನ ಜನರೂ ಈ ತೆರನಾದ ಸಾಂಪ್ರದಾಯಿಕ ಉಡುಪನ್ನು ಉಳಿಸಿಕೊಂಡು ಬಂದಿಲ್ಲ.

ಲಮಾಣಿ ಹೆಂಗಸರು ಧರಿಸುವ ಲೆಹಂಗಾ, ಫೇಟಿಯಾ, ಕಾಂಚಳಿ, ಛಾಂಟಿಯಾ, ಕಾಲ ಕಡಗ, ಪಟಿಯಾ, ವಾಂಕಳ, ಘುಗರಿ, ಟೋಪ್ಲಿ, ಚೋಟ್ಲಿ ಇತ್ಯಾದಿಗಳೆಲ್ಲ ಈ ಜನಾಂಗಕ್ಕೆ ಸೌಂದರ್ಯದ ಕಳಶವನ್ನಿಟ್ಟ ಆಭರಣಗಳು. ಒಂದೊಂದು ಬಗೆಯ ಆಭರಣವೂ, ಒಂದೊಂದು ಬಗೆಯ ಉಡುಪೂ



ಆ ಹೆಣ್ಣುಮಗಳ ಶ್ರದ್ಧೆಯ ಸಂಕೇತಗಳೇ! ಲಮಾಣಿ ಮಹಿಳೆ ತನ್ನ ಉಡುಪಿನ ಹೆಚ್ಚಿನ ಭಾಗವನ್ನು ತಾನೇ ತಯಾರಿಸಿಕೊಳ್ಳುತ್ತಾಳೆ.

ಸುಮ್ಮನೆ ಕದಲಿದರೆ ಸಾಕು ಜಲ್‌ಝಲ್ಲನೆ ಸದ್ದುಮಾಡಿ ಮುದವುಂಟುಮಾಡುವ ಆಭರಣಗಳು ಒಂದೆಡೆಯಾದರೆ, ಸೂರ್ಯನ ಕಿರಣಗಳಿಗೆ ಪ್ರತ್ಯುತ್ತರವಾಗಿ ಫಳಗುಡುವ ಕನ್ನಡಿ ಕಣ್ಣಿನ ಆಕೆಯ ಲಂಗ, ಅಂಗಿಗಳು ಮತ್ತೊಂದೆಡೆ. ಹಿಂದೊಮ್ಮೆ ಯುದ್ಧಕ್ಕೆ ಹೋದ ಯೋಧ ಅಲ್ಲಿ ಹತನಾದನಂತೆ. ಇತ್ತ ಅವನ ಬರುವಿಕೆಗಾಗಿ ಕಾದು ಕೂತ ಆತನ ಮಡದಿ ತನ್ನ ಉಡುಪನ್ನು ಹೊಲೆಯುಕೊಳ್ಳುತ್ತಿದ್ದಳು. ಉಡುಪು ಅರ್ಧಕ್ಕೇ ನಿಂತಿತು. ಆಕೆ ಪತಿಯೊಡನೆ ಚಿತೆಯೇರಿದಳು. ಅವಳನ್ನು ಗೌರವ ಪೂರ್ವಕವಾಗಿ ಕಂಡ ಇತರೆ ಲಮಾಣಿ ಮಹಿಳೆಯರು ಅವಳಂತೆಯೇ ಸಿಂಗರಿಸಿಕೊಂಡರು. ಅವಳು ಅರೆಬರೆಯಾಗಿ ಸಿದ್ಧಪಡಿಸಿಟ್ಟ ಉಡುಪೇ ಇವರಿಗೂ ಮಾದರಿಯಾಯಿತು. ಅಂತೆಯೇ ...ಲೂ ಈ ಹೆಂಗಸರು ಅರೆಬರೆಯಾಗಿ ಮೈಮುಚ್ಚುವ ಉಡುಪು ಧರಿಸುತ್ತಾರೆಂಬ ನಂಬಿಕೆಯೊಂದಿದೆ.

ಈ ತೆರನಾದ ಬಣ್ಣದ ಉಡುಪು ಸಾಲದೆಂಬಂತೆ ಲಮಾಣಿ ಹೆಂಗಸರು ತೋಳು, ಕೈ, ಮುಖಗಳ ಮೇಲೆ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಹಿಂದೆ ಬಣಗಳಲ್ಲಿ ಜೀವಿಸುತ್ತಿದ್ದ ಜನರು ಒಂದು ಬಣದಿಂದ ಮತ್ತೊಂದು ಬಣಕ್ಕೆ ಹುಡುಗಿಯನ್ನು ಬಲವಂತವಾಗಿ ಹೊತ್ತು ತಂದು ವಿವಾಹವಾಗುವ ಪದ್ಧತಿಯಿತ್ತು. ಹಾಗೆ ತಂದ ಹುಡುಗಿ ಓಡಿ ಹೋಗದಿರಲೆಂದು ಕೈಕಾಲುಗಳಿಗೆ ಭಾರದ ಹಿತ್ತಾಳೆ ತಟ್ಟೆಗಳನ್ನೂ, ಕೋಳ, ಬೇಡಿಗಳನ್ನೂ ತೊಡಿಸುತ್ತಿದ್ದರು. ಆ ಕೋಳ-ಬೇಡಿಗಳೇ ಕಾಲಾಂತರದಲ್ಲಿ ಹೆಂಗಸರ ಗೌರವದ ಲಾಂಛನಗಳಾದ ತಾಳಿ, ಬಳೆ, ಕಾಲುಂಗುರ, ಗೆಜ್ಜೆ ಇತ್ಯಾದಿಗಳಾದವೆಂಬ ವಾದವೂ ಒಂದಿದೆ. ಅದನ್ನು ಅನುಮೋದಿಸಿದವರಿಗೆ ಲಮಾಣಿ ಮಹಿಳೆಯರ ಭಾರದ ಆಭರಣಗಳಿಗೆ ಅರ್ಥ ಸಿಗುವುದೂ ಉಂಟು. ಆದರೆ ಇತ್ತೀಚೆಗೆ ಈ ವಿಶಿಷ್ಟ ಉಡಿಗೆ ಕೇವಲ ಅನಕ್ಷರಸ್ಥ ಲಮಾಣಿಗರಿಗೇ ಸೀಮಿತವಾಗತೊಡಗಿದೆ. ಕಲಿತವರು ನಿಧಾನವಾಗಿ ಈ ಎಲ್ಲ ಸೊಬಗನ್ನು ಕೈಬಿಡತೊಡಗಿದ್ದಾರೆ. ನಾಗರಿಕತೆಗೂ ಸಂಸ್ಕೃತಿಯನ್ನು ನಾಶಗೊಳಿಸುವ ಶಕ್ತಿಯಿದೆ ನೋಡಿ!

ದೇಶದಾದ್ಯಂತ ಚೆದುರಿಹೋದ ಲಮಾಣಿಗರಲ್ಲಿ ಆಯಾ ರಾಜ್ಯಗಳಿಗೆ ತಕ್ಕ ಹಾಗೆ ಸಾಂಸ್ಕೃತಿಕ ಜೀವನ ವಿಧಾನಗಳ ಬದಲಾವಣೆ ಗೋಚರವಾಗಿದ್ದರೂ, ಮದುವೆಗೆ ಸಂಬಂಧಿಸಿದಂತೆ ದೇಶವಿಡೀ ಲಮಾಣಿಗಳು ಒಂದೇ ಸಂಪ್ರದಾಯವನ್ನು ಅನುಸರಿಸುವುದು ವಿಶಿಷ್ಟ. ಸಗೋತ್ರ ವಿವಾಹವು ನಿಷಿದ್ಧವೆನ್ನಲಾದ ಲಮಾಣಿಗಳಲ್ಲಿ 'ಜಾತ್' ಮತ್ತು 'ಭುಕ್ಯಾ' ಎಂಬೆರಡು ಪ್ರಮುಖ ಗೋತ್ರಗಳಿವೆ. ವರದಕ್ಷಿಣೆಯ ಹಾವಳಿಯಿಂದ ಇತ್ತೀಚಿನ ತನಕ ದೂರವೇ ಉಳಿದಿದ್ದ ಲಮಾಣಿ ತಾಂಡೆಗಳಲ್ಲಿ ಅದಕ್ಕೆ ಪ್ರತಿಯಾದ ಕನ್ಯಾ ಶುಲ್ಕದ ಪದ್ಧತಿ ಇದೆ. ಕನ್ಯಾ ಶುಲ್ಕವನ್ನು ಅವರು ಕರಾರ್ ಎಂದು ಕರೆಯುತ್ತಾರೆ. 'ಡಾಂಸಡೀ' ಕರಾರ್ ಎಂಬುದು ಪಶುಗಳ ರೂಪದಲ್ಲಿ ಕೊಡಲಾಗುವ ಕನ್ಯಾ ಶುಲ್ಕವಾಗಿದ್ದು 'ವಾಂಸಳೀ' ಕರಾರ್ ಎಂಬುದು ಹಣದ ರೂಪದಲ್ಲಿ ಕೊಡುವಂತಹುದಾಗಿರುತ್ತದೆ. ಮದುವೆಗಳು ಹಿರಿಯರ ನಿರ್ಧಾರದಂತೆಯೇ ಆಗುತ್ತವೆ. ಕಾನಸಾಮಳಿ, ಸಾಕ್, ಸಕ್ರಿ ಕಾರ್ಯ, ಸಗಾಯಿ ಅಥವಾ ಗೋಳ ಖಾಮೇರೋ ಮುಂತಾದವುಗಳು ಮದುವೆಯ ಪೂರ್ವದ ಒಪ್ಪಿಗೆ, ವೀಳ್ಯದ ಶಾಸ್ತ್ರಗಳನ್ನು ಹೋಲುವಂತಹ ಸಮಾರಂಭಗಳಾಗಿದ್ದು, ನಿಜವಾದ ಮದುವೆ ನಾಲ್ಕಾರು ದಿನಗಳ ಕಾಲ ನಡೆಯುತ್ತದೆ. ಬೆಳದಿಂಗಳ ರಾತ್ರಿಗಳಲ್ಲಿ ಅತ್ಯಂತ ಸಡಗರದಿಂದ ಸಾಗುವ ಮದುವೆಗಳಲ್ಲಿ ಸಾರಾಯಿ ಹಂಚಿಕೆಯದು ದೊಡ್ಡ ಪಾತ್ರ. ಮನಸಾರೆ ಕುಡಿದು, ಹಾಡಿ, ಕುಣಿದು ನಲಿಯುವ ಲಮಾಣಿಗಳು ತಮ್ಮ ಬುಡಕಟ್ಟು ಸ್ವರೂಪಗಳನ್ನು ವ್ಯಕ್ತಪ



ಡಿಸುವುದೂ ಇಂಥ ಸಂದರ್ಭಗಳಲ್ಲೇ.

ಅದ್ದೂರಿಯಾಗಿ ಸಿಂಗರಿಸಿಕೊಂಡು ಬರುವ ಗಂಡು ಒಂದೆಡೆಯಾದರೆ, ರೋದಿಸುತ್ತ ತೀರ ಸರಳ ಉಡುಪಿನಲ್ಲಿ ಮುನಿದು ಕೂಡುವ ಹುಡುಗಿ ಮತ್ತೊಂದೆಡೆ. ತನ್ನ ತಾಂಡೆ, ಗೆಳತಿಯರು ಮತ್ತು ತಂದೆ ತಾಯಂದಿರನ್ನು ತೊರೆದು ಹೋಗುವ ದುಃಖದಲ್ಲಿ ಹುಡುಗಿ ನೊಂದು ಮುದ್ದೆಯಾಗುತ್ತಾಳೆ. ಅವಳು ತನ್ನೆಲ್ಲ ದುಃಖವನ್ನು ಮದುವೆಯ ಕೊನೆಯಲ್ಲಿ ಬೀಳ್ಕೊಡುವ ಸಮಾರಂಭವಾದ 'ಹವೇಲಿ'ಯಲ್ಲಿ ತೋರ್ಪಡಿಸುತ್ತಾಳೆ. ಹೆತ್ತವರು ಕೊಟ್ಟ ಹಸುವಿನ ಮೇಲೆ ನಿಂತು ಕೈಗಳನ್ನೆತ್ತಿ ಗೋಳೋ ಎಂದಳುತ್ತಾಳೆ. ಅಲೆಮಾರಿ ತಂಡಗಳಾಗಿದ್ದರಿಂದ ಮತ್ತೊಮ್ಮೆ ತನ್ನವರನ್ನು ನೋಡುತ್ತೇನೋ ಇಲ್ಲವೋ ಎಂಬ ದಿಗಿಲು ಅವಳನ್ನು ಸಹಜವಾಗಿಯೇ ಆಳಿಸುತ್ತದೆ.

ಲಮಾಣಿಗರಲ್ಲಿ ಮದುವೆಗೆ ಸಂಬಂಧಪಟ್ಟಂತೆ ಅತಿಯಾದ ಮಡಿವಂತಿಕೆಗಳಿಲ್ಲ. ಗಂಡನನ್ನು ಕಳೆದುಕೊಂಡವಳು ಗಂಡನ ಸೋದರನನ್ನು ಮದುವೆಯಾಗಬಹುದು. 'ಕೂಡಿಕೆ ಮದುವೆ' ಮತ್ತು ಬಹುಪತ್ನಿತ್ವಗಳೂ ವಿರಳವಲ್ಲ. ಹೆಣ್ಣುಮಕ್ಕಳಲ್ಲೂ ಮರುಮದುವೆಗಳು ಸಹಜ. ಮಕ್ಕಳಾಗಲಿಲ್ಲವೆಂಬ ಕಾರಣಕ್ಕೂ ಬೇರೆ ಮದುವೆಯಾಗಬಹುದು ಎಂಬ ವಿನಾಯತಿ ಲಮಾಣಿಗರಿಗಿದೆ.



ಕಾಡುಮೇಡು ಅಲೆದು ಬಂದ ಲಮಾಣಿಗಳು ಇತ್ತೀಚೆಗೆ ಊರುಗಳಿಗೆ ಬಂದು ನೆಲೆಗೊಳ್ಳುತ್ತಿದ್ದಾರೆ. ಆದರೆ ಸಂಪೂರ್ಣವಾಗಿ ಊರೊಳಕ್ಕೆ ಬರುವುದಿನ್ನೂ ಅವರಿಗೆ ಸಾಧ್ಯವಾಗಿಲ್ಲ. ಲಮಾಣಿಗಳು ಅಸ್ಪೃಶ್ಯರೇನಲ್ಲ. ಆದರೆ ಅವರು ವಾಸವಾಗಿರುವುದು ಹಳ್ಳಿಗಳಿಂದ ಕೊಂಚ ದೂರದ ತಮ್ಮ 'ತಾಂಡೆ' ಅಥವಾ 'ಹಟ್ಟಿ'ಗಳಲ್ಲಿ. ತುಂಬ ಶ್ರಮಜೀವಿಗಳಾದ ಲಮಾಣಿಗರು ಇವತ್ತಿಗೂ ಹುಲ್ಲು, ಸೌದೆ, ಜೇನು ತಂದು ನಗರಗಳಲ್ಲಿ ಮಾರುತ್ತಾರೆ. ಕುರಿ ಕಾಯುತ್ತಾರೆ. ದನ ಸಾಕುತ್ತಾರೆ. ಹೆಂಡವಿಳಿಸಿ ಮಾರುವುದೂ, ತಮ್ಮದೇ ಆದ ಭಟ್ಟಿಗಳಲ್ಲಿ ಮಾದಕ ಪಾನೀಯವಿಳಿಸಿ ಮಾರುವುದೂ ಈಗೀಗ ಕಡಿಮೆಯಾಗುತ್ತಿದೆ. ಜೊತೆಗೆ ಅರಣ್ಯ ಇಲಾಖೆಯವರ ಕಿರಿಕಿರಿಗಳು ಈ ಮುಗ್ಧರನ್ನು ಕಾಡುಗಳಿಂದ ಹೊರಗಟ್ಟಿವೆ. ಆದರೆ ಊರುಗಳಿನ್ನೂ ಒಳಕ್ಕೆ ಕರೆದುಕೊಂಡಿಲ್ಲ. ಪುರುಷರಿಗಿಂತ ಹೆಚ್ಚು ಶ್ರಮಜೀವಿಗಳಾದ ಲಮಾಣಿ ಮಹಿಳೆಯರು ದಿನವಿಡೀ ದುಡಿಯುತ್ತಾರಾದರೂ, ಅವರದು ಮಾತೃಪ್ರಧಾನ ಕುಟುಂಬವಲ್ಲ.

ಲಮಾಣಿಗರಿಗೆ ಅವರದೇ ಆದ ದೈವ, ದೇವರು, ನಂಬಿಕೆಗಳಿವೆ. ಆದರೆ ಇತರ ಜಾತಿಗಳವರಂತೆ ಇವರು ದೇವರ ಕೋಣೆಗಳಿಗೆ ಗಂಟುಬಿದ್ದವರಲ್ಲ.

ಲಮಾಣಿಗರ ಕುಲದೇವರು ಸೇವಾಭಾಯ್. ಇವನಿಗೆ ಸೇವಾಲಾಲ್, ಬಾಲಾಜಿ ಎಂತಲೂ ಹೆಸರು. ಸೇವಾ ಭಾಯ್‌ನ ಬಗ್ಗೆ ಅನೇಕ ಕಥೆಗಳು, ಹಾಡುಗಳು ಇವೆ. ಸೇವಾಭಾಯಿ ಬ್ರಹ್ಮಚಾರಿ. ಲಮಾಣಿಗರಿಗೋಸ್ಕರ ಮತ್ತು ಅವರ ಶ್ರೇಯಸ್ಸಿಗೋಸ್ಕರ ದುಡಿದು ಮಡಿದವನು.



ಮಹಾರಾಷ್ಟದ ಜೋಧಪುರಫಡದಲ್ಲಿ ಸೇವಾ ಭಾಯಿಯ ದೊಡ್ಡ ದೇವಸ್ಥಾನ ಇದೆ. ರಾಮನವಮಿ ಮುಂದೆ ದೊಡ್ಡ ಜಾತ್ರೆ ನಡೆಯುತ್ತದೆ. ಆಗ ದೇಶದ ನಾನಾ ಭಾಗಗಳಿಂದ ಲಮಾಣಿ ಜನರು ಇಲ್ಲಿ ಸೇರುತ್ತಾರೆ. ಸೇವಾಭಾಯಿಯ ತಾಯಿ ಧರ್ಮಿಣಿ ಮಾತಾ. ತಂದೆ ಭೀಮಾನಾಯಕ. ಈ ಪರಂಪರೆಯ ಸದ್ಯದ ಗುರು ರಾಮರಾವ. ಇವರೂ ಸಹ ಬ್ರಹ್ಮಚಾರಿ. ಇವರು ಆಹಾರ ಸೇವಿಸುವದಿಲ್ಲ. ಕೇವಲ ಹಣ್ಣು, ಹಾಲು, ಶೇಂಗಾ ಬೀಜ, ಬೇವಿನ ರಸ ಸೇವಿಸುವರು.

ಲಂಬಾಣಿಗರ ಕುಲದೇವತೆ ಮೀಟುಭುಕ್ಯ. ಸಾಮಾನ್ಯವಾಗಿ ಈ ದೇವತೆಯನ್ನು ಎಲ್ಲರೂ ಪೂಜಿಸುವರು. ಅಲ್ಲದೆ ಕೆಲವು ತಾಂಡಾಗಳಲ್ಲಿ ಮರಿಯವ್ವ (ದುರ್ಗವ್ವ), ದ್ಯಾಮವ್ವ ಮುಂತಾದ ಗ್ರಾಮ ದೇವತೆಗಳನ್ನು ಸಹ ಪೂಜಿಸುವರು. ಇವರ ದೇವಸ್ಥಾನಗಳ ಎದುರು ಸಾಮಾನ್ಯವಾಗಿ ಎರಡು ಬಾವುಟಗಳು ಕಂಡುಬರುತ್ತವೆ. ಒಂದು ಬಿಳಿ ಬಣ್ಣದ್ದು; ಮತ್ತೊಂದು ಕೆಂಪು ಬಣ್ಣದ್ದು. ಬಿಳಿ ಬಾವುಟ ಸೇವಾಲಾಲನ ಚಿಹ್ನೆ, ಕೆಂಪು ಬಾವುಟ ಮರಿಯಮ್ಮನ ಚಿಹ್ನೆ. ಈ ದೇವತೆಗಳನ್ನಲ್ಲದೇ ಲಂಬಾಣಿಗರು ಕೆಲವು ಭೂತ-ಪ್ರೇತಗಳನ್ನೂ ಆರಾಧಿಸುವರು. ದೆವ್ವಗಳ ಮತ್ತು ದೇವರ ಸಂಪ್ರೀತಿಗಾಗಿ ಕುರಿ-ಕೋಳಿಗಳನ್ನು ಬಲಿಕೊಡುತ್ತಾರೆ.

'ಲಮಾಣಿ'ಗರ ಹಾಡು, ನೃತ್ಯ, ಕುಣಿತ ಅತ್ಯಂತ ಆಕರ್ಷಕ, ಅರ್ಥಪೂರ್ಣವಾದವುಗಳು. ಮದುವೆ, ಹಬ್ಬ, ಹುಣ್ಣಿಮೆ, ಜಾತ್ರೆ, ನಾಮಕರಣ ಇತ್ಯಾದಿ ಸಂದರ್ಭಗಳಲ್ಲಿ ನರ್ತಿಸುತ್ತ ವಿಶಿಷ್ಟ ಬಗೆಯ ಹಾಡುಗಳನ್ನು ಹಾಡುವರು. ಲಮಾಣಿ ಹಾಡುಗಳು ಲಯ, ಪ್ರಾಸ, ಉಪಮೆ, ಅರ್ಥ, ಅಲಂಕಾರ ಮುಂತಾದ ಎಲ್ಲ ಸಾಹಿತ್ಯಿಕ ಮೌಲ್ಯಗಳನ್ನು ಒಳಗೊಂಡಿವೆ. ಇನ್ನು ಕುಣಿತಗಳಂತೂ ಕಣ್ಣಿಗೆ ಹಬ್ಬ ಉಂಟುಮಾಡುವಷ್ಟು ಮೋಹಕ. ಪ್ರತಿದಿನ ಸಂಜೆ ತಾಂಡಾದಲ್ಲಿ ಹಾಡಿ ಕುಣಿಯುವರು. ಪೂರ್ಣ ವೃತ್ತ, ಅರ್ಧವೃತ್ತ ಇತ್ಯಾದಿ ಕುಣಿತಗಳಲ್ಲಿ ಅನೇಕ ವಿಧಗಳುಂಟು. ಹಬ್ಬ, ಉತ್ಸವ, ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಹೊಸ ವೇಷ-ಭೂಷಣ ತೊಟ್ಟು ಹರ್ಷೋದ್ಗಾರಗಳೊಂದಿಗೆ "ಆಡಿ ಆಡಿ ಬಾಪುರೆ, ಗ್ವಾಡಿ ಹತ್ತಿ ನೋಡಿರೆ' ಎಂದು ಹಾಡುತ್ತ ಕುಣಿಯುವರು.

ಈ ಜನ ತಮ್ಮ ಭಾಷೆಯ ಹಾಡುಗಳನ್ನಲ್ಲದೆ ಕನ್ನಡದ ಹಾಡುಗಳನ್ನೂ ಹಾಡುವರು. ಇವರ ಗೀತೆಗಳೆಲ್ಲ 'ಬಾಯಿಯೇ' ಎಂಬ ನುಡಿಯೊಂದಿಗೆ ಆರಂಭವಾಗುವವು. ರಾಮಾಯಣ, ಮಹಾಭಾರತ ಪ್ರಸಂಗಗಳು ಇವರ ಹಾಡಿನಲ್ಲಿ ಬರುತ್ತವೆ. ಕುಲ ಗುರು ಸೇವಾಲಾಲನ ಕುರಿತು ಅನೇಕ ಹಾಡುಗಳು ಇವೆ.

"ಸೇವಾ ಭಾಯ್ ಚಾಲೋರೆ
ಸ್ವರ್ಗಕೇನ ಸಾಥ ಯಾಡೀನ ಶೋಭತಲೇನ"

ಸೇವಾಭಾಯಿ ಸ್ವರ್ಗಕ್ಕೆ ಹೊರಟಿದ್ದಾನೆ. ಅವರ ಜೊತೆ ಯಾಡಿಯರು ಸಹ ಎಂಬುದು ಈ ಹಾಡಿನ ಅರ್ಥ.

ಹೆಣ್ಣು ತವರಿಗೆ ಹೋಗುವಾಗ ಹಾಡುವ
'ಹಾವೇಲಿಯೋ ಆಸಿಸ್ಯಾ
ಹರಿರೀಸೆ ಹರಿಯಾಳಿ ರೇಸೀಯೀ.......
ಮಾರಿಯ ನಾಯಿಂಕೆ ಬಾ ಬಾಲೇರಿ ನಂಗಾರಿ
ಧೂದೂ ಆಯೀಸೆ ಪೂತೂ ಸಾಳೀಸೆ
ಮಾರಿಯೇ
ವದೇ ಲಾಜೂ ವದೇನ್ ಫೂಲರಾಜು
ಫಲೇಸೆಯ ಮಾರ
ನಾಯೀಕ್ ಬಾ ಬಾಲೇರಿ ನಂಗಾರಿ" ಎಂಬ
ಹಾಡಿನ ಅರ್ಥ: ಕರಕಿಯ ಕುಡಿಯಂತೆ,
ಹಾಲೂ-ಜೇನಿನಂತೆ ತವರಿನ ತಂಡ ಬೆಳೆಯಲಿ
ಎಂಬುದಾಗಿದೆ.

ಲಮಾಣಿಗರು ಆಚರಿಸುವ ಪ್ರಮುಖ ಹಬ್ಬಗಳೆಂದರೆ ದೀಪಾವಳಿ (ದವಾಳಿ), ಹೋಳಿ, ಮಹಾನವಮಿ, ಯುಗಾದಿ ಮುಂತಾದವು. ಈ ಹಬ್ಬಗಳ ಸಂದರ್ಭದಲ್ಲಿ ವಿಶೇಷ ಹಾಡು ಹಾಡುತ್ತಾರೆ.



ಮಳೆ ಬರದಿದ್ದಾಗ ಇವರು ಮಳೆರಾಯನ ಕುರಿತು ಕೆಲವು ಹಾಡು ಹಾಡುವರು. ಬೇರೆ ಜಾತಿಯ ಜನ ಸಹಿತ ಲಂಬಾಣಿಗರಿಂದ ಹಾಡಿಸಿದರೆ ಮಳೆ ಬರುವದೆಂಬ ನಂಬಿಕೆಯಿಂದ ಇವರನ್ನು ಹಾಡಲು ಕರೆಸುವರು.

ಲಮಾಣಿಗರು ಮಕ್ಕಳ ನಾಮಕರಣ ಹಾಗೂ ಜಾವಳ ಕಾರ್ಯಕ್ರಮಗಳನ್ನು ಬಹಳ ಸಡಗರದಿಂದ ಮಾಡುವರು. ಇವರಲ್ಲಿ ಸಂಸ್ಕಾರ ಪದ್ಧತಿ ಕೂಡ ವಿಚಿತ್ರವಾಗಿದೆ. ಸತ್ತ ವ್ಯಕ್ತಿಯ ಕಾಲನ್ನು ಇವರಲ್ಲಿ ಮಡಚುವದಿಲ್ಲ. ಶವಕ್ಕೆ ತಣ್ಣೀರಿನ ಸ್ನಾನ ಮಾಡಿಸುವರು. ಸುಡುವ ಹಾಗೂ ಹೂಳುವ ಎರಡೂ ಪದ್ಧತಿ ಇವರಲ್ಲಿದೆ. ದಾರಿ ಖರ್ಚಿಗೆ ಎಂದು ಹೆಣದ ಕಾಲಿಗೆ ಕಾಸನ್ನು ಬಿಳಿ ಬಟ್ಟೆಯಲ್ಲಿ ಕಟ್ಟುವರು ಪಿಂಡದ ಪದ್ಧತಿಕೂಡ ಇವರಲ್ಲಿ ಉಂಟು.

ಇಷ್ಟೆಲ್ಲ ಸಂಸ್ಕೃತಿ, ಹಿನ್ನೆಲ, ಇತಿಹಾಸಗಳುಳ್ಳ ಲಮಾಣಿಗರು ಆಡುವ ಭಾಷೆ ಗೋಡಬೋಲಿ. ಇದೊಂದು ತೆರನಾದ ಮಿಶ್ರಭಾಷೆ. ಇದಕ್ಕೆ ಲಿಪಿಯಿಲ್ಲ. ಆಯಾ ಪ್ರಾಂತ್ಯದ ಲಿಪಿಯನ್ನೇ ಇದಕ್ಕೆ ಬಳಸಲಾಗುತ್ತಿದೆ. ಲಮಾಣಿಗರಾದರೂ ಆಯಾ ಪ್ರಾಂತ್ಯದ ಮುಖ್ಯ ಸಾಂಸ್ಕೃತಿಕ ಪ್ರವಾಹಕ್ಕೆ ಒಳಗಾಗುತ್ತಿದ್ದಾರೆ. ಆದರೆ ಇತ್ತೀಚೆಗಷ್ಟೆ ಇವರನ್ನು ಸಂಘಟಿಸುವ ಯತ್ನಗಳು ನಡೆದಿವೆ. ಸಂಘಟನೆ ಮಾತ್ರ ಅವರ ಭವಿತವ್ಯ ರೂಪುಗೊಳಿಸೀತು.

**(ಆಧಾರ ಗ್ರಂಥ: 'ಲಂಬಾಣಿ ಸಂಸ್ಕೃತಿ'- ಡಾ. ಪಿ.ಕೆ.ಖಂಡೋಬಾ)** ★

## - 146 -

# ಶಬ್ದಗಳ ವಿಚಿತ್ರ ಯಾತ್ರೆ: ದಾದಿಯೆಂದರೆ ಮೊಲೆಯೂಡುವವಳು; 'ನರ್ಸ್' ಎಂದರೂ ಅವಳೇ

**ಭಾ**ಷೆಯಿಂದ ಭಾಷೆಗೆ ಶಬ್ದಗಳು ಎರವಲು ಹೋದಾಗ ಬಹುತರವಾಗಿ ಅವುಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಆದರೆ ಕೆಲವೊಮ್ಮೆ ಈ ಕೆಲಸ ದುಷ್ಕರ. ಉದಾಹರಣೆಗೆ ತಮಿಳಿನಲ್ಲಿ 'ಅವೈ' ಎಂಬ ಪದ ಇದೆ. ಇದರ ಅರ್ಥ ಸಭೆ ಆಗಲಿ, ಅದಕ್ಕೇನು ಎನ್ನುತ್ತೀರಿ? ಆದರೆ ಅದು 'ಸಭಾ' ಶಬ್ದದ್ದೇ ತದ್ಭವ ಎಂದು ಹೇಳಿದರೆ ಮಾತ್ರ ನಂಬುವುದು ಕಷ್ಟವಾಗುತ್ತದೆ. ಇದಕ್ಕೆ ಕಾರಣ ತಮಿಳು ಭಾಷೆಯಲ್ಲಿ ಸಂಸ್ಕೃತದ 'ಸ'ಕಾರವೂ ಇಲ್ಲ; 'ಭ'ಕಾರವೂ ಇಲ್ಲ. ಆದ್ದರಿಂದ ಎರವಲು ಪದವನ್ನು ತಮ್ಮ ವರ್ಣ ಪದ್ಧತಿಗೆ ಒಗ್ಗುವಂತೆ ಅವರು ಬದಲಾವಣೆ ಮಾಡಿಕೊಂಡರು. 'ಸ'ಕಾರವನ್ನು ಕೈಬಿಟ್ಟರು; ಅದರಲ್ಲಿನ 'ಅ' ಎಂಬ ಸ್ವರವನ್ನು ಮಾತ್ರ ಉಳಿಸಿಕೊಂಡರು. 'ಭಾ' ತಮಿಳಿನಲ್ಲಿ ಕನ್ನಡದಲ್ಲಿನಂತೆ 'ಭೆ' ಆಗಿ, 'ಭ' ತಮಿಳಿನಲ್ಲಿಲ್ಲದ್ದರಿಂದ ಅದನ್ನು ಹತ್ತಿರದ 'ವ'ಕಾರಕ್ಕೆ ತಿರುಗಿಸಿಕೊಂಡರು. (ಭ-ವಗಳ ಅದಲು ಬದಲು ತಮಿಳಿನಲ್ಲಿ ಮಾತ್ರವಲ್ಲ, ಬಂಗಾಲಿಯಲ್ಲೂ ಆಗುತ್ತದೆ. ಅವರು 'ಅಭಿಮನ್ಯು'ವನ್ನು 'ಅವಿಮನ್ಯು' ಎಂದು ಬರೆಯುವುದುಂಟು). ಈ 'ಸ'ಕಾರದ ಅಭಾವದಿಂದಾಗಿ ತಮಿಳರು 'ಸಂಧಿ' ಪದವನ್ನು 'ಅಂತಿ'ಯಾಗಿ ಮಾಡಿಕೊಂಡು 'ಅಂದಿ'ಯೆಂದು ಓದುತ್ತಾರೆ. 'ಸಹಸ್ರ' ಎಂಬುದು 'ಆಯಿರ' ಆಗುತ್ತದೆ. (ಹೀಗೆ ಚತಸ್ಸಹಸ್ರ ಎಂಬುದು ತಮಿಳಿನಲ್ಲಿ 'ನಾಲಾಯಿರ' ಆಗುತ್ತದೆ. 'ನಾಲಾಯಿರ ಪ್ರಬಂಧ' ಎಂಬ ಪವಿತ್ರ ಗ್ರಂಥ ತಮಿಳಿನಲ್ಲಿದೆ). ತಮಿಳಿನಲ್ಲಿ 'ಷ' ಕೂಡ ಇಲ್ಲ. ಆದ್ದರಿಂದ 'ಆಷಾಢ' 'ಆಟಿ' ಆಗಿಬಿಡುತ್ತದೆ. (ಈ ಪದ ತುಳುವಿನಲ್ಲಿ ಕೂಡ ಅದೇ ಅರ್ಥದಲ್ಲಿದೆ.) ಉತ್ತರ ಕನ್ನಡಿಗರು ಉಪಾಕರ್ಮ (ಜನಿವಾರ ಹಾಕುವ ಹಬ್ಬ)ವನ್ನು 'ಶ್ರಾವಣಿ' ಎನ್ನುತ್ತಾರೆ. (ಅದು ಶ್ರವಣ ನಕ್ಷತ್ರವುಳ್ಳ ಪೂರ್ಣಿಮೆಯಂದು ನಡೆಯುತ್ತದೆ.) ತಮಿಳರು ಅದನ್ನು 'ಆವಣಿ' ಎನ್ನುತ್ತಾರೆ. ತಮಿಳಿನಷ್ಟು ಕಡಿಮೆ ವರ್ಣಗಳು ತುಳುವಿನಲ್ಲಿಲ್ಲ. ಆದರೂ ಕೆಲ ಅಕ್ಷರಗಳು ತುಳು, ಅಥವಾ ಒಟ್ಟೇ ದ್ರಾವಿಡ ನಾಲಗೆಗೆ ಒಗ್ಗುವುದಿಲ್ಲ. ಆದ್ದರಿಂದ 'ಫಾಲ್ಗುನ' ತುಳುವಿನಲ್ಲಿ 'ಪಗ್ಗು' ಆಗಿಬಿಡುತ್ತದೆ, 'ವೈಶಾಖ' - 'ಜೇಶ' 'ಶ್ರಾವಣ' - 'ಸೋಣ', 'ಮಾಘ' - 'ಮಾಗಿ' ಅಥವಾ 'ಮಾಯಿ' ಆಗಿಬಿಡುತ್ತವೆ. ಭಾರತದ ಹೊರಗಿನ ಭಾಷೆಗಳಲ್ಲಂತೂ ಕೇಳುವುದೇ ಬೇಡ. 'ಧ್ಯಾನ' ಜಪಾನಿ ಭಾಷೆಯಲ್ಲಿ 'ಝೆನ್' ಎಂದು ಪಲ್ಲಟ ಹೊಂದುತ್ತದಲ್ಲ. ಚೀನಿ ಭಾಷೆಯಲ್ಲಿ ಕೂಡ ಸಂಸ್ಕೃತದ ಅನೇಕ ಪದಗಳು ಗುರುತಿಸಲಾರದಷ್ಟು ಬದಲಾಗುತ್ತವೆ. ತಮಿಳಿಗೆ ಮತ್ತೆ ತಿರುಗುವುದಾದರೆ ಸಂಸ್ಕೃತ 'ಕಾವ್ಯ' ಅಲ್ಲಿ 'ಕಾಪ್ಪಿಯಮ್' ಆಗುವುದು ಒಂದು ಸ್ವಾರಸ್ಯ. (ದಿವಂಗತ ಗೋವಿಂದ ಪೈಗಳು ನಮ್ಮ ಕಾವ್ಯ ಅನೇಕ ವೇಳೆ 'ಕಾಪ್ಯ' ಎಂದು ತಮ್ಮನ್ನು ಕೇಳಿಸಿಕೊಂಡು ತಮಾಷೆ ಮಾಡುತ್ತಿದ್ದರು. 'ಕಾಪ್ಯ' ಎಂದರೆ ಕಪಿಚೇಷ್ಟೆ). ಕೆಲವೇಳೆ ಭಾಷಾ ನಿಯಮಗಳು ಶಬ್ದಗಳನ್ನು ತುಂಬಾ ಬದಲಾಯಿಸುವುದುಂಟು. ತಮಿಳಿನಲ್ಲಿ ರ, ಲ ಇವೆರಡೂ ಇವೆ; ಆದರೆ ಅವು ಶಬ್ದದ ಮೊದಲಲ್ಲಿ ಇರತಕ್ಕದ್ದಲ್ಲ. ಆದ್ದರಿಂದ ಅವಕ್ಕೊಂದು ಸ್ವರದ ಊರೆಗೋಲು ಕೊಟ್ಟು 'ಇರಾಮನ್' (ರಾಮ) 'ಉಲಕು' (ಲೋಕ) ಎಂದು

ಬದಲಾಯಿಸಿಕೊಳ್ಳುತ್ತಾರೆ. ಸಂಸ್ಕೃತದ ಕ್ಲಿಷ್ಟ ಒತ್ತಕ್ಷರಗಳನ್ನು ಸರಳೀಕರಿಸುವ ಒಲವಿನಿಂದಾಗಿ ಈ ತದ್ಭವಗಳು ಇನ್ನಷ್ಟು ದಿಕ್ಕು ತಪ್ಪಿಸುತ್ತವೆ. 'ಸಂಸ್ಕೃತ' 'ಬ್ರಾಹ್ಮಣ'ನೇ ತಮಿಳು 'ಪಾರ್ಪ' (ಕನ್ನಡ-ಪಾರ್ವ) ಆಗಿದ್ದಾನೆಂದು ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಆದರೆ 'ಪಾರ್ವ' ಎಂಬುದು ದ್ರಾವಿಡ 'ಪಾರ್' (ಕಾಣು) ಎಂಬುದರಿಂದ ಹುಟ್ಟಿತೇ ಸಂಸ್ಕೃತದಿಂದಲೇ ಬಂತೇ ಎಂಬುದು ಗಲಿಬಿಲಿಯ ಪ್ರಶ್ನೆಯಾಗಿ ಬಿಡುತ್ತದೆ.

ಸಂಸ್ಕೃತವೇನು ಪರಭಾಷೆಗಳಿಂದ ಪದಗಳನ್ನು ಸೇರಿಸಿಕೊಳ್ಳುವುದರಲ್ಲಿ ಹಿಂದಿಲ್ಲ. ಅದಕ್ಕೂ ಇಂಗ್ಲೀಷಿನ ಹಾಗೆ ಶಬ್ದಗಳ ವಿಷಯದಲ್ಲಿ ಅಗಾಧ ಹಸಿವು. ಅದೂ ಕೂಡ ಪರಭಾಷಿಕ ಶಬ್ದಗಳನ್ನು ತನ್ನ ನಾಲಗೆಯ ನೇರಕ್ಕೆ ತಿರುಚಿಕೊಂಡು ಕೆಲವೊಮ್ಮೆ ಪತ್ತೆಯೇ ಹತ್ತದಂತೆ ಶಬ್ದಗಳನ್ನು ತೆಗೆದುಕೊಳ್ಳುತ್ತದೆ. ಕಿಟ್ಟೆಲ್ ಕೋಶದಲ್ಲಿಯೂ ದ್ರಾವಿಡ ಭಾಷಾ ತುಲನಾತ್ಮಕ ಕೋಶದಲ್ಲಿಯೂ ಇಂಥ ಶಬ್ದಗಳನ್ನು ಹೆಕ್ಕಿ, ಊಹಿಸಿ, ಕೊಡಲಾಗಿದೆ. ಉದಾಹರಣೆಗೆ ಸಂಸ್ಕೃತದ 'ತೇರಾಯ' (=ನೀರು) ದ್ರಾವಿಡದ 'ತುಯ್' (ಒದ್ದೆಯಾಗು) ಎಂಬುದರಿಂದ ಹುಟ್ಟಿರಬಹುದೆಂದು ಸುಲಭವಾಗಿ ನಮಗೆ ಹೊಳೆಯುವುದಿಲ್ಲ. ನೀರಜ, ನೀರದ ಮೊದಲಾದ ಶಬ್ದಗಳನ್ನು ಸಂಸ್ಕೃತದಲ್ಲಿ ಹುಟ್ಟಿಸಿದ 'ನೀರ' ಶಬ್ದ ದ್ರಾವಿಡ 'ನೀರ್' ಇನಿಂದ ಹುಟ್ಟಿತೆಂಬುದು ಸುಮಾರು ಖಚಿತ.

★

ಇನ್ನೊಂದು ಭಾಷೆಯಿಂದ ಶಬ್ದ ಸ್ವೀಕರಿಸಿದಾಗ ಆ ಇನ್ನೊಂದು ಭಾಷೆ ಅದರ ಮೂಲಾರ್ಥಕ್ಕಿಂತ ಸಾಕಷ್ಟು ಭಿನ್ನ ಅಥವಾ ವಿಶೇಷಿತ ಅರ್ಥದಲ್ಲಿ ಬಳಕೆಗೆ ತರುವುದುಂಟು. 'ಆಯಾ' ಎಂಬ ಶಬ್ದ ಆಸ್ಪತ್ರೆಗಳನ್ನು ಕಂಡವರಿಗೆಲ್ಲ ಪರಿಚಿತ. 'ನರ್ಸ್'ಗಳಿಗಿಂತ ಕೆಳ ಮಟ್ಟದ ಪರಿಚಾರಿಕೆ ಆಯಾ. ಈ ಶಬ್ದ ನಮಗೆ ಈ ಅರ್ಥದಲ್ಲಿ ಇಂಗ್ಲೀಷಿನಿಂದ ಬಂದದ್ದು. ಅವರು ತೆಗೆದುಕೊಂಡದ್ದು ಪೋರ್ಚುಗೀಸಿನಿಂದ. ಅಲ್ಲಿ ಆ ಶಬ್ದಕ್ಕೆ (aia) ದಾದಿ ಅಥವಾ ನರ್ಸ್ ಎಂದೂ ಮಕ್ಕಳನ್ನು ಆರೈಕೆ ಮಾಡುವುದರೊಡನೆ ಅವುಗಳಿಗೆ ಶಿಕ್ಷಣ ಕೊಡುವ 'ಗವರ್ನೆಸ್' ಎಂದೂ ಅರ್ಥ. ನಮ್ಮಲ್ಲಿ ಬರೀ ಪರಿಚಾರಿಕೆಯೆಂಬ ಅರ್ಥದಲ್ಲಿ ಮಾತ್ರ ಚಲಾವಣೆಯಲ್ಲಿದೆ. ನೆರೆಯ ಸ್ಪಾನಿಶ್ ಭಾಷೆಗೂ ಆ ಶಬ್ದ ಹೋಗಿದೆ. ಅಲ್ಲಿ ಪರಿಚಾರಿಕೆಯೆಂಬ ಅರ್ಥವೇ ಇಲ್ಲ ಎಂದು ಕೋಶಗಳಿಂದ ತಿಳಿಯುತ್ತದೆ. ಅಲ್ಲಿ ಅವಳು ಗವರ್ನೆಸ್, ಪಾಠ ಹೇಳಿಕೊಡುವವಳು ಮನೆ ಮಾಸ್ತರಣಿ, ಮಾತ್ರ. ಇಷ್ಟಕ್ಕೂ ಮೀರಿ ಈ ಶಬ್ದ ಹೊರಟದ್ದು ಭಾರತದಿಂದಲೇ. ಉರ್ದು ಕೋಶಗಳು ಅದು ಪಾರಶೀಕ ಶಬ್ದವೆನ್ನುತ್ತವೆ. ಪಾರಶೀಕದಲ್ಲಿ ಅವಳು ಮಕ್ಕಳಿಗೆ ಹಾಲು ಕುಡಿಸುವುದೇ ಮೊದಲಾದ ಸೇವೆಗಳನ್ನು ಮಾಡುವ ದಾದಿ ಅಥವಾ ಉರ್ದುವಿನಲ್ಲಿ ಅಷ್ಟೇ ಅರ್ಥದಲ್ಲಿ 'ಆಯಾ'ವನ್ನು ಬಳಸುತ್ತಾರೆ ಎನ್ನಬಹುದು. ಯುರೋಪಿಯನ್ನರು ಸಂಸಾರ ಸಮೇತ ಇಲ್ಲಿ ನೆಲೆಸಿದಾಗ ಇಲ್ಲಿ ಅಗ್ಗವಾಗಿ ಕೆಲಸಕ್ಕೆ ಸಿಗುವ ಇಂಥ ಪರಿಚಾರಿಕೆಯರನ್ನು ನೇಮಿಸಿಕೊಳ್ಳುತ್ತಿದ್ದರು. ಅವರಿಗಿರುವ ಉರ್ದು ಅಭಿದಾನವನ್ನೇ ಸ್ವೀಕರಿಸಿ ಪೋರ್ಚುಗೀಸ್ ಭಾಷೆಯಲ್ಲಿ ಅದನ್ನು ಸೇರಿಸಿಕೊಂಡರು. ಇತರ ಯುರೋಪಿಯನ್ ಭಾಷೆಗಳು ಸ್ವಲ್ಪ ಹೆಚ್ಚು ಕಡಿಮೆ ಅರ್ಥದಲ್ಲಿ ಅದನ್ನು ಸ್ವೀಕರಿಸಿಕೊಂಡವು. ಹೀಗೆ ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿಯಲ್ಲಿ ಇದು ಆಂಗ್ಲೊ-ಇಂಡಿಯನ್ ಪದವೆಂದು ನಮೂದಿಸಿದೆ.

'ನರ್ಸ್' (nurse) ಎಂಬ ಇಂಗ್ಲೀಷ್ ಶಬ್ದವನ್ನು ನಾವು ಸ್ವೀಕರಿಸಿದ್ದೇವಲ್ಲ. ಬಹುತರವಾಗಿ ಆಸ್ಪತ್ರೆಯಲ್ಲಿ ಅಥವಾ ಖಾಸಗಿಯಲ್ಲಿ ರೋಗಿಗಳ ಪರಿಚಾರಿಕೆಯರಾಗಿರುವ ತರಬೇತಿ ಹೊಂದಿದ ಹೆಣ್ಣು ಮಕ್ಕಳಿಗೆ ಈ ಅಭಿದಾನವಾಗಿ ನಾವೀಗ ಅದನ್ನು ಪ್ರಯೋಗಿಸುತ್ತೇವೆ. ಇಂಗ್ಲೀಷಿನಲ್ಲಿ nurse ಧಾತುವಿಗೆ ಮೊಲೆಯೂಡಿಸಿ ಸಾಕು ಎಂಬ ಪ್ರಧಾನ ಅರ್ಥವಿದ್ದು nutrier ಎಂಬ ಲ್ಯಾಟಿನ್ ಧಾತುವಿನಿಂದ (=ಆಹಾರ ಕೊಟ್ಟು ಸಾಕು) ಅದು ಹುಟ್ಟಿದೆ. ಹೀಗೆ ಇಂಗ್ಲೀಷಿನಲ್ಲಿ wet nurse ಎಂಬ ಪದವಿದೆ. ತಾಯಿಗೆ ಬದಲಾಗಿ ಮಕ್ಕಳಿಗೆ ಮೊಲೆಯೂಡಿಸುವ ದಾದಿಗೆ ಆ ಹೆಸರು. ಯೌವನ

ಕೆಡಬಾರದೆಂಬುದಕ್ಕಾಗಿ ಶ್ರೀಮಂತ ಮಹಿಳೆಯರು ಇಂಥ ದಾದಿಯರನ್ನಿಟ್ಟುಕೊಳ್ಳುವ ಪದ್ಧತಿ ಭಾರತದಲ್ಲಿಯೂ ಇತ್ತು. ರಾಜಪುತ್ರರನ್ನು ತುಚ್ಛೀಕರಿಸುತ್ತ ದಾಸಿಯರ ಮೊಲೆಯನ್ನುಂಡು ಬೆಳೆದವರಾದ ನೀವು ಕ್ಷುಲ್ಲಕತನವನ್ನು ಅಲ್ಲಿಂದಲೇ ಮೈಗೂಡಿಸಿಕೊಂಡಿದ್ದೀರೆಂದು ಕವಿಗಳು ಹೇಳಿದ್ದುಂಟು.

ಇನ್ನು ನಮ್ಮದೇ ಪದವಾದ 'ದಾದಿ'ಯ ಮೂಲ ಶೋಧಿಸಹೋದರೆ ಅದು ಸಂಸ್ಕೃತದ 'ಧಾತ್ರಿ'ಯಿಂದ ಹೊರಟದ್ದು ಗೋಚರವಾಗುತ್ತದೆ. ಪ್ರಧಾನವಾಗಿ ಇದರರ್ಥ ರಕ್ಷಕಿ, ಸಾಕುವಾಕೆ ಎನ್ನುವುದರೊಡನೆ, ಮೊಲೆ ಕೊಡುವ ದಾಸಿ, ಸೂಲಗಿತ್ತಿ ಇತ್ಯಾದಿ ಅರ್ಥಗಳೂ ಅದಕ್ಕಿವೆ. ಕೆಲ ನಿರುಕ್ತಿಕಾರರು ಅದನ್ನು 'ಧೇ' (=[ಮೊಲೆ] ಚೀಪು) ಧಾತುವಿಗೂ ಒಯ್ದು ಮುಟ್ಟಿಸುತ್ತಾರೆ. ಮೊಲೆ ಕೊಡುವವಳೆಂದು ಇದರ ತಾತ್ಪರ್ಯವಾಗುತ್ತದೆ. ಆದ್ದರಿಂದಲೇ 'ಧೇನು' (ಹಾಲು ಕೊಡುವಂಥಾ ಆಕಳು) ಎಂಬ ಶಬ್ದ ಉಂಟಾದ್ದು.

ಒಂದು ಕುತೂಹಲದ ವಿಷಯವೆಂದರೆ ನಟನಿಗೆ 'ಧಾತ್ರೀ ಪುತ್ರ' (ದಾದಿಯ ಮಗ) ಎಂಬ ಹೆಸರಿರುವುದು. ಅರಮನೆಯ ದಾದಿಯರ ಮಕ್ಕಳು ಆ ಕಾಲದಲ್ಲಿ ನಟರಾಗುತ್ತಿದ್ದರೆಂದು ಇದರಿಂದ ತರ್ಕಿಸಬಹುದೇನೋ. ●

**- ಪಾವೆಂ.**

---

ಒಂದು ಒಳ್ಳೆಯ ಕಥೆ, ಕಾದಂಬರಿ, ಲೇಖನ ಬರೆವಾಗ ಅದಕ್ಕೆ ಒಂದು ಶೀರ್ಷಿಕೆ, ಶಿರೋನಾಮ, ಹೆಸರು (Title) ಕೊಡುವುದು ಲೇಖಕರಿಗೆ ಬರಹಗಾರರಿಗೆ, ಕವಿಗಳಿಗೆ ಒಂದು ಅತ್ಯಂತ ಪ್ರಯಾಸವಾದ ಕೆಲಸ. ಇದು ಸುಪ್ರಸಿದ್ಧ ಬರಹಗಾರರಿಗೂ ಒಂದು ತಲೆನೋವಾಗಿತ್ತು ಎನ್ನುವುದಕ್ಕೆ ಒಂದು ಸಣ್ಣ ಉದಾಹರಣೆ.

ವಿಶ್ವವಿಖ್ಯಾತ ನಾಟಕಕಾರ ವಿಲಿಯಂ ಷೇಕ್ಸ್‌ಪಿಯರ್ ಒಂದು ಉತ್ತಮವಾದ ನಾಟಕವನ್ನು ರಚಿಸಿದರು. ನಾಟಕವೇನೋ ಬರೆದದ್ದು ಪೂರ್ಣವಾಯಿತು. ಆದರೆ ಅದಕ್ಕೆ ಸರಿಯಾದ ಒಂದು ಒಳ್ಳೆಯ ಹೆಸರು (Title) ಇಡುವುದು ಷೇಕ್ಸ್‌ಪೀಯರ್‌ರವರಿಗೆ ಭಾರಿ ತಲೆ ನೋವಾಯಿತು. ಬಹಳ ದಿನಗಳ ನಂತರ ಓದುಗರು ಹೇಗಾದರೂ ಅರ್ಥಮಾಡಿಕೊಳ್ಳಲಿ ಎಂದು ಭಾವಿಸಿ ಕೊನೆಗೆ ಷೇಕ್ಸ್‌ಪಿಯರ್, ಪುಸ್ತಕಕ್ಕೆ 'As you Like it' ಅಂತ ಹೆಸರಿಟ್ಟರಂತೆ.

**(ಸಂಗ್ರಹ) ಜಿ.ವಿ.ಪ್ರಭು**

## • ಅವರ ಡ್ರೈವರು ಗೋರ್ಬಚೇವ್! :

ರಷ್ಯದ ಅಧ್ಯಕ್ಷ ಮಿಖಾಯೆಲ್ ಗೋರ್ಬಚೇವ್ ತುರ್ತಾಗಿ ಸಭೆಯೊಂದಕ್ಕೆ ಹೋಗಬೇಕಾಗಿತ್ತು. ಆಗಲೇ ಸಾಕಷ್ಟು ತಡವಾಗಿತ್ತು. ಕಾರನ್ನು ವೇಗ ಮಿತಿ ಮೀರಿ ನಡೆಸಲು ಡ್ರೈವರ್ ನಿರಾಕರಿಸಿದಾಗ ಗೋರ್ಬಚೇವ್ ತಾವೇ ಕಾರನ್ನು ವೇಗವಾಗಿ ನಡೆಸುತ್ತಿದರು. ದಾರಿಯಲ್ಲಿ ಪೊಲೀಸರು ಕಾರನ್ನು ತಡೆದರು. ಡ್ರೈವರನನ್ನು ದಸ್ತಗಿರಿ ಮಾಡಲು ಅಧಿಕಾರಿಯು ಪೊಲೀಸನೊಬ್ಬನಿಗೆ ಹೇಳಿದಾಗ 'ಕಾರಿನಲ್ಲಿದ್ದವರನ್ನು ಶಿಕ್ಷಿಸುವಂತಿಲ್ಲ' ಎಂದ ಆ ಪೊಲೀಸು. 'ಏಕೆ? ಯಾರವರು?' ಕೇಳಿದ ಅಧಿಕಾರಿ. ಅದಕ್ಕೆ ಪೊಲೀಸು 'ಅವರು ಯಾರೋ ಗೊತ್ತಿಲ್ಲ. ಆದರೆ ಅವರ ಡ್ರೈವರು ಮಾತ್ರ ಪ್ರೆಸಿಡೆಂಟ್ ಗೋರ್ಬಚೇವ್' ಎಂದ. ಕಾನೂನಿನ ಮಾತು ಬಿಟ್ಟುಕೊಟ್ಟು ಇಬ್ಬರು ಅಲ್ಲಿಂದ ಕಾಲ್ತೆಗೆದರು.

**(ಸಂಗ್ರಹ) ಕೆ.ವೆಂಕಣ್ಣಾಚಾರ್**

# ಮಾನಸಿಕ ಒತ್ತಡಕ್ಕೆ ಎಕ್ಯೂಪ್ರೆಶರ್ ಚಿಕಿತ್ಸೆ

★ ಎಚ್.ಎಮ್.ಕೋಳಿವಾಡ ★

ಮಾನಸಿಕ ಒತ್ತಡ ಅಥವಾ ಪ್ರಯಾಸ (Stress) ಎನ್ನುವುದು ಈಗ ಬಹಳ ಬಳಕೆಯಲ್ಲಿರುವ ವಿಷಯ. ನಮ್ಮ ಹೊಸ ಪೀಳಿಗೆಯ ವರ್ತನಾ (ಬಿಹೇವಿಯರ್) ವಿಜ್ಞಾನಿಗಳೂ, ಆಡಳಿತ (ಮೆನೇಜ್‌ಮೆಂಟ್) ಪಂಡಿತರೂ ಹಾಗೂ ವಿವಿಧ ಚಿಕಿತ್ಸಾ ಶಾಸ್ತ್ರಿಗಳೂ ಈ ವಿಷಯವನ್ನು ವಿವರಿಸಲು ಒತ್ತಡಕ್ಕೆ ಒಳಗಾಗುತ್ತಿದ್ದಾರೆ. ನಿರ್ಬಂಧನೆಗೆ ತುತ್ತಾಗುತ್ತಿದ್ದಾರೆ. ಹಾಗಾದರೆ ಈ ಪ್ರಯಾಸ ಎಂದರೆ ಏನು?

**ಅರ್ಥ :**

ಜೈವಿಕ (ಬಯೊಲಾಜಿಕಲ್) ಅಥವಾ ಮಾನಸಿಕವಾದ ಒಂದು ಭಾರ ಎಂದು ಎನ್‌ಸೈಕ್ಲೊಪೀಡಿಯಾ ಬ್ರಿಟಾನಿಕಾ ಈ ಪದವನ್ನು ವರ್ಣಿಸಿದೆ. ಇದು ನಮ್ಮ ಅಂಗಾಂಗಗಳ ಕಾರ್ಯಕಲಾಪಗಳನ್ನು ಆತಂಕಿಸಬಹುದು. ಉಷ್ಣ, ಶೀತ, ಗದ್ದಲ ಮುಂತಾದವು ನಮ್ಮ ಜೈವಿಕ ಪ್ರತಿಕ್ರಿಯೆಗಳನ್ನು ಹಾಗೂ ನಿರಾಶೆ, ನಷ್ಟ ಮುಂತಾದವು ನಮ್ಮ ಮಾನಸಿಕ ಸ್ಪಂದನಗಳನ್ನು ಸೃಜಿಸುತ್ತವೆ. ಕೆಲ ಸಂದರ್ಭಗಳು ಈ ಎರಡೂ ಬಗೆಯ ಪ್ರತಿಕ್ರಿಯೆಗಳನ್ನು ಉತ್ಪನ್ನ ಮಾಡುತ್ತದೆ.

**ಕಾರಣ :**

ನಮ್ಮ ದೇಹ ಮನಸ್ಸು ಒಂದಾಗಿ ಸಹಕರಿಸಿ ಕೆಲಸ ಮಾಡುತ್ತವೆ. ಈ ಕಾರ್ಯ ಬಹಳ ಕ್ಲಿಷ್ಟವಾದದ್ದು. ಸಂದರ್ಭ ಮತ್ತು ಘಟನೆಗಳಿಗೆ ನಾವು ಪ್ರತಿಕ್ರಿಯೆ ರೂಪಿಸುತ್ತೇವೆ. ಈ ಪ್ರತಿಕ್ರಿಯೆಗಳು ದೈಹಿಕ ಹಾಗೂ ಆವೇಶ (ಎಮೊಶನಲ್) ಪೂರ್ಣವಾದವೂ ಇರುವವು. ಇಂಥ ಪ್ರತಿಕ್ರಿಯೆಗಳು ಮಾನಸಿಕ ಒತ್ತಡ ನಿರ್ಮಿಸುತ್ತವೆ. ಒಬ್ಬ ವ್ಯಕ್ತಿಯ ಪ್ರತಿಕ್ರಿಯೆಗಳು ಇನ್ನೊಬ್ಬನ ಪ್ರತಿಕ್ರಿಯೆಗಳಿಂದ ಭಿನ್ನವಾಗಿರುವವು. ಮನುಷ್ಯನ ವ್ಯಕ್ತಿತ್ವದ ವಿಶಿಷ್ಟ ಗುಣಗಳನ್ನ ವಲಂಬಿಸಿ ನಿರ್ಮಿತಗೊಳ್ಳುವ ಈ ಪ್ರತಿಕ್ರಿಯೆಗಳು ಸಕಲರಿಗೂ ಸಮನಾಗಿ ಯಾವ ನಿರ್ದಿಷ್ಟ ಸಂದರ್ಭದಲ್ಲೂ ಇರಲಾರವು. ವ್ಯಕ್ತಿ ವೈಶಿಷ್ಟ್ಯತೆಗನುಗುಣವಾಗಿ ಒತ್ತಡಗಳು ಉಂಟಾಗುವವು.

**ಅಳತೆ :**

ಪರಿಸರ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಸ್ಪಂದಿಸುವ ನಮ್ಮ ಪ್ರತಿಕ್ರಿಯೆಗಳನ್ನು ನಮ್ಮ ವ್ಯಕ್ತಿತ್ವ ನಿರ್ಧರಿಸುತ್ತದೆ. ವ್ಯಕ್ತಿತ್ವ ಪರಂಪರಾಗತವಾಗಿ ಬಂದುದಲ್ಲ. ಯಾರೂ ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿಯೇ ಜನ್ಮ ತಾಳಿರುವುದಿಲ್ಲ. ಆದರೆ ಕೆಲ ವಿಶಿಷ್ಟ ಗುಣಗಳೆಡೆಗೆ ಒಲವು ಇಟ್ಟುಕೊಂಡು ಜನ್ಮ ತಾಳಿರಬಹುದು. ವ್ಯಕ್ತಿತ್ವವನ್ನು ಪರ್ಯಾಯವಾಗಿ ಒಂದೇ ವರ್ಗದಲ್ಲಿ

ಹಾಕಲಾಗುವುದಿಲ್ಲ. ನಮ್ಮ ಅನುಭವಗಳು ನಮ್ಮ ವ್ಯಕ್ತಿತ್ವದ ವೈಶಿಷ್ಟ್ಯತೆಯನ್ನು ರೂಪಿಸುತ್ತವೆ, ಹಾಗೂ ಬದಲಿಸುತ್ತವೆ. ವಿವಿಧ ಸಂದರ್ಭ ಹಾಗೂ ಮನೋಭಾವಗಳಿಗನುಸಾರವಾಗಿ ವ್ಯಕ್ತಿತ್ವದ ವಿಶಿಷ್ಟತೆಗಳು ಬದಲಾಗುತ್ತವೆ. ಅಲ್ಲದೆ ಇವು ನಮ್ಮ ಶಾರೀರಿಕ ಹಾಗೂ ಮಾನಸಿಕ ಆರೋಗ್ಯವನ್ನೂ ಅವಲಂಬಿಸಿವೆ. ಇವೇ ಮೊದಲಾದ ಕಾರಣಗಳಿಗಾಗಿ ಒತ್ತಡವನ್ನು ನಿರ್ದಿಷ್ಟವಾಗಿ ಅಳೆಯಲು ಆಗುವುದಿಲ್ಲ.

**ಅಗತ್ಯ :**

ಒಂದಿಷ್ಟು ನಿರ್ಬಂಧ ನಮಗೆ ಅವಶ್ಯಕ. ಇದು ನಮ್ಮಲ್ಲಿ ಜಾಗ್ರತೆಯನ್ನು ತೀಕ್ಷ್ಣತೆಯನ್ನು ಕಾಯ್ದಿಡುತ್ತದೆ. ಆಹ್ವಾನ (ಚಾಲೆಂಜಸ್)ಗಳನ್ನು ಎದುರಿಸಲು ಬೇಕಾಗುವ ಸನ್ನದ್ಧತೆಯನ್ನು ನಮ್ಮಲ್ಲಿ ಸೃಜಿಸುತ್ತದೆ. ನೀವು ಮೃಗಾಲಯಗಳಲ್ಲಿ ಹಾಗೂ ಸರ್ಕಸ್ಸಿನಲ್ಲಿ ಸಿಂಹಗಳನ್ನು ನೋಡಿರಬಹುದು. ಅವು ಮಂದವಾಗಿಯೂ ಅನಾರೋಗ್ಯದಿಂದಲೂ ಕೂಡಿರುತ್ತವೆ, ಅಲ್ಲವೆ?. ಇದಕ್ಕೆ ಕಾರಣ ಮುಖ್ಯತಃ ನಾವು ಅವುಗಳ ಆಹ್ವಾನಗಳನ್ನು ಕಸಿದುಕೊಂಡಿರುವುದು. ಈ ಕಾರಣಕ್ಕಾಗಿಯೇ ದೊಡ್ಡ ದೊಡ್ಡ ಶಹರಗಳಲ್ಲಿಯ ವಿದ್ಯಾರ್ಥಿಗಳು ಹಳ್ಳಿಗಾಡಿನ ಸಮಕಕ್ಷದ ಶಾಲೆಯ ಮಕ್ಕಳಿಗಿಂತ ತುಂಬ ಚುರುಕಾಗಿರುತ್ತಾರೆ. ಇದೇ ಕಾರಣಕ್ಕಾಗಿಯೇ ಅನೇಕ ಜನ ನಿವೃತ್ತರಾದ ಮರುದಿನದಿಂದಲೇ ಒಮ್ಮೆಲೇ ಮುದುಕರಾಗಿ ಬಿಡುತ್ತಾರೆ.

**ಮಂದತ್ವ :**

ಆದಿ ಮಾನವನಿಗೆ ಸ್ಪರ್ಧೆ ಮೂಲದಲ್ಲಿ ದೈಹಿಕವಾಗಿತ್ತು. ಆಹಾರಕ್ಕಾಗಿ ಹಾಗೂ ಸ್ವರಕ್ಷಣೆಗಾಗಿ ಹೋರಾಡುವುದಾಗಿತ್ತು. ಇಂದು ನಾವು ಇಂತಹ ದೈಹಿಕ ಸ್ಪರ್ಧೆಗಳನ್ನು ಎದುರಿಸಬೇಕಾಗಿಲ್ಲ. ಆಧುನಿಕ ಸಭ್ಯತೆ ದೈಹಿಕ ಆಹ್ವಾನಗಳನ್ನು ಇಲ್ಲದಾಗಿಸಿದೆ. ಕ್ರೀಡಾಂಗಣದಲ್ಲಿ ಮಾತ್ರ ಇಂಥ ಸ್ಪರ್ಧೆಗಳು ಇಂದು ಕಂಡು ಬರುತ್ತಿವೆ. ಇವೆಲ್ಲ ಸ್ವಇಚ್ಛೆಯಿಂದ ಆರಿಸಿಕೊಂಡಂತಹವು. ಇಂದು ನಾವು ಎದುರಿಸುವ ಸ್ಪರ್ಧೆ, ಆಹ್ವಾನಗಳು ಮಾನಸಿಕ ಉದ್ವೇಗಗಳಿಂದ ಕೂಡಿವೆ. ಈ ಉದ್ವೇಗಗಳು ನಾವು ಇತರ ಜನರೊಂದಿಗೆ ವ್ಯವಹರಿಸುವ ಪರಸ್ಪರ ಸಂಬಂಧಗಳಿಂದ, ನಮ್ಮ ಕಾರ್ಯಕ್ಷೇತ್ರಗಳಲ್ಲಿಯ ಪರಿಸ್ಥಿತಿಯಿಂದ ಹಾಗೂ ನಮ್ಮ ಮನೆಗಳಲ್ಲಿಯ ಸಂವೇದನೆಗಳಿಂದ ಹುಟ್ಟಿಕೊಳ್ಳುತ್ತವೆ. ಈ ಸ್ಪರ್ಧೆಗಳು ಕೆಲ ಸಲ ಆನಂದದಾಯಕವಾಗಿಯೂ ಇರಬಹುದು. ಇಂಥವು ನಮ್ಮ ಕಾರ್ಯಕುಶಲತೆಯನ್ನು ಶಿಖರಕ್ಕೆ ಮುಟ್ಟಿಸುತ್ತವೆ. ಎಲ್ಲ ವಿಧದ ಯಾಂತ್ರಿಕ ಉತ್ಪಾದನೆಯಲ್ಲಿ, ಉತ್ಪಾದಿಸಿದ ವಸ್ತುವಿನ ಒಟ್ಟು ತೂಕ ಉತ್ಪಾದನೆಗಾಗಿ ಬಳಸಿದ ವಸ್ತುಗಳ ಒಟ್ಟು ತೂಕಕ್ಕೆ ಸಮನಾಗಿರುತ್ತದೆ. ಆದರೆ ಮನುಷ್ಯ ಮಾತ್ರ ತನ್ನ ಸೃಜನಶೀಲತೆಯಿಂದ ಉತ್ಪಾದನೆಗಾಗಿ ಉಪಯೋಗಿಸಿದ ಒಟ್ಟು ವಸ್ತುಗಳ ತೂಕಕ್ಕಿಂತ ಮಿಗಿಲಾಗಿ ಉತ್ಪಾದಿಸಬಲ್ಲ. ಪ್ರಾಣಿಗಳಿಗೆಲ್ಲ ಸ್ಪರ್ಧೆ ಆಹ್ವಾನಗಳು ಅವಶ್ಯಕ. ಸ್ಪರ್ಧೆ ನಮಗೆ ಅವಶ್ಯಕವಾದ ಉತ್ತೇಜನ, ಉದ್ವೇಗಗಳನ್ನು ನೀಡುತ್ತದೆ. ಸ್ಪರ್ಧೆಗಳಿಲ್ಲದಿದ್ದರೆ ನಾವೆಲ್ಲ ಕಳಾಹೀನರಾಗಿ ಮೃಗಾಲಯದಲ್ಲಿಯ ಸಿಂಹಗಳಂತಾಗುತ್ತೇವೆ. ಮಂದವಾದ ಹಾಗೂ ಕಳಾಹೀನ ಬದುಕು ನಮ್ಮ ಕೌಶಲ್ಯವನ್ನು ಕರ್ತೃತ್ವ ಶಕ್ತಿಯನ್ನು ಕ್ಷೀಣಿಸುತ್ತದೆ.

**ಅಪಾಯ :**

ಸ್ಪರ್ಧೆಗಳನ್ನು ಸ್ವೀಕರಿಸಲು ಅನುರೂಪವಾಗುವಂತೆ ನಾವು ರೂಪಗೊಂಡಿದ್ದೇವೆ. ಈ ಗುಣ ನಮಗೆ ನೈಸರ್ಗಿಕವಾಗಿ ಬಂದದ್ದು. ಆದರೆ ಅಸಾಧ್ಯವಾದ ಸ್ಪರ್ಧೆಗಳು ನಮ್ಮನ್ನು ಅಪಾಯದ ವಲಯಕ್ಕೆ ತಳ್ಳುತ್ತವೆ. ಅತ್ಯಧಿಕ ಒತ್ತಡ ನಮ್ಮ ವ್ಯವಹಾರಿಕ ಗುಣಗಳನ್ನು, ರೀತಿ ನೀತಿಗಳನ್ನು ಬದಲಿಸುತ್ತವೆ. ಇದು ನಮ್ಮ ದೈಹಿಕ ಹಾಗೂ ಮಾನಸಿಕ ಸ್ವಾಸ್ಥ್ಯವನ್ನು ನಾಶ ಮಾಡುತ್ತದೆ. ಇಂತಹ ಅಪಾಯಕಾರಿ ನಿರ್ಬಂಧಗಳು ನಮ್ಮ ಶರೀರದ ಮೇಲೆ ಬೀರುವ ಪರಿಣಾಮಗಳು ವಿವಿಧವಾಗಿರುತ್ತವೆ. ಅಲ್ಲದೆ ಈ ಪರಿಣಾಮಗಳು ವ್ಯಕ್ತಿ ವ್ಯಕ್ತಿಗೂ ಭಿನ್ನಭಿನ್ನವಾಗಿರುತ್ತವೆ. ಅಸಾಧ್ಯವಾದ ಸ್ಪರ್ಧೆಗಳಿಗೆ ನಮ್ಮ ಶರೀರ ಯಾವ ರೀತಿಯಲ್ಲಿ ಸ್ಪಂದಿಸುವುದು ಎಂಬುದನ್ನು ಅರಿತುಕೊ

ಳ್ಳುವುದು ಅವಶ್ಯಕ. ಕಾರಣವೇನೆಂದರೆ ನಾವು ನಮ್ಮ ಪ್ರತಿಕ್ರಿಯೆಗಳನ್ನು ಬದಲಿಸಿ ಅಥವಾ ನಮ್ಮ ವರ್ತನೆಗಳನ್ನು ಬದಲಿಸಿ ಒತ್ತಡವನ್ನು ನಿಯಂತ್ರಿಸಲು ಸಾಧ್ಯವಿದೆ.

**ಪ್ರತಿಕ್ರಿಯೆ :**

ನಮ್ಮೆದುರು ರೂಪುಗೊಂಡಿರುವ ಗಂಡಾಂತರಕ್ಕೆ ಸೆಡ್ಡು ಹೊಡೆದು ಪ್ರತಿಸ್ಪರ್ಧೆಗೆ ನಿಂತಾಗ ನಮ್ಮ ಶರೀರದ ಮೇಲೆ ಮೊಟ್ಟಮೊದಲು ಆಗುವ ಪ್ರತಿಕ್ರಿಯೆ ಎಂದರೆ ಅದು ಗಂಡಾಂತರವನ್ನು ಎದುರಿಸಲು ಸನ್ನದ್ಧವಾಗುವುದು. ಇಂತಹ ಪರಿಸ್ಥಿತಿಯಲ್ಲಿ ನಮಗಿರುವುದು ಎರಡೇ ದಾರಿ. ಒದಗಿದ ಗಂಡಾಂತರವನ್ನು ಎದುರಿಸಿ ಹೋರಾಡುವುದು ಅಥವಾ ಆತ್ಮರಕ್ಷಣೆಗಾಗಿ ಪಲಾಯನ ಮಾಡುವುದು. ಸನ್ನದ್ಧತೆಯ ಪರಿಸ್ಥಿತಿಯಲ್ಲಿ ನಮ್ಮ ದೇಹದಲ್ಲಿ ಬದಲಾವಣೆಗಳಾಗುವವು. ಮೊಟ್ಟಮೊದಲಿಗೆ ನಮ್ಮ ಸ್ನಾಯುಗಳೆಲ್ಲ ಬಿಗಿಯಾಗಿ ಬಿಗಿದುಕೊಳ್ಳುವವು. ಹೀಗೆ ಬಿಗಿದುಕೊಂಡ ಸ್ನಾಯುಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ರಕ್ತದ ಪೂರೈಕೆ ಬೇಕಾಗುವುದರಿಂದ ಹೃದಯದ ಗತಿ ತೀವ್ರಗೊಳ್ಳುವುದು. ಈ ಸ್ಥಿತಿ ನಮ್ಮ ಉಸಿರಾಟದ ಗತಿಯನ್ನು ಹೆಚ್ಚಿಸುವುದು. ದೇಹದಲ್ಲಿ ಶೇಖರಿಸಿಟ್ಟ ಸಕ್ಕರೆ ಹಾಗೂ ನೆಣ (ಫ್ಯಾಟ್) ಹೆಚ್ಚಿನ ಪ್ರಮಾಣದಲ್ಲಿ ರಕ್ತದಲ್ಲಿ ಬಿಡುಗಡೆಯಾಗುವವು. ಕೊಲೆಸ್ಟರಾಲ್ ಕೂಡ ಅಧಿಕ ಪ್ರಮಾಣದಲ್ಲಿ ರಕ್ತದೊಳಗೆ ಸೇರಿಕೊಳ್ಳುವುದು. ಪಚನ ಕ್ರಿಯೆಗಳಿಗೆ ರಕ್ತದ ಪೂರೈಕೆ ಕಡಿಮೆ ಆಗುವುದು. ಸ್ನಾಯುಗಳ ಬಿಗಿತದಿಂದ ಮಲಮೂತ್ರಗಳ ವಿಸರ್ಜನೆ ಕ್ಷೀಣಿಸುವುದು. ನಾವು ಜಾಗೃತರಾಗಿರುವಂತೆ ನೋಡಿಕೊಳ್ಳಲು ಮಿದುಳಿಗೆ ರಕ್ತದ ಪೂರೈಕೆ ಹೆಚ್ಚಾಗುವುದು. ತ್ವಚೆಯಲ್ಲಿನ ರಕ್ತ ಸೋಸಿ ಸ್ನಾಯುಗಳಿಗೆ ಹೋಗುವುದರಿಂದ ಬಣ್ಣ ಕುಂದುವುದು. ಕಣ್ಣುಗಳು ವಿಕಾಸಗೊಳ್ಳುವವು. ಜೊಲ್ಲಿನ ಸ್ರಾವ ಕಡಿಮೆಯಾಗಿ ಬಾಯಿ ಒಣಗುವುದು. ಪಿಚುಟರಿ ಮತ್ತು ಎಡ್ರಿನಲ್ ಗ್ರಂಥಿಗಳು ಪ್ರಚೋದನೆ ಹೊಂದಿ ಹೆಚ್ಚಿನ ಪ್ರಮಾಣದಲ್ಲಿ ಹಾರ್‌ಮೋನುಗಳನ್ನು ರಕ್ತದಲ್ಲಿ ಬಿಡುಗಡೆ ಮಾಡುವವು. ಹೆಚ್ಚಿನ ಹಾರ್‌ಮೋನ್‌ಗಳು ಏನೆಲ್ಲ ಪರಿಣಾಮಗಳನ್ನು ಬೀರುವವು! ದೇಹದ ಪ್ರತಿರೋಧಕ ಶಕ್ತಿ ಕುಗ್ಗುವುದರಿಂದ ನಮ್ಮ ದೇಹ ರೋಗ ಮತ್ತು ಅಲರ್ಜಿಜನ್ಯ ವ್ಯಾಧಿಗಳಿಗೆ ಸುಲಭವಾಗಿ ಸೋಲುವದು. ಗಂಡಾಂತರವನ್ನು ಎದುರಿಸಿದಾಗ ಅಥವಾ ಆತ್ಮರಕ್ಷಣೆಗೆ ಪಲಾಯನ ಮಾಡಿದಾಗ ಆಗುವ ದೈಹಿಕ ಶ್ರಮದಿಂದ ಮೇಲಿನ ಪ್ರತಿಕ್ರಿಯೆಗಳೆಲ್ಲ ಹಿಮ್ಮುಖವಾಗಿ ನೀಗುವವು. ಸನ್ನದ್ಧತೆಯ ಸ್ಥಿತಿಯಿಂದ ಹಿಂದಿರುಗಿ ಬರಲು ದೈಹಿಕ ಶ್ರಮ ಅವಶ್ಯವಾಗಿ ಪ್ರಮುಖವಾಗಿ ಬೇಕಾಗುವುದು. ಈ ಪ್ರತಿಕ್ರಿಯೆ ಪ್ರಾಣಿ ಮಾತ್ರಕ್ಕೆಲ್ಲ ಒಂದೇ ಆಗಿರುವುದು. ಇಂತಹ ಪ್ರತಿಕ್ರಿಯೆ ಸುಖಕರವಾದ ಸನ್ನಿವೇಶಗಳಿಂದಲೂ ಉಂಟಾಗಬಹುದು. ಪ್ರೇಮಪಾಶದಲ್ಲಿ ಸಿಲುಕಿದ 'ಶಕುಂತಲೆ'ಯರಿಗೂ 'ದುಷ್ಯಂತರಿ'ಗೂ ನಿದ್ರಾ ನಾಶವಾಗಲು ಇಂತಹ ಸನ್ನದ್ಧತೆಯ ಸ್ಥಿತಿಯಿಂದಾದ ಸ್ನಾಯುಗಳ ಬಿಗಿತವೇ ಕಾರಣ.

**ಪ್ರತಿಭಟನೆ :**

ಇಂದಿನ ನಮ್ಮ ಮುಂದುವರೆದ ನಾಗರಿಕ ಜೀವನ ಶೈಲಿಯಲ್ಲಿ ಗಂಡಾಂತರ ಅಥವಾ ಆಹ್ವಾನ (ಚಾಲೆಂಜಿಸ್)ಗಳ ರೂಪ ಬದಲಾಗಿದೆ. ವಾಯುನಿಯಂತ್ರಿತ ಕೋಣೆಯಲ್ಲಿ ತಿರುಗುಣಿಯ ಮೆತ್ತನ್ನ ಕುರ್ಚಿಯಲ್ಲಿ ಕುಳಿತು ಆಡಳಿತಗಾರರೂ ಪ್ರಬಂಧಕರೂ ಅರ್ಥಶಾಸ್ತ್ರಿಗಳೂ ಲೇಖಾಗಾರರೂ ವಿಜ್ಞಾನಿಗಳೂ ಜ್ಞಾನಿಗಳೂ ದಿನಂಪ್ರತಿ ಅನೇಕಾನೇಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಅವರು ಎದುರಿಸುವ ಆಹ್ವಾನಗಳಿಗೆ ದೈಹಿಕವಾಗಿ ಪ್ರತಿಭಟಿಸಲು ಅಥವಾ ಪಲಾಯನ ಹೇಳಲು ಅವಕಾಶವಿಲ್ಲ. ಆದುದರಿಂದ ಇಂಥ ಸಮಸ್ಯೆಗಳನ್ನು ಎದುರಿಸಲು ಸನ್ನದ್ಧರಾದ ಅವರ ದೇಹದಲ್ಲಿ ಆಗುವ ಪ್ರತಿಕ್ರಿಯೆಗಳ ಪ್ರಭಾವಕ್ಕೆ ಶ್ರಮದ ಅಭಾವದಿಂದ ವಿಮೋಚನೆ ಸಾಧ್ಯವಾಗುವುದಿಲ್ಲ. ಕಾರಣ ಅವರ ಸನ್ನದ್ಧತೆಯ ಸ್ಥಿತಿ ಬಹಳ ಕಾಲದವರೆಗೆ ಮುಂದುವರೆಯುವುದು. ಇಂತಹ ಸ್ಥಿತಿ ಬಹಳ ಕಾಲದವರೆಗೆ ಮುಂದುವರೆಯುವು

ದರ ಪರಿಣಾಮವಾಗಿ ಅವರಿಗೆ ಸ್ಥಿರವಾದ ಬಿ. ಪಿ. ಮಲಬದ್ಧತೆ, ಅಗ್ನಿಮಾಂದ್ಯ, ಆಮ್ಲಿಯತೆ, ಮೂತ್ರದ ತೊಂದರೆ, ಸಕ್ಕರೆ ರೋಗ, ನೋವು ನವೆತ ಹಾಗೂ ಅಲರ್ಜಿಜನ್ಯ ತೊಂದರೆಗಳು ಹುಟ್ಟಿಕೊಳ್ಳುವವು.

**ಉಪಾಯ :**

ಮಾನಸಿಕ ಒತ್ತಡಕ್ಕೆ ಒಳಗಾದ ಹಾಗೂ ಒಳಗಾಗಬಹುದಾದ ಜನರೆಲ್ಲ ಮುಖ್ಯವಾಗಿ ಗಮನಿಸಬೇಕಾದದ್ದು ಏನೆಂದರೆ ಒತ್ತಡದಿಂದಾದ ಪರಿಣಾಮಗಳಿಂದ ಮುಕ್ತಿ ಪಡೆಯಲು ದೈಹಿಕ ಶ್ರಮದಿಂದ ಸಾಧ್ಯವಾಗುವುದು. ಮಾನಸಿಕ ಒತ್ತಡದ ಪ್ರಭಾವಕ್ಕೆ ದೈಹಿಕ ಶ್ರಮದಿಂದ ಮುಕ್ತಿ ದೊರೆಯುವುದು. ನಮ್ಮ ಪ್ರತಿಕ್ರಿಯೆಗಳನ್ನು ಬದಲಿಸಿಯೋ ಅಥವಾ ಒತ್ತಡ ಉತ್ಪನ್ನ ಮಾಡುವ ಸನ್ನಿವೇಶಗಳನ್ನು ನಿಯಂತ್ರಿಸಿಯೋ ಇದರ ಮೇಲೆ ವಿಜಯ ಸ್ಥಾಪಿಸದಿದ್ದರೆ ನಾವು ವಿಪರೀತ ಪ್ರಯಾಸದಿಂದ ಕುಸಿಯುತ್ತೇವೆ. ಇದನ್ನು ಜಾಗೃತೆಯ ಘಂಟೆಯಾಗಿ ಪರಿಗಣಿಸಬೇಕು.

**ಎಕ್ಯುಪ್ರೆಶರ :**

ಎಕ್ಯುಪ್ರೆಶರಿನಿಂದ ಅನೇಕ ಪೀಡೆಗಳನ್ನು ಪರಿಹರಿಸುವಂತೆ ಈ ಮಾನಸಿಕ ಒತ್ತಡವನ್ನು ಸಮರ್ಪಕವಾಗಿ ಉಪಚರಿಸಬಹುದು. ಎಕ್ಯುಪ್ರೆಶರ್ ಬಂದದ್ದು ಎಕ್ಯುಪಂಕ್ಚರನಿಂದ. ಎಕ್ಯುಪ್ರೆಶರನ್ನು ನಾಲ್ಕು ವಿಭಾಗಗಳಲ್ಲಿ ವಿಂಗಡಿಸಿದ್ದುಂಟು. 1) ಶಿಯಾತ್ಸು 2) ಮರೀಡಿಯನ್ 3) ಝೋನೋಲೊಜಿ (Zonology) 4) ರಿಫ್ಲೆಕ್ಸೊಲೋಜಿ. ರಿಫ್ಲೆಕ್ಸೊಲೊಜಿಯ ಅನುಸಾರ ಶರೀರದ ಅಂಗ ಉಪಾಂಗಗಳೆಲ್ಲ ಪಾದಗಳಲ್ಲಿ ಪ್ರತಿಬಿಂಬಿತವಾಗಿವೆ. ಶರೀರದ ಯಾವುದೇ ಅಂಗ ಪೀಡಿಸುತ್ತಿದ್ದಾಗ ಆ ಅಂಗದ ಪ್ರತಿಬಿಂಬಿತ ಕೇಂದ್ರ ಸಂವೇದನಾಶೀಲವಾಗುವುದು. ಈ ಬಿಂದುವಿಗೆ ಒತ್ತಡ ನೀಡಿದಾಗ ಪ್ರತಿರೋಧಿಸಲ್ಪಟ್ಟ ಜೈವಿಕ (ಬಯೋ ಎಲೆಕ್ಟ್ರಿಕ್ ಕರೆಂಟ್)ದ ಪ್ರವಾಹ ಸುಗಮವಾಗಿ ಹರಿಯಹತ್ತುವುದು. ಇದರಿಂದ ರಕ್ತ ಪರಿಚಲನೆ ಸುಗಮವಾಗುವುದು. ಹೀಗಾಗಿ ಪೀಡಿತ ಅಂಗ ತನ್ನ ಮೊದಲಿನ ಸ್ಥಿತಿಗೆ ಮರಳುವುದು. ಈ ರೀತಿಯಾಗಿ ಪೀಡೆಯ ಪರಿಹಾರವಾಗುವುದು.

ಕೆಳಗೆ ನಮೂದಿಸಿದ ಪ್ರತಿಬಂಬಿತ ಬಿಂದುಗಳಿಗೆ ಒತ್ತಡ ನೀಡಿ ನಾವು ಒತ್ತಡಗಳಿಂದುಂಟಾದ ಪರಿಣಾಮಗಳನ್ನು ಸುಗಮವಾಗಿ ನಿಯಂತ್ರಿಸಬಹುದು, ನಿವಾರಿಸಬಹುದು.

1) ಮಿದುಳಿನ ಬಿಂದು (ಉದ್ರೇಕ ಸಂತೈಸಲು)
2) ಹೃದಯ ಮತ್ತು ಪುಪ್ಪುಸ (ಉದ್ರೇಕ ಸಂತೈಸಲು)
3) ಎಲ್ಲ ಗ್ರಂಥಿಗಳು (ಉದ್ರೇಕ ಸಂತೈಸಲು)
4) ಲಿವರ್ (ಉದ್ರೇಕ ಸಂತೈಸಲು)
5) ಪಾಚನ ಪ್ರಣಾಲಿ (ಪ್ರಚೋದಿಸಲು)
6) ಮೂತ್ರ ಪ್ರಣಾಲಿ (ಪ್ರಚೋದಿಸಲು)
7) ಮಲಬದ್ಧತೆಯ ಬಿಂದು (ಪ್ರಚೋದಿಸಲು)
8) ಜನನಾಂಗಗಳು (ಪ್ರಚೋದಿಸಲು)
9) ಸ್ಪೈನ್ ಹಾಗೂ ಸೆಂಟ್ರಲ್ ನರ್ವಸ್ ಸಿಸ್ಟಿಮ್ ವ್ಯವಸ್ಥೆ (ಸಂತೈಸಲು)

ಹೀಗೆ ಒತ್ತಡ ನೀಡಿದಾಗ ದೇಹವೆಲ್ಲಾ ಬಿಗಿತಗಳಿಂದ ಮುಕ್ತಿ ಪಡೆದು ವಿಶ್ರಾಂತಿ ಹೊಂದುವುದು. ರಾತ್ರಿ ತಡೆಯಿಲ್ಲದೆ ಗಾಢ ನಿದ್ರೆ ಬರುವುದು. ಮರುದಿನ ನೀವು ಹೊಸ ಮನುಷ್ಯರಾಗಿರುವಿರಿ. ಇದರೊಡನೆ ಸೂರ್ಯನಮಸ್ಕಾರ ಅಥವಾ ದೂರದವರೆಗೆ ನಡೆದುಕೊಂಡು ಹೋಗುವುದು, ಜಾಗಿಂಗ್ ಮುಂತಾದ ಮಿದು ವ್ಯಾಯಾಮ ಹಾಗೂ ಶವಾಸನವನ್ನು ಮಾಡಿದರೆ ಈ ಸ್ಟ್ರೆಸ್ ನಿವಾರಣೆಯಾಗಲು ಸಾಧ್ಯ. ●

---

'ಹೊಟೆಲ್ ರೊಸ್ಸಿಯಾ' ಪ್ರಪಂಚದ ಅತಿ ದೊಡ್ಡ ಹೊಟೆಲ್. ಮಾಸ್ಕೊದಲ್ಲಿ ಇರುವ ಈ ಹೊಟೆಲ್ 3200 ಕೊಠಡಿಗಳನ್ನು ಹೊಂದಿದೆ. ಒಬ್ಬ ಮನುಷ್ಯ ದಿನಕ್ಕೊಂದು ರೂಮಿನಂತೆ ಕಳೆಯಲು ಎಂಟೂವರೆ ವರ್ಷಕ್ಕಿಂತ ಹೆಚ್ಚು ಸಮಯ ಬೇಕಾಗುವುದು.

(ಸಂ.) ಎಮ್.ಚಂದ್ರಶೇಖರ್

ನೀತಿಕಥೆ

# ಸತ್ಯ ಮತ್ತು ಸುಳ್ಳು

ಮುರಲೀಧರ ಕುಲಕರ್ಣಿ

**ಒ**ಮ್ಮೆ ಸತ್ಯ ಮತ್ತು ಸುಳ್ಳುಗಳ ನಡುವೆ ತಾನು ಹೆಚ್ಚು, ತಾನು ಹೆಚ್ಚು ಎಂಬ ವಿವಾದ ಉಂಟಾಯಿತು. ತಮ್ಮಿಬ್ಬರಲ್ಲಿ ಯಾರು ಜನರಿಗೆ ಹೆಚ್ಚು ಉಪಯುಕ್ತ ಎಂದು ಅವು ತಿಳಿಯಬಯಸಿದವು. ಅದನ್ನು ಪರೀಕ್ಷಿಸಲು ಎರಡೂ ಒಂದು ಜನನಿಬಿಡವಾದ ಪ್ರದೇಶಕ್ಕೆ ಹೊರಟವು. ಸುಳ್ಳು ಅಲ್ಲಿ ಇಲ್ಲಿ ಇಣುಕುತ್ತಾ ಅಂಕುಡೊಂಕಾದ ಕಾಲುದಾರಿಗಳ ಮೇಲೆ ಸಾಗಿದ್ದರೆ, ಸತ್ಯ ನೇರವಾದ ಹೆದ್ದಾರಿಯ ಮೇಲೆ ರಾಜಾರೋಷವಾಗಿ ಸಾಗಿತ್ತು. ಅನೇಕ ಊರುಗಳನ್ನು ದಾಟಿ ಅವು ಜನಭರಿತವಾದ ಒಂದು ನಗರಕ್ಕೆ ಬಂದು ತಲುಪಿದವು. ಅವು ಅರಸ, ಮಂತ್ರಿ, ಮಾಂಡಲೀಕ, ಕವಿ, ನ್ಯಾಯಾಧೀಶ, ವ್ಯಾಪಾರಿ, ಜ್ಯೋತಿಷಿ ಹೀಗೆ ಎಲ್ಲರ ಬಳಿಯೂ ಹೋದವು. ಎಲ್ಲೆಲ್ಲಿ ಸುಳ್ಳು ಹೋಗುತ್ತಿತ್ತೋ ಅಲ್ಲಿಯ ಜನ ನಿರಾತಂಕವಾಗಿ ಜೀವಿಸುತ್ತಿದ್ದರು. ನಗುನಗುತ್ತಲೇ ಒಬ್ಬರಿಗೊಬ್ಬರು ಮೋಸ ಮಾಡುತ್ತಿದ್ದರು. ಎಂತಹ ಅನೈತಿಕ ಕೆಲಸ ಮಾಡಲೂ ಅವರು ಸಂಕೋಚಪಟ್ಟುಕೊಳ್ಳುತ್ತಿರಲಿಲ್ಲ. ಆದರೆ ಸತ್ಯ ಅವರ ಬಳಿ ಸಾಗಿದಾಗ ಅವರಲ್ಲಿ ಆತ್ಮಶೋಧನೆ ಆರಂಭವಾಗುತ್ತಿತ್ತು. ಇನ್ನೊಬ್ಬರಿಗೆ ಮೋಸ ಮಾಡಲು ಅವರ ಮನಸ್ಸು ಒಪ್ಪುತ್ತಿರಲಿಲ್ಲ. ತಪ್ಪು ಮಾಡಿದಾಗ ಒಬ್ಬರ ಕಣ್ಣಲ್ಲಿ ಇನ್ನೊಬ್ಬರು ಕಣ್ಣು ಹಾಕಿ ನೋಡಲು ಸಹ ಹೆದರುತ್ತಿದ್ದರು. ಯಾವಾಗ ಅವರಿಗೆ ಸತ್ಯದ ದರ್ಶನವಾಯಿತೋ ಆಗ ಅವರು ಅನ್ಯಾಯದ ವಿರುದ್ಧ ಸಿಡಿದೇಳತೊಡಗಿದರು. ಪೀಡಿತರು ಅತ್ಯಾಚಾರಿಗಳ ವಿರುದ್ಧ, ಗೇಣಿದಾರರು ಜಮೀನ್ದಾರರ ವಿರುದ್ಧ, ಗ್ರಾಹಕರು ವ್ಯಾಪಾರಿಗಳ ವಿರುದ್ಧ ಮಾಂಡಲೀಕರು ಸಾಮ್ರಾಟನ ವಿರುದ್ಧ ಕತ್ತಿಯನ್ನು ಮಸಿಯತೊಡಗಿದರು. ಎಲ್ಲೆಡೆ ರಕ್ತಪಾತವಾಗತೊಡಗಿತು. ಆಗ ಜನರು ಸತ್ಯದ ಸಹವಾಸದಿಂದ ಬೇಸತ್ತರು. ಅವರು ಸುಳ್ಳಿಗೆ ಹೇಳಿದರು, ''ದಯವಿಟ್ಟು ನೀನು ನಮ್ಮನ್ನು ಬಿಟ್ಟು ಹೋಗಬೇಡ ನೀನಿಲ್ಲದೆ ನಾವು ಜೀವಿಸಲಾರೆವು.''

ಅವರು ಸತ್ಯಕ್ಕೆ ಹೇಳಿದರು, ''ನೀನು ನಮಗೆ ಕೇವಲ ತೊಂದರೆಗಳನ್ನು ಮಾತ್ರ ತರುತ್ತೀ. ನೀನು ನಮ್ಮ ಬಳಿ ಸಾರಿದ ಕೂಡಲೇ ನಮಗೆ

ಆತ್ಮ ಶೋಧನೆ ಆರಂಭವಾಗಿ ಬಿಡುತ್ತದೆ. ಯಾವ ಅನೈತಿಕ ಕೆಲಸ ಮಾಡಲೂ ಮನಸ್ಸು ಒಪ್ಪುವು ದಿಲ್ಲ. ನಿನ್ನ ಸಂಪರ್ಕ ಮಾತ್ರದಿಂದ ಈ ಜಗತ್ತಿನಲ್ಲಿ ಎಷ್ಟೋ ಯೋಧರು, ಕವಿಗಳು, ಕಲಾವಿದರು ನೀನು ಬೋಧಿಸುವ ಒಣ ಆದರ್ಶಕ್ಕೆ ಬಲಿಯಾಗಿದ್ದಾರೆ. ನೀನು ಕೇವಲ ಆದರ್ಶವನ್ನು ಬೋಧಿಸುತ್ತೀ. ಬದುಕುವುದನ್ನು ಕಲಿಸುವುದಿಲ್ಲ. ನಿನ್ನ ಸಹವಾಸದಿಂದ ಯಾರಿಗೂ ಸುಖ ಸಿಕ್ಕಿಲ್ಲ. ಸಿಗುವುದೂ ಇಲ್ಲ. ಆದುದರಿಂದ ನಿನ್ನ ಸಹವಾಸ ನಮಗೆ ಬೇಡ ಇಲ್ಲಿಂದ ಹೊರಟು ಹೋಗು.

ಇದನ್ನು ಕೇಳಿ ಸುಳ್ಳು, ಸತ್ಯವನ್ನು ಹೀಯಾಳಿಸುತ್ತಾ ''ನೋಡಿದೆಯಾ ಜನರಿಗೆ ನಾನೆಷ್ಟು ಪ್ರಿಯವಾಗಿರುವೆನೆಂಬುದನ್ನು. ಎಲ್ಲೆಲ್ಲಿ ನಾವು ಹೋದೆವೋ ಅಲ್ಲಲ್ಲಿ ಜನ ನಿನಗಿಂತ ಹೆಚ್ಚಾಗಿ ನನ್ನನ್ನೇ ಸ್ವಾಗತಿಸಿದರು. ಈಗಲಾದರೂ ನಾನೇ ಹೆಚ್ಚು ಎಂದು ಒಪ್ಪಿಕೊಳ್ಳುವಿಯಾ?'' ಎಂದು ಸುಳ್ಳು ಬಿಂಕದಿಂದ ಕೇಳಿತು.

''ಒಪ್ಪಿದೆ ಗೆಳೆಯಾ ಈವರೆಗೆ ನಾವು ಜನರಿರುವ ಸ್ಥಳಗಳನ್ನು ಸಾಕಷ್ಟು ತಿರುಗಿದ್ದಾಯಿತು. ಈಗ ನಿರ್ಜನವಾದ ಪರ್ವತದ ತುದಿಗೆ ಹೋಗೋಣ. ಅಲ್ಲಿ ಸಾವಿರಾರು ವರ್ಷಗಳ ಋಷಿಮುನಿಗಳ ತಪಸ್ಸಿನ ಪ್ರಭೆಯಿದೆ. ಅವರ ಚಿಂತನೆ ಮತ್ತು ಉಪದೇಶಗಳ ಸಾರವಿದೆ. ಪೃಥ್ವಿಯ ಎಲ್ಲ ಬಂಧನಗಳಿಂದ ಮುಕ್ತರಾದವರು ಮಾತ್ರ ಅಲ್ಲಿ ಜೀವಿಸಬಲ್ಲರು. ಅಲ್ಲಿರುವ ಶುಭ್ರಶ್ವೇತ ಹಿಮ, ಸ್ಫಟಿಕದಂತಹ ನೀರು ಅಲ್ಲಿನ ಕಣಿವೆಗಳಲ್ಲಿ ಅರಳುವ ಹೂಗಳಿಗೆ ಕೇಳೋಣ ಯಾರು ಹೆಚ್ಚು ಎಂಬುದನ್ನು'' ಎಂದು ಸವಾಲು ಹಾಕಿತು ಸತ್ಯ. ಅದಕ್ಕೆ ಉತ್ತರಿಸಿದ್ದು ಸುಳ್ಳು, ''ನನ್ನಿಂದ ಸಾಧ್ಯವಿಲ್ಲ. ನಾನು ಅಲ್ಲಿಗೆ ಬರಲಾರೆ. ಅಷ್ಟು ಎತ್ತರಕ್ಕೆ ಏರಲು ನನಗೆ ಉಸಿರು ಕಟ್ಟಿದಂತಾಗುತ್ತದೆ'' ಎಂದು ಹೇಳಿತು.

''ಏಕೆ ನಿನಗೆ ಎತ್ತರವನ್ನು ಕಂಡರೆ ಹೆದರಿಕೆಯೇ?'' ಸತ್ಯ ಕೇಳಿತು. ''ಹೆದರಿಕೆಯೇನೂ ಇಲ್ಲ. ಆದರೆ ನಾನು ಅಲ್ಲಿ ಬಂದು ಮಾಡುವುದಾದರೂ ಏನು? ನನ್ನ ಆಟವೆಲ್ಲ ಜನರಿದ್ದಲ್ಲಿ ಮಾತ್ರ. ನನ್ನ ಆಳ್ವಿಕೆಯೆಲ್ಲ ಜನ ಸಾಮಾನ್ಯರ ಮೇಲೆ. ಇಡೀ ವಿಶ್ವದ ತುಂಬೆಲ್ಲ ನನ್ನ ಸಾಮ್ರಾಜ್ಯವೇ! ಆದರ್ಶದ ಬೆನ್ನು ಹತ್ತಿದ ಕೆಲವು ಸಾಹಸಿಗಳು ಮಾತ್ರ ನನ್ನನ್ನು ವಿರೋಧಿಸಿ ನಿನ್ನ ಮಾರ್ಗದ ಮೇಲೆ ಸಾಗುತ್ತಾರೆ. ಆದರೆ ಅದರಿಂದ ನನ್ನ ಸಾಮ್ರಾಜ್ಯಕ್ಕೇನೂ ಅಪಾಯವಿಲ್ಲ. ಏಕೆಂದರೆ ಇಂತಹ ಜನರು ಕೇವಲ ಬೆರಳೆಣಿಕೆಯಷ್ಟು ಮಾತ್ರ ಇರುತ್ತಾರೆ'' ಸುಳ್ಳು ನುಡಿಯಿತು. ''ನೀನು ಹೇಳುವುದು ನಿಜ ಗೆಳೆಯ. ಆದರೆ ಈ ಬೆರಳೆಣಿಕೆಯಷ್ಟು ಜನರೇ ಯುಗಪುರುಷರೆನಿಸಿಕೊಳ್ಳುತ್ತಾರೆ. ಅವರ ಹೆಸರುಗಳು ಅಜರಾಮರವಾಗುತ್ತವೆ. ನಿನ್ನ ಸಹವಾಸ ಮಾಡಿದವರು ಕಾಲಗರ್ಭದಲ್ಲಿ ಹೇಳಹೆಸರಿಲ್ಲದಂತೆ ಅಡಗಿ ಹೋಗುತ್ತಾರೆ'' ಎಂದು ಸತ್ಯ ಹೇಳಿತು.

(ಸಾಧಾರ) ●

---

ಪಶ್ಚಿಮ ಆಫ್ರಿಕದ ಮಾತ್ಯಾನಿ ಎಂಬ ಗುಡ್ಡಗಾಡು ಜನಾಂಗದವರು ಆಡುತ್ತಿದ್ದ ಕಾಲ್ಚೆಂಡಿನಾಟ ವಿಶಿಷ್ಟವಾದದ್ದು. ಅವರು ಆಟಕ್ಕೆ ಬಳಸುತ್ತಿದ್ದ ಚೆಂಡು ರಬ್ಬರಿನಿಂದ ಮಾಡಿದ್ದಲ್ಲ, ಮನುಷ್ಯರ ತಲೆಬುರುಡೆಗಳು!

★

ಸ್ಕಾಟ್‌ಲಂಡಿನಲ್ಲಿ ಡೆಂಕನ್ ಮ್ಯಾಟಕೈರ್ ಎಂಬ ಕವಿಯೊಬ್ಬ (ಕ್ರಿ.ಶ. 1724-1812) ಕಾವ್ಯರಚನೆಗಾಗಿ ಜಗತ್ಪ್ರಸಿದ್ಧಿ ಪಡೆದಿದ್ದ. ಅವನು ಸ್ವತಃ ಬರೆಯುತ್ತಿರಲಿಲ್ಲ; ಅದಕ್ಕಾಗಿ ಇಬ್ಬಿಬ್ಬರನ್ನು ನೇಮಿಸಿಕೊಂಡಿದ್ದ. ಸ್ವತಃ ಓದುತ್ತಿರಲಿಲ್ಲ; ಅದಕ್ಕೆಂದೇ ಒಂದಿಬ್ಬರನ್ನು ಸಂಬಳ ಕೊಟ್ಟು ಇಟ್ಟುಕೊಂಡಿದ್ದ. ಆತನಿಗೆ ಓದು-ಬರೆಹ ಬರುತ್ತಿರಲಿಲ್ಲ. ಅದಕ್ಕಾಗಿ ಆತ ಕೊನೆ ತನಕ ಪ್ರಯತ್ನಿಸಲೂ ಇಲ್ಲ.

★

ಪಶ್ಚಿಮ ಜರ್ಮನಿಯ ಡ್ಯೂಸೆಲ್ ಡಾರ್ಫ್ ಎಂಬ ಪಟ್ಟಣದ ನಿವಾಸಿ ಹೆನ್ರಿ ಲಾಫರ್ ಸತತ ಮತ್ತು ದಿನಗಳವರೆಗೆ ಎಡಗಣ್ಣು ಮುಚ್ಚಿ ಬಲಗಣ್ಣಿನ ರೆಪ್ಪೆಗಳನ್ನು ಬಡಿಯದೇ ಬಹುಮಾನ ಪಡೆದ.

ಎಂ. ಮೊಹಮ್ಮದ ಶಫಿ



# ಸದ್ದಾಂ ರೂಪುಗೊಂಡ ರೋಚಕ ಕಥೆ

ರವಿ ಬೆಳಗೆರೆ

ಮನುಷ್ಯನ ಸ್ವಭಾವವೇ ಹಾಗೆ. ಆತ ಅತಿರಂಜಿತ ಕಲ್ಪನೆಗಳಲ್ಲಿ ಸುಖಿಸುತ್ತಾನೆ. ನಮ್ಮ ಯಾವುದೇ ಕೃತಿಯನ್ನು ಓದಿ; ಅಲ್ಲಿರುವ ಪಾತ್ರಗಳಲ್ಲಿ ಎರಡೇ ಜಾತಿ. ಒಂದು ರಾಮಚಂದ್ರನ ಅಪರಾವತಾರ. ಮತ್ತೊಂದು ರಾವಣಾಸುರನ ವಿಕೃತ ಸೃಷ್ಟಿ!

ಈ ಮಾತು ಮೆಸೊಪಟೇಮಿಯಾದ ಚಿನ್ನದ ನೆಲದಲ್ಲಿ ಬೆಳೆದು ಭೂತಾಕಾರವಾಗಿ ನಿಂತ ಸದ್ದಾಮ್ ಹುಸೇನರಿಗೂ ಅನ್ವಯಿಸುತ್ತದೆ. ಕೆಲವರಿಗೆ ಆತ ಮಹೋತ್ಕಟ ಪ್ರವಾದಿ, ಅರಬ್ ರಾಷ್ಟ್ರಗಳ ಏಕೈಕ ರಕ್ಷಕ, ಮಹಾನ್ ವೀರನಾಗಿ ಕಂಡರೆ ಮತ್ತೆ ಕೆಲವರ ಕಣ್ಣಿಗೆ ರಕ್ತ ಪಿಪಾಸು, ಅಧಿಕಾರ ದಾಹಿ, ಲೋಭಿ, ಲಂಪಟ, ಈ ಶತಮಾನದ ಅತಿ ಕ್ರೂರ ಮನುಷ್ಯನಂತೆ ಕಾಣುತ್ತಾನೆ.

ಯಾವುದು ಸರಿ? ಎರಡೂ ತಪ್ಪೇ ಇರಬಹುದು. ಕೊಲ್ಲಿ ಯುದ್ಧದ ಬಗ್ಗೆ, ಅದರ ಸೋಲು-ಗೆಲುವು-ಪರಿಣಾಮಗಳ ಬಗ್ಗೆ ಜಗತ್ತಿನ ಎಲ್ಲ ಪತ್ರಿಕೆಗಳೂ ಸಾವಿರಾರು ಪುಟಗಳಷ್ಟು ಬರೆದಿವೆ. ಸುಮ್ಮನಾಗುತ್ತಿವೆ. ಆದರೆ ಸದ್ದಾಂರ ಖಾಸಗಿ ಬದುಕಿನ ಬಗ್ಗೆ ಈ ತನಕ ತಿಳಿದು ಬಂದಿರುವುದು ತೀರ ಕಡಿಮೆ. ಆ ನಿಟ್ಟಿನಲ್ಲಿ ಹೆಚ್ಚಿನ ಬೆಳಕು ಚೆಲ್ಲುವುದು 'ಕಸ್ತೂರಿ'ಯ ಪ್ರಯತ್ನ.

''ಅಂಥದೊಂದು ಕಾಲ ಬಂದೇ ಬರುತ್ತದೆ. ಜಗತ್ತಿನ ಅತ್ಯಂತ ಬಲಹೀನ ವ್ಯಕ್ತಿಯೂ ಕೂಡ ತನ್ನ ಅತ್ಯಂತ ಶಕ್ತಿಶಾಲಿ ಶತ್ರುವಿನ ವಿರುದ್ಧ ಸೇಡು ತೀರಿಸಿಕೊಳ್ಳುತ್ತಾನೆ. ಆತ ಸದಾ ಜಾಗೃತನಾಗಿದ್ದರೆ ಸಾಕು.''

★ ಮಾರಿಯೋ ಪ್ಯೂಜೋ

ಅವನಿನ್ನೂ ಏಳು ವರ್ಷಗಳ ಹುಡುಗ. ಹಾಲುಗೆನ್ನೆಯ ಮೇಲೆ ಏನೋ ಹೊಳಪು. ಬಿಟ್ಟ ಕಣ್ಣುಗಳಲ್ಲಿ ಎಂಥವೋ ಕನಸುಗಳು. ತನ್ನ ಮಣ್ಣು ಗೋಡೆಗಳ ಗುಡಿಸಲಿನ ಮೂಲೆಯಲ್ಲಿ ಮಲಗಿ ತನ್ನೊಂದಿಗೆ ತಾನೇ ಮಾತಾಡಿಕೊಳ್ಳುತ್ತಿದ್ದವನಿಗೊಂದು ಕರ್ಕಶವಾದ ದನಿ ಕೇಳಿಸುತ್ತದೆ,

''ಏಲೋ ಸೂಳೇ ಮಗನೇ ...... ಕುರಿ

ಯಾರು ನಿಮ್ಮಪ್ಪ ಕಾಯ್ತಾನಾ?'' ಹುಡುಗ ಬೆಚ್ಚಿ ಬೀಳುತ್ತಾನೆ. ಅದರ ಬೆನ್ನ ಹಿಂದೆಯೇ ಬೀಳುವ ಗುದ್ದುಗಳು ಅವನ ಕನಸುಗಣ್ಣಿನ ತುಂಬ ನೀರು ಮೂಡಿಸುತ್ತವೆ. ಹುಡುಗ ಕನಸುಗಳನ್ನು ಮಡಚಿಟ್ಟು ಕುರಿಗಳ ಹಿಂಡು ಬೆನ್ನಟ್ಟಿ ನಡೆಯತೊಡಗುತ್ತಾನೆ.

ಅವತ್ತಿನ ಆ ಮಂಕು ಕವಿದ ನೀರಸ ಮುಂಜಾನೆಯಲ್ಲಿ ಅಳುತ್ತಾ, ಶಪಿಸುತ್ತಾ ಕುರಿಗಳ ಹಿಂಡಿನ ಹಿಂದೆ ನಡೆಯುತ್ತಿದ್ದ ಹುಡುಗನಿಗಾಗಲೀ, ಅವನನ್ನು ಬೈದು ಆಚೆಗಟ್ಟಿದ ಅವನ ಮಲತಂದೆಗಾಗಲೀ, ಈ ಹುಡುಗ ಮುಂದೆ ಇಡೀ ಜಗತ್ತನ್ನೇ ಬೆಚ್ಚಿಸುತ್ತಾನೆಂಬ ಪರಿಕಲ್ಪನೆ ಖಂಡಿತ ಇರಲಿಲ್ಲ.

ಆ ಹುಡುಗನ ಹೆಸರು ಸದ್ದಾಂ ಹುಸೇನ್!

**ನರಳಿದನು ಬಾಲ್ಯದಲ್ಲಿ**

ಈಗ್ಗೆ ಐವತ್ಮೂರು ವರ್ಷಗಳ ಹಿಂದೆ ಏಪ್ರಿಲ್ 28, 1937ರಂದು ಟೈಗ್ರಿಸ್ ನದೀ ತೀರದ ತಕ್ರಿತ್ ಪಟ್ಟಣದ ಪಕ್ಕದ ಹಳ್ಳಿಯಾದ ಅಲ್‌ಔಜಾದಲ್ಲಿ ಒಂದು ಕಡುಬಡವ ಕುಟುಂಬದಲ್ಲಿ ಸದ್ದಾಂ ಜನಿಸಿದ. ಆ ಮನೆತನ, ಅವರ ವಾಸದ ಗುಡಿಸಲು, ಅಲ್‌ಔಜಾ ಹಳ್ಳಿ ಮತ್ತು ಇರಾಕದ ಅಂದಿನ ಸ್ಥಿತಿಗತಿಗಳೆಲ್ಲವಕ್ಕೂ ಒಂದೇ ತೆರನಾದ ಮಂಕು ಕವಿದಿತ್ತು. ಭೀಕರ ಬಡತನ! ಸುತ್ತಲಿನ ಮರಳುಗಾಡಿನ ಮರಳ ಕಣಗಳ ಮೇಲಿಂದ ಬೀಸಿ ಬಂದ ಗಾಳಿ ಇರಾಕದಾದ್ಯಂತ ಹರಡಿದ್ದು ದಾರುಣ ಹಸಿವು, ಬಡತನ ಮತ್ತು ಅಸ್ಥಿರತೆಯನ್ನು.

ಸದ್ದಾಮನ ಬಾಲ್ಯದ ಬಗ್ಗೆ ದೊರೆತಿರುವ ಮಾಹಿತಿ ಸಾಲದು. ತನ್ನ ಆ ನೋವಿನ ದಿನಗಳನ್ನು ಸದ್ದಾಂ ಸ್ಮರಿಸಿಕೊಳ್ಳಲು ಇಚ್ಛಿಸುವುದಿಲ್ಲವಂತೆ! ಆದರೆ ಕ್ರೌರ್ಯ, ಅಪಮಾನ, ನಿಂದೆಗಳನ್ನು ಮಾತ್ರ ಆತ ಯಥೇಚ್ಛವಾಗಿ ಅನುಭವಿಸಿದ್ದ. ಸದ್ದಾಂನ ತಂದೆ 'ಹುಸೇನ್ ಅಲ್ ಮಜೀದ್' ಸತ್ತಾಗ ಈತನಿನ್ನೂ ಹುಟ್ಟಿರಲಿಲ್ಲ ಎಂಬುದು ಒಂದು ಹೇಳಿಕೆಯಾದರೆ, ಈತ ಹುಟ್ಟಿದ ಕೆಲ ತಿಂಗಳಲ್ಲೇ ಅವನ ತಂದೆ ಮರಣಿಸಿದನೆಂಬುದು ಮತ್ತೊಂದು ಹೇಳಿಕೆ. ಉಹುಂ, ಅದೂ ಅಲ್ಲ - ಸದ್ದಾಂನ ತಂದೆ ಯಾವುದೋ ಕಾರಣಕ್ಕೆ ಬೇಸತ್ತು ಹೆಂಡತಿ ಮಕ್ಕಳನ್ನು ಬಿಟ್ಟು ಹೋಗಿದ್ದ ಎಂಬುದಾಗಿ ಇರಾಕದ ಅಧ್ಯಕ್ಷ ಸದ್ದಾಂ ಹುಸೇನರ ಮಾಜಿ ಕಾರ್ಯದರ್ಶಿಯೊಬ್ಬರು ಅಮೆರಿಕದಲ್ಲಿ ಹೇಳಿಕೆ ಕೊಟ್ಟಿದ್ದಾರೆ.

ಒಟ್ಟಿನಲ್ಲಿ ಸದ್ದಾಂ ಬಾಲ್ಯದಿಂದಲೇ ತಂದೆಯ ಪ್ರೀತಿಗೆ ಎರವಾಗಿದ್ದ. ಅವನ ತಾಯಿ 'ಸುಭಾ' ಗಂಡನಿಂದ ಬೇರೆಯಾದ ಮೇಲೆ ಕೆಲ ವರ್ಷಗಳ ಕಾಲ ಮಕ್ಕಳನ್ನು ಕಟ್ಟಿಕೊಂಡು ಒಬ್ಬಂಟಿಯಾಗಿದ್ದಳು. ಆದರೆ ಇನ್ನೂ ಆಕೆಯ ಯೌವ್ವನ ಕಾಲ ಮುಗಿದಿರಲಿಲ್ಲ. ಇಬ್ರಾಹಿಂ ಹಸನ್ ಎಂಬ ವಿವಾಹಿತ ಹಳ್ಳಿಗನೊಂದಿಗೆ ಆಕೆ ಸಂಬಂಧ ಬೆಳೆಸಿದಳು. ಇಸ್ಲಾಂ ಧರ್ಮದ ಕಟ್ಟಳೆಗಳು ಅನುಮತಿಸಿದಂತೆ ಆತ ಮರುಮದುವೆ ಮಾಡಿಕೊಳ್ಳಬಹುದಾಗಿತ್ತಾದರೂ, ಸುಭಾ ತನ್ನ ಪತಿಯ ಮೊದಲ ಪತ್ನಿಯನ್ನು ಆತನಿಂದ ಬೇರ್ಪಡಿಸಿದ ನಂತರವೇ ಆತನ ಕೈ ಹಿಡಿದಳಂತೆ. ಶುದ್ಧ ಒರಟನೂ, ಕ್ರೂರಿಯೂ ಆಗಿದ್ದ ಇಬ್ರಾಹಿಂ ಹಸನ್‌ನ ಕಂಗಳಿಗೆ ಪುಟ್ಟ ಹುಡುಗ ಸದ್ದಾಂ ಶನಿ ಸಂತಾನದಂತೆ ಕಂಡಿದ್ದ. 'ನಿನ್ನ ಈ ನಾಯಿ ಮಗನ ಮುಖ ಕಂಡರೆ ನನಗಾಗದು' ಎಂದು ಸುಭಾಳಿಗೆ ಹೇಳುತ್ತಿದ್ದ. ಕೇವಲ ಕುರಿ ಕಾಯುವುದಲ್ಲ, ಸದ್ದಾಂನನ್ನು ಕೋಳಿ ಕದಿಯುವ ಕೆಲಸಕ್ಕೂ ಹಚ್ಚುತ್ತಿದ್ದ. ಅವನು ಕದ್ದು ತಂದ ಕೋಳಿಗಳನ್ನು ಮಲತಂದೆ ಮಾರಿ ಚೈನಿ ಹೊಡೆಯುತ್ತಿದ್ದರೆ ಬಾಲಕ ಸದ್ದಾಂ ಅವಮಾನದಿಂದ ಭುಸುಗುಡುತ್ತಿದ್ದ.

ಅಂಥ ಕೆಟ್ಟ ವಾತಾವರಣದಲ್ಲಿ ಬೆಳೆದ ಸದ್ದಾಂ ತನ್ನ ಸೋದರ ಸಂಬಂಧಿಯಾದ ಅದ್ನಾನ್ ಖೈರುಲ್ಲಾ ಶಾಲೆಗೆ ಹೋಗುತ್ತಿದ್ದುದನ್ನು ಆಸೆಯಿಂದ ನೋಡುತ್ತಿದ್ದ. ಆದರೆ ಕುರಿ ಕಾಯುವುದು ಬಿಟ್ಟು ಶಾಲೆಗೆ ಹೊರಟು ನಿಂತ ಮಲಮಗನನ್ನು ಅವನ ತಂದೆ ಪ್ರಾರಂಭದಲ್ಲೇ ಒದ್ದು 'ದಾರಿಗೆ ಹಚ್ಚಿದ್ದ!' ಆದರೆ 1947ರ ಹೊತ್ತಿಗೆ ಸದ್ದಾಂ ವಿಶ್ವ ಪ್ರಯತ್ನ ಮಾಡಿ ಶಾಲೆಗೆ ಸೇರಿಯೇ ಬಿಟ್ಟ. ಅವನಿಗಾಗ ಹತ್ತು ವರ್ಷ ವಯಸ್ಸು. ಮುಂದೆ ಆತ ಅದ್ನಾನ್ ಖೈರುಲ್ಲಾನ ತಂದೆಯೂ, ತಾಯಿಯ ಸೋದರನೂ ಆಗಿದ್ದ

ಖೈರುಲ್ಲಾ ತುಲ್ಫಾರವರಲ್ಲಿಗೆ ಹೋದ. ಮೊಟ್ಟ ಮೊದಲ ಬಾರಿಗೆ ಅವನು ಬಾಗ್ದಾದ್ ನಗರಿಯನ್ನು ನೋಡಿದ್ದ. ತನ್ನ ಹಳ್ಳಿಯಂತೆಯೇ, ತಕ್ರಿತ್ ನಗರದಂತೆಯೇ ಘೋರ ಬಡತನ, ರಾಜಕೀಯ ಅಸ್ಥಿರತೆಗಳನ್ನು ಹೊದ್ದು ಮಲಗಿದ ನಗರವಾಗಿತ್ತು ಬಾಗ್ದಾದ್.

**ಅಲ್ಲಿ ಬಾಗ್ದಾದಲ್ಲಿ**

ಸೋದರ ಮಾವ ಖೈರುಲ್ಲಾ ತುಲ್ಫಾ ಬಾಗ್ದಾದದಲ್ಲಿ ಶಿಕ್ಷಕರಾಗಿದ್ದವರು. ಹಿಂದೊಮ್ಮೆ ನಡೆದ ನಾಜಿವಾದಿಗಳ ಸೈನಿಕ ಕ್ರಾಂತಿಯನ್ನು ಬೆಂಬಲಿಸಿ ಬ್ರಿಟಿಷರಿಂದ ಶಿಕ್ಷೆಗೊಳಗಾದವರು. ಹೀಗಾಗಿ ಅವರ ಮನದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳ ವಿರುದ್ಧ ವಿಚಿತ್ರವಾದ ಅಸಹನೆ, ದ್ವೇಷಗಳಿದ್ದವು. ಅವರ ನೆರಳಿನಲ್ಲಿ ಬೆಳೆದ ಸದ್ದಾಂ ಸಹಜವಾಗಿಯೇ ಅದೇ ಅಸಹನೆ, ದ್ವೇಷಗಳನ್ನು ಪಾಶ್ಚಿಮಾತ್ಯರೆಡೆಗೆ ಬೆಳೆಸಿಕೊಂಡ. ತೀರ ತಡವಾಗಿ ಶಾಲೆಗೆ ಸೇರಿದ ಸದ್ದಾಂ ಕುಂಟುತ್ತ, ಎಡವುತ್ತಾ ತನ್ನ ಮಾಧ್ಯಮಿಕ ಶಾಲೆ ಮುಗಿಸುವ ಹೊತ್ತಿಗೆ ಅವನಿಗೆ ಹದಿನಾರು ತುಂಬಿತ್ತು.

**ಬಂಬೂಕು ಪ್ರೇಮ**

ಅದು ಮಲತಂದೆಯ ಮೇಲಿನ ಕೋಪವೋ, ಬಡತನದಲ್ಲಿ ಬೆಳೆದ ಪರಿಣಾಮವೋ ಒಟ್ಟಿನಲ್ಲಿ ಬಾಲ್ಯದಿಂದಲೂ ಸದ್ದಾಂನನ್ನು ಆಕರ್ಷಿಸಿದ್ದು 'ಬಂದೂಕು'! ಆದರೆ ಶಾಲೆಯಲ್ಲಿ ಪೆದ್ದನೆನಿಸಿಕೊಂಡ ಕಾರಣಕ್ಕಾಗಿ ಸದ್ದಾಂ ಅಂದಿನ ಬಾಗ್ದಾದ್ ಮಿಲಿಟರಿ ಅಕಾದೆಮಿಯೊಳಕ್ಕೆ ಸೇರುವಲ್ಲಿ ವಿಫಲನಾದ.

ಅಲ್‌ಔಜಾಕ್ಕಿಂತ ವಿಭಿನ್ನ ವಾತಾವರಣವನ್ನು ಬಾಗ್ದಾದ್ ನೀಡಿತ್ತಾದರೂ ಸದ್ದಾಂ ಯಾವಾಗಲೂ ತನ್ನ ತಕ್ರಿತ್ ನಾಡಿನ ಗೆಳೆಯರೊಂದಿಗೇ ಇರುತ್ತಿದ್ದ. ಈ ತಕ್ರಿತ್ ನಾಡಿಗೂ ತನ್ನದೇ ಆದ ಆಕ್ರೋಶಪೂರ್ಣ ಇತಿಹಾಸವಿತ್ತು. ಒಂದು ಕಾಲಕ್ಕೆ ಮರದ ವಸ್ತುಗಳ ತಯಾರಿಕೆ, ವ್ಯಾಪಾರಗಳಿಂದ ಸಮೃದ್ಧವಾದ ನಾಡು ಕಾಲಾಂತರದಲ್ಲಿ ಬಡತನದ ಅಭಿಶಾಪಕ್ಕೆ ತುತ್ತಾಗಿತ್ತು. ಅಲ್ಲಿನ ಯುವಕರಿಗೆ ಏನೋ ಕೀಳರಿಮೆ. ಹೇಗಾದರೂ ಮಾಡಿ ಎಲ್ಲರ ಕಣ್ಣು ಸೆಳೆಯುವ ಅಭಿಲಾಷೆ. ಮತ್ತೊಂದು ವಿಶೇಷವೆಂದರೆ, ತಕ್ರಿತ್ ಇರಾಕದ ಬಹುಪಾಲು ಸುನ್ನಿಗಳು ನೆಲೆಗೊಂಡಿದ್ದ ಪ್ರದೇಶ. ಸುನ್ನಿಗಳು ಇರಾಕದಲ್ಲಿ ಮೊದಲಿನಿಂದಲೂ ಅಲ್ಪ ಸಂಖ್ಯಾತರೇ. ಬಹುಸಂಖ್ಯಾತರಾಗಿದ್ದ ಷಿಯಾಗಳು ಇವರನ್ನು ಕಡೆಗಣಿಸುತ್ತಿದ್ದರು. ಇದೂ ಕೂಡ ಸದ್ದಾಂರಂತಹ ಅಂದಿನ ಯುವಕರಿಗೆ ವಿಕ್ಷಿಪ್ತತೆಯನ್ನು ಒದಗಿಸಿರಲು ಕಾರಣವಾಗಿರಬಹುದು. ಆಗ ಸದ್ದಾಂ ತನ್ನ ಮಾವನೊಂದಿಗೆ ಟೈಗ್ರಿಸ್‌ನ ಪಶ್ಚಿಮ ತೀರದಲ್ಲಿ ಒಂದು ಬಡಕುಟುಂಬಗಳ ಸಮೂಹದಲ್ಲಿ ವಾಸವಾಗಿದ್ದ.



ಅವನು ಎಂಥ ಇರಾಕನ್ನು ಕಂಡಿದ್ದು? ಐದುನೂರು ವರ್ಷಗಳ ಕಾಲ ಅಖಂಡವಾಗಿ ಇರಾಕನ್ನು ಓಟ್ಟೋಮನ್ ತುರ್ಕೀಯರು ಆಳಿದ್ದರು. ಆ ನಂತರ ಆಳಿದ ಬ್ರಿಟಿಷರು 1932ರಲ್ಲಿ ಇರಾಕನ್ನು ಬಿಟ್ಟು ಹೋಗಿದ್ದರು. ಅವರು ಹೋದ ಐದು ವರ್ಷಗಳ ನಂತರ ಹುಟ್ಟಿದ ಸದ್ದಾಂಗೆ ಬುದ್ಧಿ ತಿಳಿಯುವ ಹೊತ್ತಿಗೆ ಇರಾಕಿ ಸೈನ್ಯಗಳು ಆ ನೆಲದ ಅಸೀರಿಯನ್ನರನ್ನೂ, ಯಹೂದಿಗಳನ್ನು ಹೇಳಹೆಸರಿಲ್ಲದಂತೆ ಮಾಡಿದ್ದರು. ಇರಾಕಿನ ತುಂಬ ಸೈನ್ಯವೇ ಸೈನ್ಯ! ಸದ್ದಾಂ ವಿದ್ಯಾರ್ಥಿಯಾಗಿದ್ದಾಗಲಂತೂ ಇರಾಕಿನ ಅತಿ ಕೆಟ್ಟ ದಿನಗಳು ನಡೆಯುತ್ತಿದ್ದವು. ರಾಜಕೀಯ ಕೊಲೆಗಳ ಹಬ್ಬ ನಡೆದಿತ್ತು. 1952ರಲ್ಲಿ ಸದ್ದಾಂ ಒಂದು ಸಚೇತನ ರೋಮಾಂಚನಕ್ಕೊಳಗಾದ. ಈಜಿಪ್ತದ ರಾಜರ ಆಳ್ವಿಕೆಯನ್ನು ಅಂತ್ಯಗೊಳಿಸಿದ ಗಮಾಲ್ ಅಬ್ದುಲ್ ನಾಸೀರ್ ಇಡೀ ಅರಬ್ ಸಮೂಹಕ್ಕೆ

ಆಶಾಕಿರಣವಾಗಿ ಕಂಗೊಳಿಸಿದ್ದ. ಪ್ರಾರಂಭದಲ್ಲಿ ಈಜಿಪ್ತದ ರಾಜಮನೆತನದ ಪತನವನ್ನು ಅಮೆರಿಕ ಬೆಂಬಲಿಸಿತಾದರೂ, ನಾಸಿರ್ ಕಮ್ಯೂನಿಸ್ಟ್ ರಷಿಯಾದತ್ತ ಸ್ನೇಹಹಸ್ತ ಚಾಚಿದಾಗ ಪಶ್ಚಿಮಕ್ಕೆ ಇರಿಸುಮುರಿಸಾಯಿತು. ಸುಯೆಜ್ ಕಾಲುವೆಯನ್ನು ನಾಸೀರ್ ರಾಷ್ಟ್ರೀಕೃತಗೊಳಿಸಿದಾಗಲಂತೂ 1956ರಲ್ಲಿ ಫ್ರಾನ್ಸ್, ಬ್ರಿಟನ್ ಮತ್ತು ಇಸ್ರೇಲ್‌ಗಳು ಈಜಿಪ್ತವನ್ನು ಮುತ್ತಿದವು. ಆದರೆ ಅಂತಿಮ ಜಯ ನಾಸೀರ್‌ನದಾಗಿತ್ತು. ಇಸ್ರೇಲಿಗಳನ್ನು ಬಗ್ಗು ಬಡಿದ ಆತ ಅರಬರ ಕಣ್ಮಣಿಯಾಗಿಬಿಟ್ಟ. ಅಂತೆಯೇ ಸದ್ದಾಂ ನಾಸೀರ್‌ನ ಆರಾಧಕನಾಗಿದ್ದ.

ಆಗಿನ್ನೂ ಸದ್ದಾಂಗೆ ಹತ್ತೊಂಬತ್ತು ವರ್ಷ. ಈಜಿಪ್ತದಲ್ಲಾದಂತೆಯೇ ಇರಾಕದಲ್ಲೂ ಅಂದಿನ ರಾಜಮನೆತನದ ವಿರುದ್ಧ ಒಂದು ಮಿಲಿಟರಿ ದಂಗೆಯಾಯಿತು. ಅದು ವಿಫಲವಾಯಿತಾದರೂ, ಆ ತನಕ ಕೈಲಿ ಬಂದೂಕು ಹಿಡಿಯದ ಯುವಕ ಸದ್ದಾಂ ಮೊದಲ ಬಾರಿಗೆ ಬಂದೂಕಿನ ಮೊರೆತ ಕೇಳಿ ಪುಳಕಿತನಾಗಿದ್ದ. ಯಾವುದೇ ಸೈನಿಕ ತರಬೇತಿ ಹಿನ್ನೆಲೆಗಳಿಲ್ಲದ ವ್ಯಕ್ತಿಯೊಬ್ಬ ಮಿಲಿಟರಿ ದಂಗೆಯಲ್ಲಿ ಪಾಲ್ಗೊಂಡಿದ್ದು ಅದೇ ಮೊದಲ ಬಾರಿ. ಮುಂದಿನ ವರ್ಷ ಆತ 'ಬಾತ್' ಪಕ್ಷ ಸೇರಿದ. ಅಧಿಕಾರವಿಲ್ಲದ, ಗುರುತಿಸುವಿಕೆಗೂ ಅರ್ಹವಲ್ಲದ ಅಂದಿನ ಬಾತ್ ಪಕ್ಷದಲ್ಲಿ ಕೇವಲ 300 ಜನ ಸದಸ್ಯರಿದ್ದರು.

**ಮೊದಲ ಕೋಟೆ**

1958ರಲ್ಲಿ ರಾಷ್ಟ್ರೀಯ ಸೈನ್ಯವೊಂದರ ನೆರವಿನಿಂದ ಬಾತ್ ವಿರೋಧಿ ಗುಂಪಿನ ನಾಯಕನಾಗಿದ್ದ ಅಬ್ದುಲ್ ಕರೀಮ್ ಕಾಸಿಮ್ ಇರಾಕದ ದೊರೆ ಎರಡನೇ ಫೈಸಲ್‌ನನ್ನು ಪದಚ್ಯುತಗೊಳಿಸಿದ. ದೊರೆಯನ್ನು ಕೊಲ್ಲಲಾಯಿತು. ಹೀಗೆ ಮತ್ತೊಂದು ಗುಂಪು ಅಧಿಕಾರ ಕಬಳಿಸಿದುದನ್ನು ಅಸಹಾಯಕರಾಗಿ ನೋಡುತ್ತ ನಿಲ್ಲುವ ಪಾಳಿ ಬಾತ್ ಪಕ್ಷದವರದಾಗಿತ್ತು. ಆದರೆ 1959ರಲ್ಲಿ ಕೆಲವು ಯುವಕರು ಕೈಗಳಲ್ಲಿ ಮಷೀನುಗನ್ನು ಹಿಡಿದು ಬಾಗ್ದಾದದ ರಸ್ತೆಯಲ್ಲಿ ಓಡುತ್ತಿದ್ದ ಕಾಸಿಮ್‌ರ ಕಾರಿನ ಮೇಲೆ ಗುಂಡಿನ ಮಳೆಗರೆದರು. ಅದರ ನೇತೃತ್ವವನ್ನು ಸದ್ದಾಂ ವಹಿಸಿದ್ದ. ಆ ಹೊತ್ತಿಗಾಗಲೇ ಆತ ತಕ್ರಿತ್‌ನ ಕಮ್ಯುನಿಸ್ಟನೊಬ್ಬನನ್ನು ಹಾಡಹಗಲೇ ಕೊಂದು ಕುಖ್ಯಾತನಾಗಿದ್ದ. ಅದರಲ್ಲೂ ಕಾಸಿಮ್‌ನ ಬೆಂಬಲಿಗನಾದ ಕಮ್ಯುನಿಸ್ಟನೊಬ್ಬನನ್ನು ಕೊಂದದ್ದು ಆತನಿಗೆ ಹೆಮ್ಮೆಯ ವಿಷಯವಾಗಿತ್ತು. ಅದಕ್ಕಿಂತ ಹೆಚ್ಚಿನ ಹೆಮ್ಮೆಯೆಂದರೆ ಕೊಲ್ಲಲ್ಪಟ್ಟ ವ್ಯಕ್ತಿ ಸದ್ದಾಂನ ಭಾವ ಮೈದುನನಾಗಿದ್ದ! ಈ ಕೊಲೆಗೆ ಸದ್ದಾಂನ ಮಾವ ಪ್ರೇರಣೆಯಾಗಿದ್ದುದರಿಂದ ಅವರಿಬ್ಬರೂ ಬಂಧಿತರಾಗಿದ್ದರು ಮತ್ತು ಕೆಲಕಾಲದ ನಂತರ ಬಿಡುಗಡೆಯೂ ಆಗಿದ್ದರು. ರಾಜಕೀಯ ಕೊಲೆಗಳು ಇರಾಕದಲ್ಲಿ ಸಾಮಾನ್ಯವಾಗಿದ್ದ ಕಾಲವದು.

ಮುಂದೆ ಕಾಸೀಮ್ ಮೇಲೆ ನಡೆದ ವಿಫಲ ಕೊಲೆ ಯತ್ನದ ಘಟನೆ ಸದ್ದಾಂನನ್ನು ನಿಜಕ್ಕೂ 'ಹೀರೋ' ಆಗಿಸಿತ್ತು. ಇದಕ್ಕೆ ಸಂಬಂಧಿಸಿದಂತೆ ಎರಡು ಕತೆಗಳಿವೆ. ಕೊಲೆಯತ್ನದಲ್ಲಿ ಸದ್ದಾಂ ತೀವ್ರವಾಗಿ ಗಾಯಗೊಂಡ. ಗುಂಡೊಂದು ಆತನ ತೊಡೆಯಾಳದಲ್ಲಿ ಹುದುಗಿಹೋಗಿತ್ತು. ತನ್ನ ಸಹಚರನನ್ನು ಕರೆದು ಚೂರಿಯಿಂದ ತೊಡೆಯನ್ನು ಅಗೆದು ಗುಂಡನ್ನು ಹೊರ ತೆಗೆಯಿಸಿಕೊಂಡ ಸದ್ದಾಂ, ಆ ನೋವಿನಿಂದ ಎಚ್ಚರ ತಪ್ಪಿದ. ಮುಂದೆ ಅಲೆಮಾರಿ ಬುಡಕಟ್ಟಿನವನ ವೇಷ ಧರಿಸಿ ಟೈಗ್ರಿಸ್ ನದಿಯನ್ನು ದಾಟಿ, ಕತ್ತೆಯೊಂದರ ಮೇಲೆ ಕುಳಿತು ಮರುಭೂಮಿಯನ್ನು ಹಾಯ್ದು ಸಿರಿಯಾವನ್ನು ತಲುಪಿದ ರೋಚಕ ಕಥೆಯನ್ನು ಸದ್ದಾಂ ಪ್ರಿಯರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಮತ್ತೊಂದು ಹೇಳಿಕೆಯ ಪ್ರಕಾರ, ಸದ್ದಾಂಗೆ ತಗುಲಿದ್ದು ಮಾಮೂಲಿ ಪೆಟ್ಟು. ಆತ ಗುಟ್ಟಾಗಿ ವೈದ್ಯನೊಬ್ಬನಿಂದ ಚಿಕಿತ್ಸೆ ಪಡೆದು ಸಿರಿಯಾಕ್ಕೆ ಪಾರಾಗಿ ಹೋದ. ಮುಂದೆ 1968ರಲ್ಲಿ ಆ ವೈದ್ಯನ ಋಣ ತೀರಿಸಲೆಂದೇ ಆತನನ್ನು ಬಾಗ್ದಾದ್ ಮೆಡಿಕಲ್ ಕಾಲೇಜಿನ ಮುಖ್ಯಸ್ಥನನ್ನಾಗಿ ಮಾಡಿದ.

ಕತೆಗಳೇನೇ ಇರಲಿ, ಸದ್ದಾಂ ಸಿರಿಯಾದಿಂದ ಈಜಿಪ್ತದ ರಾಜಧಾನಿಯಾದ ಕೈರೋ ತಲುಪಿದ.

ಈಜಿಪ್ತ್ ಸರ್ಕಾರದ ಹಣ ಸಹಾಯ ಪಡೆದು ನಾಲ್ಕು ವರ್ಷ ಅಲ್ಲೇ ನೆಲೆಸಿ ತನ್ನ ಇಪ್ಪತ್ತನಾಲ್ಕನೇ ವಯಸ್ಸಿನಲ್ಲಿ ಆತ ಹೈಸ್ಕೂಲು ವಿದ್ಯಾಭ್ಯಾಸ ಮುಗಿಸಿದ. ಈ ಅವಧಿಯಲ್ಲಿ ಆತ ಎರಡು ಬಾರಿ ಜೇಲು ಪಾಲಾಗಿದ್ದ. ಒಮ್ಮೆ ಇರಾಕಿ ವಿದ್ಯಾರ್ಥಿಯೊಬ್ಬನನ್ನು ರಾಜಕೀಯ ಭಿನ್ನಾಭಿಪ್ರಾಯಗಳಿಗಾಗಿ ಕೊಲೆ ಮಾಡಲು ಆತ ಹವಣಿಸಿದ್ದ. ಮತ್ತೊಮ್ಮೆ ಒಬ್ಬ ಬಾತ್ ಪಕ್ಷದ ವಿದ್ಯಾರ್ಥಿಯನ್ನು ಇರಿದು ಹಾಕಲು ಯತ್ನಿಸಿ, ಆತನನ್ನು ಕೈರೋದ ಬೀದಿಬೀದಿಗಳಲ್ಲಿ ಓಡುವಂತೆ ಮಾಡಿದ್ದ. ಅದೇ ವಿದ್ಯಾರ್ಥಿ ಮುಂದೆ ಜೋರ್ಡಾನದ ವಾರ್ತಾ ಮಂತ್ರಿಯಾದನೆಂಬುದು ಬೇರೆ ಸಂಗತಿ.

1961ರಲ್ಲಿ ಕೈರೋ ವಿಶ್ವವಿದ್ಯಾಲಯದ ಕಾನೂನು ಪದವಿ ಕೋರಿ ತರಗತಿಗೆ ಸೇರಿದ ಸದ್ದಾಂ ಒಂಬತ್ತು ವರ್ಷಗಳ ನಂತರ 1970ರಲ್ಲಿ ಕಾನೂನು ಪದವಿ ಪಡೆದ. ಆದರೆ ಆ ಹೊತ್ತಿಗೆ ಆತ ಇರಾಕದ ಅತ್ಯಂತ ಪ್ರಮುಖ ರಾಜಕಾರಣಿಯಾಗಿದ್ದ ಮತ್ತು ಪದವಿಯನ್ನು ಬಾಗ್ದಾದಕ್ಕೇ ತರಿಸಿಕೊಂಡ! ಅದೊಂದು ಗೌರವ ಪದವಿಯಾಗಿತ್ತು.

**ಮದುವೆ - ಪದವಿ**

ಕೈರೋದಲ್ಲಿದ್ದಾಗಲೇ 1963ರಲ್ಲಿ ಸದ್ದಾಂ ತನ್ನ ಮಾವನ ಮಗಳಾದ ಸಜೀದಾಳನ್ನು ವಿವಾಹವಾದ. ಅಷ್ಟರಲ್ಲಿ ಇರಾಕ್‌ನ ಬಾತ್ ಪಕ್ಷದ ಕಾರ್ಯಕರ್ತರು ಬಾಗ್ದಾದ್‌ನಲ್ಲಿ ಅಂದಿನ ಅಧ್ಯಕ್ಷ ಕಾಸೀಮ್‌ರನ್ನು ಕೊಲೆ ಮಾಡಿದ ಸುದ್ದಿ ಕೈರೋ ತಲುಪಿತ್ತು. ಸದ್ದಾಂ ತನ್ನ ಓದಿಗೆ ಶರಣು ಹೇಳಿ ಇರಾಕಕ್ಕೆ ಓಡಿ ಬಂದ. ಕೊಲೆಯಾದ ಆಡಳಿತಗಾರ ಕಾಸೀಮ್ ಇರಾಕದಲ್ಲಿ ತುಂಬ ಜನಪ್ರಿಯ ವ್ಯಕ್ತಿಯಾಗಿದ್ದರು. ಜನಪ್ರಿಯತೆ ಯಾವ ಮಟ್ಟದ್ದಿತ್ತೆಂದರೆ ಕಾಸೀಮ್‌ರ ಕೊಲೆಯಾಗಿದೆಯೆಂಬುದನ್ನೇ ಇರಾಕದ ಜನ ನಂಬಲಿಲ್ಲ. ಆತ ಎಲ್ಲೋ ಅಡಗಿಕೊಂಡಿದ್ದು ಇಂದಲ್ಲ ನಾಳೆ ಹೊರಬಂದಾನೆಂದೇ ಕಾಯುತ್ತಿದ್ದರು. ಆತ ಮರಣಿಸಿರುವುದನ್ನು ಜನರಿಗೆ ಖಚಿತಪಡಿಸಲು ಬಾತ್ ಪಕ್ಷದ



''ನಿಮ್ಮ ಯಜಮಾನರು ಇರಾನ್‌ನಲ್ಲಿ ಇದ್ದಾರೆ ಅಂತೀರಾ, ನೀವೇಕೆ ಅಲ್ಲಿಂದ ಒಂದೆರಡು ಡಬ್ಬ ಸೀಮೆ ಎಣ್ಣೆ ತರಿಸಬಾರದು .....''

ಧುರೀಣರು ಒಂದು ಅನಾಗರೀಕ ವಿಧಾನವನ್ನು ಅನುಸರಿಸಬೇಕಾಯಿತು. ಬಂದೂಕಿನ ಗುಂಡುಗಳಿಂದ ತೂತುತೂತಾಗಿ ಹೋಗಿದ್ದ ಕಾಸೀಮರ ಶವವನ್ನು ಕುರ್ಚಿಯೊಂದರ ಮೇಲೆ ಕೂಡಿಸಿ, ದೇಹದ ಪ್ರತಿ ಗಾಯಗೊಂಡ ಭಾಗವನ್ನು ದೂರದರ್ಶನದಲ್ಲಿ ತೋರಿಸಲಾಗುತ್ತಿತ್ತು. ಕಾರ್ಯಕ್ರಮದ ಕೊನೆಯಲ್ಲಿ ಕಾಸೀಮ್‌ರ ಶವವನ್ನೆಳೆದು ಹಾಕಿ ಅದರ ಮುಖಕ್ಕೆ ಸೈನಿಕನೊಬ್ಬನು ಕ್ಯಾಕರಿಸಿ ಉಗಿಯುವ ದೃಶ್ಯವನ್ನು ಎಷ್ಟೊಂದು ನಿರ್ದಯವಾಗಿ ಪ್ರದರ್ಶಿಸಲಾಗುತ್ತಿತ್ತೆಂದರೆ, ಅದನ್ನು ನೋಡಿದ ಯಾವುದೇ ಇರಾಕಿ ಪ್ರಜೆಯ ಮನಸ್ಸಿನಲ್ಲಿ ಅದು ಅಚ್ಚಳಿಯದೇ ಉಳಿದುಹೋಗುತ್ತಿತ್ತು.

ಸದ್ದಾಂನಿಗಾಗ ಕೇವಲ ಇಪ್ಪತ್ತಾರು ವರ್ಷ. ಅದು ಆಸೆಗಳ ವಯಸ್ಸು. ಬಾತ್ ಪಕ್ಷದಲ್ಲಿ, ಸರಕಾರದಲ್ಲಿ ಒಂದು ಖಚಿತವಾದ ನೆಲೆಗಳಿಸಿಕೊಳ್ಳಬೇಕೆಂಬ ಹಂಬಲ ಹೆಡೆ ಬಿಚ್ಚಿತ್ತು. ಆತ ಬಾತ್ ಸರಕಾರದ ಸೇವೆಗೆ 'ಇಂಟರೋಗೇಟರ್ ಮತ್ತು ಟಾರ್ಚರರ್' ಆಗಿ ಸೇರಿಕೊಂಡ. ರಾಜಕೀಯ ಖೈದಿಗಳನ್ನು ಪ್ರಶ್ನಿಸುವ ಮತ್ತು ಹಿಂಸಿಸಿ ಬಾಯಿ



ಬಿಡಿಸುವ ಕಟುಕರ ಖಾನೆಯ ಅಧಿಪತಿಯಾಗಿ ನೇಮಕಗೊಂಡ. 'ಕ್ವಸರ್-ಅಲ್-ನಿಹಯ್ಯಾಹ್' (ಅಂತ್ಯದ ಅರಮನೆ) ಎಂದು ಹೆಸರಿಸಲಾಗಿದ್ದ ಅರಮನೆಯಲ್ಲಿ ಈ ಕಟುಕರ ಕಾರ್ಯಾಚರಣೆ ನಡೆಯುತ್ತಿತ್ತು. ಹಿಂದಿನ ದೊರೆ ಎರಡನೇ ಫೈಜಲ್‌ನನ್ನು ಕಾಸಿಮ್ ಇದೇ ಅರಮನೆಯಲ್ಲಿ ಕೊಲೆಗೈದಿದ್ದರಿಂದ ಈ ಹೆಸರನ್ನಿಟ್ಟು ಅದನ್ನು ಹಿಂಸಾಗೃಹವನ್ನಾಗಿ ಬಳಸಲಾಗುತ್ತಿತ್ತು.

ಕಟುಕರ ಮನೆಯ ಅಧಿಪತಿಯಾಗಿ ಹೋದ ಸದ್ದಾಂ ಬಾಲ್ಯದಿಂದ ಹೆಪ್ಪುಗಟ್ಟಿದ ಸೇಡು, ವಿಕೃತಿ, ರೋಷಗಳನ್ನು ವ್ಯಕ್ತಗೊಳಿಸುವ ಕ್ರೂರಾತಿಕ್ರೂರ ವಿಧಾನಗಳನ್ನು ರೂಪಿಸಿಕೊಂಡ. ಬಹುಶಃ ಅವನ ವಿಕೃತಿಗಳೆಲ್ಲ ರೂಪುಗೊಂಡ ಕಾಲವದು. ಆತ ಖೈದಿಗಳನ್ನು ಯಾವ ಮಟ್ಟಿಗೆ ಹಿಂಸಿಸುತ್ತಿದ್ದನೆಂದರೆ, ಒಂಬತ್ತು ತಿಂಗಳ ನಂತರ ಬಾತ್ ಪಕ್ಷ ಅಧಿಕಾರ ಕಳೆದುಕೊಂಡ ಮೇಲೆ ಆ ಅರಮನೆ ಹೊಕ್ಕವರಿಗೆ ಎಲ್ಲೆಂದರಲ್ಲಿ ಮನುಷ್ಯರ ಕೈ ಬೆರಳ ತುಂಡುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿರುವುದು ಕಂಡಿತು. ರಕ್ತ ದಾರುಣವಾಗಿ ಹೆಪ್ಪಾಗಿತ್ತು. ಮೃತರ ರಕ್ತಸಿಕ್ತ ಬಟ್ಟೆಗಳ ದೊಡ್ಡ ರಾಶಿಗಳು ಕಂಡು ಬಂದವು. ಅಂತೂ ಒಂಬತ್ತು ತಿಂಗಳೊಳಗಾಗಿ ಬಾತ್ ಆಳ್ವಿಕೆ ವಿಫಲಗೊಂಡು, ಸೇನೆಯ ಕೆಲ ಬಲಪಂಥೀಯರು ಹಾಗೂ ಬಾತ್ ಪಕ್ಷದೊಳಗೇ ಇದ್ದ ವಿದ್ರೋಹಿಗಳು ಅಧಿಕಾರಕ್ಕೆ ಬಂದರು. ಪಕ್ಷ ಇಬ್ಭಾಗವಾಯಿತು.

**ಅಧಿಕಾರದೆಡೆಗೆ**

ಹೀಗೆ 1963ರಲ್ಲಿ ಪಕ್ಷ ಇಬ್ಭಾಗವಾದಾಗ ಸದ್ದಾಂ, ಪಕ್ಷದ ಸ್ಥಾಪಕರಲ್ಲೊಬ್ಬರಾದ ಸಿರಿಯನ್ ಮೂಲದ ನಾಯಕ ಮೈಕೇಲ್ ಅಫ್ಲಾಕ್ ಎಂಬುವರನ್ನು ಬೆಂಬಲಿಸಿದ್ದ. ಈ ನಿಯತ್ತಿಗೆ ಫಲಿತವಾಗಿ ಮುಂದಿನ ವರ್ಷ ಸದ್ದಾಂನನ್ನು ಬಾತ್ ಪಕ್ಷದ ರೀಜನಲ್ ಕಮ್ಯಾಂಡ್ ಸದಸ್ಯನನ್ನಾಗಿ ನೇಮಿಸಲಾಯಿತು. ಸದ್ದಾಂ ಹುಸೇನರ ಕ್ಷಿಪ್ರ ಬೆಳವಣಿಗೆ ಪ್ರಾರಂಭವಾದುದೇ ಇಲ್ಲಿಂದ. ಅವರಿಗೆ ತಮ್ಮ ಹಿರಿಯ ಸೋದರ ಸಂಬಂಧಿಯಾದ ಜನರಲ್ ಅಹ್ಮದ್ ಹಸನ್ ಅಲ್‌ಬಕ್ರ್‌ರವರ ಆಶೀರ್ವಾದವಿತ್ತು. ಅಲ್‌ಬಕ್ರ್ ಆಗ ಬಾತ್ ಪಕ್ಷದ ಅತ್ಯಂತ ಗೌರವಾನ್ವಿತ ಸದಸ್ಯರೂ, ಹಿರಿಯ ಮಿಲಿಟರಿ ಅಧಿಕಾರಿಯೂ ಆಗಿದ್ದರು. ಸದ್ದಾಂ ಮತ್ತು ಬಕ್ರ್‌ರ ಸಂಬಂಧವನ್ನು ಮತ್ತಷ್ಟು ಲಾಭದಾಯಕವಾಗಿ ಬೆಸೆದವಳು ಸದ್ದಾಂರ ಪತ್ನಿ ಸಜೀದಾ. ಆಕೆ ತನ್ನ ತಂಗಿಯೊಬ್ಬಳನ್ನು ಬಕ್ರ್‌ರ ಮಗನಿಗೆ ಕೊಟ್ಟು ಮದುವೆ ಮಾಡಿದಳಲ್ಲದೆ, ಬಕ್ರ್‌ರ ಇಬ್ಬರು ಮಕ್ಕಳನ್ನು ತನ್ನ ತಮ್ಮಂದಿರಿಗೆ ತಂದುಕೊಂಡಳು. ಒಟ್ಟಾರೆ ಇರಾಕ್ ರಾಜಕೀಯದ ಸರ್ವೋಚ್ಚ ಸೋಪಾನದ ಮೇಲೆ ಸದ್ದಾಂರ ಬಳಗದ, ನೆಂಟರ, ರಕ್ತ ಸಂಬಂಧಿಗಳ ಡೇರೆ ಎದ್ದು ನಿಲ್ಲತೊಡಗಿತು. 1965ರಲ್ಲಿ ಅಲ್‌ಬಕ್ರ್ ಬಾತ್ ಪಕ್ಷದ ಮಹಾಕಾರ್ಯದರ್ಶಿಯಾಗಿ ನೇಮಕಗೊಂಡರು. ಅದರ ಮರುವರ್ಷವೇ ಸದ್ದಾಂರನ್ನು ಉಪಮಹಾಕಾರ್ಯದರ್ಶಿಯಾಗಿ ನೇಮಿಸಲಾಯಿತು.

ಆದರೆ ಬಾತ್ ಪಕ್ಷ ಅಧಿಕಾರದಲ್ಲಿರಲಿಲ್ಲ. ಅವು ನಿಜಕ್ಕೂ ಹೋರಾಟದ ದಿನಗಳಾಗಿದ್ದವು. 1964ರ ಅಕ್ಟೋಬರ್ ತಿಂಗಳಲ್ಲಿ ಸದ್ದಾಂರನ್ನು ಭೂಗತ ಚಟುವಟಿಕೆಗಳ ಆಪಾದನೆಯ ಮೇಲೆ ಬಂಧಿಸಲಾಯಿತು. ಎರಡು ವರ್ಷಗಳ ಜೈಲುವಾಸ ಅನುಭವಿಸಿದ ಸದ್ದಾಂ 1966ರಲ್ಲಿ ಜೈಲಿನಿಂದ ತಪ್ಪಿಸಿಕೊಂಡರು. ಜೈಲು ವಾಸದ ಅವಧಿ ನಿಜಕ್ಕೂ ಅವರ ಜೀವನದಲ್ಲಿ ಬದಲಾವಣೆಯ ಕಾಲವಾಗಿತ್ತು. ಮೊದಲಿನ ಹುಂಬತನ, ಒರಟು

ನಡವಳಿಕೆಗಳು ಒಂದು ವ್ಯವಸ್ಥಿತ ಕ್ರೌರ್ಯವಾಗಿ ಪರಿವರ್ತಿತಗೊಂಡವು. ಅಧಿಕಾರಕ್ಕೆ ಬಂದ ಒಂಬತ್ತು ತಿಂಗಳಲ್ಲೇ ಪಕ್ಷ ಇಬ್ಭಾಗವಾಗಿ, ಸೋತು ಕೆಳಗಿಳಿದುದಕ್ಕೆ ಅವರು ಕಾರಣಗಳನ್ನು ಆಲೋಚಿಸಿದರು. ಬಾತಿಸ್ಟರನ್ನು ಮೀರಿ ಬೆಳೆದ ಬಲಪಂಥೀಯರು, ಪಕ್ಷದೊಳಗಿನ ವಿದ್ರೋಹಿಗಳು ಮತ್ತು ಆಂತರಿಕವಾಗಿ ಬಲಹೀನಗೊಂಡ ಪಕ್ಷ ಮುಂತಾದ ಎಲ್ಲವನ್ನೂ ತಮ್ಮಲ್ಲೇ ಚರ್ಚಿಸಿಕೊಂಡರು. ಏಕತೆ ಮತ್ತು ಒಂದು ಸಶಕ್ತ ಭದ್ರತಾ ಪಡೆಗಳಿಲ್ಲದ ಹೊರತು ತಮ್ಮ ಪಕ್ಷ ಬೆಳೆಯಲಾರದೆಂಬ ಸತ್ಯ ಅವರಿಗೆ ಗೋಚರಿಸಿತು.

ಜೇಲಿನಿಂದ ತಪ್ಪಿಸಿಕೊಂಡು ಬಂದ ಕೂಡಲೆ ಅವರು ಮಾಡಿದ ಕೆಲಸವೆಂದರೆ 'ಜಿಹಾಜ್ ಹನೀನ್' ಎಂಬ ಭದ್ರತಾ ದಳವನ್ನು ಕಟ್ಟಿದ್ದು. ಯಾವುದೇ ಸಣ್ಣ ವಿಷಯದಲ್ಲಿ ತಮ್ಮನ್ನು ಪ್ರತಿಭಟಿಸಿದರೂ ಆ ವ್ಯಕ್ತಿಯನ್ನು ನಿರ್ನಾಮ ಮಾಡಿಬಿಡುವ ಕಾರ್ಯಕ್ರಮ ಅವರದಾಯಿತು. ಭದ್ರತಾ ದಳವಂತೂ 'ಕೇವಲ' ಸದ್ದಾಂ ಹುಸೇನರಿಗೆ ನಿಷ್ಠೆಯಿಂದ ಇರತೊಡಗಿತು ಮತ್ತು ಬೆಳೆಯತೊಡಗಿತು. ಸದ್ದಾಂ ನಿಜವಾದ ಅರ್ಥದಲ್ಲಿ ಭಯೋತ್ಪಾದಕತೆಯ ಶಿಲ್ಪಿಯಾದರು.

ಮತ್ತೆ ಪಕ್ಷ ಬೆಳೆಯಿತು. 1968ರ ಜುಲೈ 30 ರಂದು ಸದ್ದಾಂ ಹಾಗೂ ಬಾತ್ ಪಕ್ಷದ ಕಾರ್ಯಕರ್ತರು ಇರಾಕ್‌ದ ಅಧಿಕಾರ ಕಸಿದುಕೊಂಡರು. ಸದ್ದಾಂರ ಹಿರಿಯ ಸೋದರ ಸಂಬಂಧಿ ಅಲ್ ಬಕ್ರ್ ದೇಶದ ಅಧ್ಯಕ್ಷರೂ, ಸೈನ್ಯದ ದಂಡನಾಯಕರೂ, ಮಹಾಕಾರ್ಯದರ್ಶಿಯೂ, ಪಕ್ಷದ ರೆವೊಲ್ಯೂಶನರಿ ಕಮಾಂಡ್ ಕೌನ್ಸಿಲ್ಲಿನ ಅಧ್ಯಕ್ಷರೂ ಆಗಿ ನೇಮಕಗೊಂಡರು. ಸಹಜವಾಗಿಯೇ ಸದ್ದಾಂ ಕೌನ್ಸಿಲ್ಲಿನ ಉಪಾಧ್ಯಕ್ಷರೂ,



ಆಂತರಿಕ ರಕ್ಷಣಾಪಡೆಗಳ ಮುಖ್ಯಸ್ಥರೂ ಆಗಿ ನೇಮಕವಾದರು. ನಿಚ್ಚಳವಾಗಿ ಅವರು ತಮ್ಮ ಖಾಸಗಿ ಸೈನಿಕ ಬಲವನ್ನು ಬೆಳೆಸಿಕೊಳ್ಳತೊಡಗಿದುದು ಆಗಲೇ! ಅವರ ನೆಚ್ಚಿನ ಅನುಯಾಯಿಗಳಾಗಿದ್ದ ನೂರಾರು ಜನ ಯುವಕರು ರಕ್ಷಣಾ ಪಡೆಗಳ ವಿಶೇಷ ತರಬೇತಿ ಪಡೆದರು. ಹತ್ತಿರದ ಸಂಬಂಧಿಗಳಾದ ಬರ್ಜಾನ್, ಸಬಾವಿ, ವಾತ್ಬನ್, ಅಲಿಹಸನ್ ಅಲ್‌ಮಜೀದ್, ಅಷದ್ ಯಾಸೀನ್ ಮುಂತಾದವರೆಲ್ಲ ಕೆಲವೇ ದಿನಗಳಲ್ಲಿ ಕುಖ್ಯಾತ ರಕ್ಷಣಾ ಪಡೆಗಳ ನೇತಾರರಾದರು.

ಕೇವಲ ಮೂವತ್ತೊಂದು ವರ್ಷ ವಯಸ್ಸಿನ ಸದ್ದಾಂರನ್ನು ಇಡೀ ದೇಶ 'ಮಿಸ್ಟರ್ ಡೆಪ್ಯೂಟಿ' ಎಂದೇ ಕರೆಯುತ್ತಿತ್ತು. ಅವರೊಬ್ಬರಿಗೇ ಆ ಸವಲತ್ತು. ಅವರು ಹತ್ತು ವರ್ಷ ಕಾಲ ಬಕ್ರ್ ಆಡಳಿತದ ಡೆಪ್ಯೂಟಿಯಾಗಿದ್ದಾಗ್ಯೂ ನಿಜವಾದ ಅರ್ಥದಲ್ಲಿ ಅವರೇ ದೇಶವನ್ನಾಳತೊಡಗಿದರು. ಬಾತ್ ಪಕ್ಷ ಅಧಿಕಾರಕ್ಕೆ ಬಂದು ಮೂರು ತಿಂಗಳು ಕಳೆದಿದ್ದವೇನೋ, 9 ಅಕ್ಟೋಬರ್ 1968ರಂದು ಇಸ್ರೇಲಿನ ಗೂಢಚಾರರ ತಂಡವೊಂದನ್ನು ತಾನು ಬಂಧಿಸಿರುವುದಾಗಿ ಬಾತ್ ಸರ್ಕಾರ ಘೋಷಿಸಿತು. 1969ರ ಜನವರಿ 5ರಂದು ವಿಚಾರಣೆಯ ನಾಟಕ ನಡೆಸಿ ಹದಿನೇಳು ಜನ ಬಂಧಿತರಲ್ಲಿ ಹದಿನಾಲ್ಕು ಜನರನ್ನು ನೇಣಿಗೇರಿಸಲಾಯಿತು. ಅವರಲ್ಲಿ ಹನ್ನೊಂದು ಜನ ಯಹೂದಿಗಳು! ಮೃತರ ಶರೀರಗಳನ್ನು ಬಾಗ್ದಾದ್‌ನ ಲಿಬರೇಶನ್ ಸ್ಕ್ವೇರ್‌ನಲ್ಲಿ ವಿಕಾರವಾಗಿ ನೇತು ಹಾಕಲಾಗಿತ್ತು. ಈ ನೇಣು ಶಿಕ್ಷೆಯನ್ನು ವಿದೇಶಿ ಪತ್ರಿಕೆಗಳು ಖಂಡಿಸಿದಾಗ ಸದ್ದಾಂ ತಣ್ಣನೆಯ ದನಿಯಲ್ಲಿ ಉತ್ತರಿಸಿದ್ದರು, ''ನಾವು ಕೇವಲ ಗೂಢಚಾರರನ್ನು ನೇಣುಹಾಕಿದ್ದೇವೆ. ಯಹೂದಿಗಳು ಕ್ರಿಸ್ತನನ್ನೇ ಶಿಲುಬೆಗೇರಿಸಿದಂಥವರು!''

ನಿಜವಾದ ಕೊಲೆಗಳ ಕಾಲ ಶುರುವಾಯಿತು. ಮೊದಮೊದಲು ನೇಣಿಗೇರಿದವರು ಯಹೂದಿಗಳೇ ಆದರೂ ಮುಂದೆ ಮುಸ್ಲಿಮರ ಪಾಳಿ ಪ್ರಾರಂಭವಾಗದೆ ಇರಲಿಲ್ಲ. ಸದ್ದಾಂರ ರಾಜಕೀಯ ಶತ್ರುಗಳು ಒಬ್ಬೊಬ್ಬರಾಗಿ ಮುಗಿಸಲ್ಪಟ್ಟರು. ಸದ್ದಾಂ ಯಾರನ್ನೂ ನಂಬುವುದಿಲ್ಲ. ಅವರ ನಂಬಿಕೆಗೆ ಪಾತ್ರರೆಂದರೆ ಕೇವಲ ಅವರ ರಕ್ತ ಸಂಬಂಧಿಗಳು! ಅಥವಾ ತಮ್ಮ ಜಾತಿ ಬಾಂಧವರು ಅಥವಾ ತಮ್ಮ ನಾಡಿನವರು. ದೇಶದ ಎಲ್ಲ ಪ್ರಮುಖ ಹುದ್ದೆಗಳಲ್ಲೂ ಸದ್ದಾಂರ ಬಳಗ ವಿಜೃಂಭಿಸಿತು. ಗಣತಂತ್ರದ ಹೆಸರಿನಲ್ಲಿ ವಿನೂತನ ಅರಸೊತ್ತಿಗೆ ಆರಂಭವಾಯಿತು.

ಸದ್ದಾಂ ಸಂಪೂರ್ಣವಾಗಿ ನಂಬಿಕೆಯಿರಿಸಿಕೊಂಡದ್ದು ತಮ್ಮ ರಕ್ಷಣಾ ದಳಗಳ ಮೇಲೆಯೇ. ಅವುಗಳ ಮೂಲಕ ಪಕ್ಷವನ್ನು ನಿಯಂತ್ರಿಸಿದರು. ಅವುಗಳ ನಿರ್ವಹಣೆಗೆ ಬೇಕಾದ ಹಣವನ್ನು ಸದ್ದಾಂ ಶೇಖರಿಸಿದ್ದೂ ವಾಮಮಾರ್ಗದಿಂದಲೇ! ಮೂಲತಃ ಜೂಜಾಡುವುದನ್ನು ಇಸ್ಲಾಂ ವಿರೋಧಿಸುತ್ತದೆ. ಮೊದಲಿನ ದೊರೆಗಳು ಕುದುರೆ ಜೂಜಿಗೆ ಅನುಮತಿ ನೀಡಿದ್ದರು. ಮಧ್ಯೆ ಕಾಸೀಮ್ ಸರ್ಕಾರ ಕುದುರೆ ಜೂಜನ್ನು ನಿಲ್ಲಿಸಿತ್ತು. ಆದರೆ ಸದ್ದಾಂ ಮತ್ತೆ ಕುದುರೆಗಳನ್ನೋಡಿಸಿದರು. ಅದರ ಮೂಲಕ ವಸೂಲಿ ಮಾಡಲಾದ ಕರವನ್ನು ರಕ್ಷಣಾ ದಳಗಳ ಮೇವಿಗೆ ಬಳಸಿದರು. ಕೈಯಲ್ಲೀಗ ಅಧಿಕಾರವಿತ್ತು. ಲಾಲಸೆಗೆ ಅಂತ್ಯವಿರಲಿಲ್ಲ. ಎಲ್ಲ ಕನಸುಗಳ ಸಾಕಾರ ಕಾಲವದು. ತಮ್ಮ ಹಾದಿಗೆ ಮುಳ್ಳಾದವರನ್ನು ನಿರ್ದಯವಾಗಿ ಕಿತ್ತೆಸೆದರು.

ಸದ್ದಾಂ ಸಾರ್ವಜನಿಕ ಜೀವನದಲ್ಲಿ ಮಹಾ ಯೋಗಿಯಂತೆ ಕಂಗೊಳಿಸಿದರೂ ಅತ್ಯಂತ ನಿಕೃಷ್ಟ ವೈಯಕ್ತಿಕ ಜೀವನ ನಡೆಸುತ್ತಾರೆಂಬುದು ಅಮೆರಿಕನ್ನರ ಅಭಿಪ್ರಾಯ. ಅವರಿಗೆ ಲಂಪಟತೆಯನ್ನು ಆರೋಪಿಸಲಾಗಿದೆ. ಆದರೆ ಸದ್ದಾಂ ಹೆಂಗಸರ ಬೆನ್ನು ಬೀಳುವವರಲ್ಲವೆಂದೇ ಜನಪ್ರಿಯರಾದವರು. ಇದು ಮತ್ತೊಂದು ಸತ್ಯ! ಅದೇನೇ ಇದ್ದರೂ ತಮ್ಮ ಸಾಮಾಜಿಕ ವರ್ಚಸ್ಸಿನ ಬೆಳವಣಿಗೆಗಾಗಿ ಅವರು ಬಾಗ್ದಾದದ ಖ್ಯಾತ ವಣಿಕ ಮನೆತನದ ಹೆಣ್ಣು ಮಗಳಾದ ಸಮೀರಾ ಶಾಹಬಂಡಾರ್ ಎಂಬಾಕೆಯನ್ನು ಎರಡನೆ ಪತ್ನಿಯನ್ನಾಗಿ ಸ್ವೀಕರಿಸಿದರೆಂಬುದು ಮಾತ್ರ ನಿಜ. ಸಮೀರಾ ಎತ್ತರನೆಯ ಸ್ಫುರದ್ರೂಪಿ ಹೆಂಗಸು, ವಿವಾಹಿತೆ. ಆಕೆ ಮೊದಲ ಬಾರಿಗೆ ಸದ್ದಾಂರನ್ನು ಭೇಟಿಯಾದಾಗ ಇರಾಕಿ ಏರ್‌ಲೈನ್ಸ್‌ನ ಅಧಿಕಾರಿಯಾಗಿದ್ದ ನೂರುದ್ದೀನ್ ಅಲ್ ಸಫಿ ಎಂಬಾತನ ಮಡದಿಯಾಗಿದ್ದಳು. ಸದ್ದಾಂ ವಿವಾಹದ ವಿಷಯ ಮುಂದಿಟ್ಟಾಗ ಸಫಿ ತೆಪ್ಪಗೆ ಅಲ್ಲಿಂದ ಕಣ್ಮರೆಯಾದ. ನಂತರ ಆತನನ್ನು ಏರ್‌ಲೈನ್ಸ್‌ನ ಡೈರೆಕ್ಟರನನ್ನಾಗಿ ನೇಮಿಸಲಾಯಿತು.

ಸಮೀರಾ ನಿಜಕ್ಕೂ ಶಾಹಬಂಡಾರ್ ಮನೆತನದವಳಲ್ಲವೆಂದು ಸುದ್ದಿ ಹರಡಿದ ಫರೂಕ್ ಎಂಬಾತನನ್ನು ಪತ್ನಿ ಸಮೇತ ಜೀವಾವಧಿ ಶಿಕ್ಷೆಗೆ ಒಳಪಡಿಸಿದ ಭೂಪ ಸದ್ದಾಂ ಎಂಬುದಾಗಿ ಅಮೆರಿಕನ್ ಪುಸ್ತಕಗಳು ಬರೆಯುತ್ತವೆ. ಅಲ್ಲದೆ ಸದ್ದಾಂ ತಮ್ಮ ಪೂರ್ವಾಪರಗಳ ಬಗ್ಗೆ ಯಾರೇ ಕೊಂಕು ನುಡಿದರೂ ಸಹಿಸಿಕೊಳ್ಳುವ ವ್ಯಕ್ತಿಯಲ್ಲವಂತೆ.

ಹಿಂದೊಮ್ಮೆ ತಕ್ರೀತ್‌ನ ಸೈನ್ಯಾಧಿಕಾರಿಯಾದ ಉಮರ್ ಅಲ್ ಹಜಾ ಎಂಬಾತ ತನಗೂ, ಸದ್ದಾಂರ ತಾಯಿಗೂ ಸಂಬಂಧವಿತ್ತೆಂದು ಹೇಳಿಕೊಂಡಿದ್ದನಂತೆ. ಅದನ್ನು ಸದ್ದಾಂ ತನ್ನ ಹತ್ತಿರದ ಬಂಟರ ಮುಂದೆ ಹೇಳಿದಾಗ ಉದ್ರಿಕ್ತರಾದ ಅವರು ಹಜಾನನ್ನು ನಿಂತ ನಿಲುವಿನಲ್ಲೇ ಸೀಳಿ ಹಾಕಿದರು. ಅವನ ಮಗನನ್ನು ಕೊಂದರು. ಮನೆಯನ್ನು ಹಾಳುಗೆಡವಿದರು ಎಂಬುದಾಗಿ ಅಮೆರಿಕದ ಲೇಖಣಿಗಳು ಬರೆಯುತ್ತವೆ.

ಅಧಿಕಾರಕ್ಕೆ ಬಂದ ಕೂಡಲೇ ದೇಶವನ್ನು ಬಳ



ಗದವರ ನಡುವೆ ಹಂಚಿ ಹರಾಜಗಿಟ್ಟ ಸದ್ದಾಂ ಅನಿವಾರ್ಯವಾಗಿ ಲಂಚಗುಳಿತನ, ಮೋಸ ಅದ್ಯಕ್ಷತೆಗಳನ್ನು ಕಂಡೂ ಕಂಡೂ ಸುಮ್ಮನಿರಬೇಕಾಯಿತು. ಆತನ ಸೋದರ ಮಾವ ಖೈರುಲ್ಲಾ ತುಲ್ಪಾನನ್ನು ಸಾಕಿದವನೆಂಬ ಗೌರವದಿಂದ ಬಾಗ್ದಾದದ ಮೇಯರ್‌ನನ್ನಾಗಿ ನೇಮಿಸಿದರು ಸದ್ದಾಂ. ಕಡೆಗೆ ಅವರೇ ಆತನ ಲಂಚ ಗುಳಿತನ ಸಹಿಸಲಾಗದೆ ಆತನನ್ನು ಕೆಳಗಿಳಿಸಬೇಕಾಯಿತು. ಇವತ್ತಿಗೂ ಆತ ಒಬ್ಬ ಶ್ರೀಮಂತ ವ್ಯಾಪಾರಿ!

ಇಡೀ ದೇಶದ ಸೈನ್ಯಾವಶ್ಯಕ ವಸ್ತುಗಳ ಖರೀದಿಯನ್ನು ಸದ್ದಾಂ ತಮ್ಮ ಸೋದರ ಸಂಬಂಧಿ ಹಾಗೂ ಅಳಿಯನೂ ಆದ ಹುಸೇನ್ ಕಮಲ್ ಅಲ್ ಮಜೀದ್ ಎಂಬಾತನಿಗೆ ಒಪ್ಪಿಸಿದ್ದಾರೆ. ಅವರ ಮೊದಲ ಮಡದಿ ಸಜೀದಾಳ ಹೆಸರಿನ ಮೇಲೆ ದೊಡ್ಡ ವ್ಯಾಪಾರ ವಹಿವಾಟುಗಳಿವೆ. ಇತ್ತೀಚೆಗೆ ಮೃತನಾದನೆನ್ನಲಾದ ಸದ್ದಾಂರ ಪುತ್ರ ಉದಾಯಿ ಕೋಟ್ಯಂತರ ರೂಪಾಯಿಗಳ ವ್ಯಾಪಾರವಿದ್ದ ಸಂಸ್ಥೆಗಳ ಒಡೆಯನಾಗಿದ್ದ. ಬಕ್ರ್ ಕಾಲದಲ್ಲಿ 'ಡೆಪ್ಯೂಟಿ'ಯಾಗಿದ್ದುಕೊಂಡೇ ಸಮಸ್ತವನ್ನು ಅನಭವಿಸಿದ ಸದ್ದಾಂ 1979ರ ಹೊತ್ತಿಗೆ ನೇರವಾಗಿ ಆಡಳಿತದ ಚುಕ್ಕಾಣಿ ಹಿಡಿಯಲು ಸನ್ನದ್ಧರಾದರು. ಅದು ಇರಾಕದ ಇತಿಹಾಸದಲ್ಲಿ ಒಂದು ಪರೀಕ್ಷಾ ಕಾಲ. ಇರಾಣದ ಆಯಾತೊಲ್ಲಾ ಖೊಮೇನಿಯ ಧರ್ಮಭ್ರಾಂತಿ ಇರಾಕಕ್ಕೆ ತೀವ್ರವಾಗಿ ಹರಿದು ಬಂತು. ಬಹು ಸಂಖ್ಯಾತರಾದ ಷಿಯಾ ಪಂಥೀಯರು ಇರಾಕದಲ್ಲಿ ದಂಗೆಯೆದ್ದರು. ಬಾತ್ ಪಕ್ಷದಲ್ಲೇ ಇದ್ದ ಷಿಯಾ ಸದಸ್ಯರು ಈ ದಂಗೆಯನ್ನು ಹತ್ತಿಕ್ಕುವ ವಿಷಯದಲ್ಲಿ ಸದ್ದಾಂರನ್ನು ವಿರೋಧಿಸಿದರು. ಆಗಲೇ ವಯಸ್ಸಾಗಿದ್ದ ಅಲ್‌ಬಕ್ರ್, ಷಿಯಾಗಳನ್ನು ಎದುರು ಹಾಕಿಕೊಳ್ಳುವ ಗಟ್ಟಿತನ ತೋರಲಿಲ್ಲ. ಷಿಯಾ ಸದಸ್ಯರು ಅಲ್‌ಬಕ್ರ್ ಸುತ್ತ ಜಮಾಯಿಸಿಬಿಟ್ಟರು. ಅಷ್ಟರಲ್ಲಿ ಇರಾಕ್‌ನ ಬಾತ್ ಪಕ್ಷದ ಕಡುವೈರಿಗಳಾಗಿದ್ದ ಸಿರಿಯಾ ಬಾತಿಸ್ಟ್ ಪಕ್ಷದವರು ಎಲ್ಲ ದ್ವೇಷ ಮರೆತು ಇರಾಕ್‌ನೊಂದಿಗೆ ಒಂದುಗೂಡುವರೆಂಬ ಹೊಸ ಅಲೆಯನ್ನು ಸದ್ದಾಂ ಉಂಟು ಮಾಡಿದ್ದರು. ಈ ಅಲೆಯೇ ಅವರಿಗೆ ಮುಳುವಾಗಲಿತ್ತು. ಆದರೆ ಅಧಿಕಾರ ಕಳೆದುಕೊಳ್ಳಲು ಸರ್ವಥಾ ಸಿದ್ಧರಾಗದ ಸದ್ದಾಂ ಮತ್ತು ಅವರ ತಿಕ್ರಿತ್ ಅನುಯಾಯಿಗಳು ಅರವತ್ನಾಲ್ಕು ವರ್ಷದ ಅಲ್‌ಬಕ್ರ್‌ರನ್ನು ಒತ್ತಾಯದಿಂದಲೇ ಪದವಿಗೆ ರಾಜನಾಮೆ ಕೊಡುವಂತೆ ಮಾಡಿದರು.

'ಅನಾರೋಗ್ಯದ ಕಾರಣದಿಂದಾಗಿ' ಎಂಬ ನೆವ ಹೇಳಿ 16 ಜುಲೈ 1979ರಂದು ಬಕ್ರ್ ರಾಜನಾಮೆ ನೀಡಿದ ಕೂಡಲೆ ಸದ್ದಾಂ ಇರಾಕದ ಅಧ್ಯಕ್ಷರಾದರು. ಅಧಿಕಾರಕ್ಕೆ ಬಂದ ಕೂಡಲೆ ತಮ್ಮನ್ನು ವಿರೋಧಿಸಿದ ಪ್ರಮುಖ ನಾಯಕರಾದ ಮಹ್ಮದ್ ಮಹಜೋಬ್, ಮಹ್ಮದ್ ಆಯೇಷ್, ಬಿದೇನ್ ಫದಲ್, ಘನೀಮ್ ಅಬ್ದುಲ್ ಜಬೀಲ್ (ಸದ್ದಾಂರ ಒಂದು ಕಾಲದ ಆತ್ಮೀಯ) ತಲೀಬ್ ಅಲ್ ಸುವೆಲೇಹ್, ಅದ್ನಾನ್ ಹಮ್ದಾನಿ (ಉಪಪ್ರಧಾನಿ) ಮುಂತಾದವರನ್ನು ನಿರ್ದಯವಾಗಿ ಕೊಲ್ಲಿಸಿದರು. ಪದವಿಗೆ ಬಂದ ಮರುದಿನವೇ ಹಿರಿಯ ಸೈನ್ಯಾಧಿಕಾರಿ ಜನರಲ್ ವಾಲಿದ್ ಮಹ್ಮದ್ ಸೀರತ್‌ರನ್ನು ಕೊಂದು ಚೂರು ಚೂರು ಮಾಡಲಾಯಿತು.

ಈಗ ಸದ್ದಾಂ ಒಂದರ್ಥದಲ್ಲಿ ಅಜಾತ ಶತ್ರು! ಶತ್ರುಗಳಿದ್ದರಾದರೂ ಎಲ್ಲಿ? ಅವರೇ ಸರ್ವಸ್ವ. ಅವರ ಒಂದೊಂದು ಕೊಲೆಯೂ ಅವರನ್ನು ಸಿಂಹಾಸನದ ಮೇಲೆ ಭದ್ರಗೊಳಿಸಿತು. ಹೀಗೆ ಇರಾಕ್ ಸಂಪೂರ್ಣವಾಗಿ ತಮ್ಮ ಹಿಡಿತಕ್ಕೆ ಸಿಕ್ಕನಂತರ ಅವರ ಕಣ್ಣು ಗಡಿಗಳಾಚೆಗೆ ಸರಿಯತೊಡಗಿದ್ದು ಅನೇಕ ಐತಿಹಾಸಿಕ ದುರಂತಗಳಿಗೆ ನಾಂದಿಯಾಯಿತು. ●

# ಆನಂದದ ಶೋಧ

ಸ್ಪೇನ್ ದೇಶದ ಕಥೆ

*ಬಿ. ಸುಬ್ರಾಯ ಅಡಿಗ*

ಸ್ಪೇನಿನಲ್ಲಿ ಆಗರ್ಭ ಶ್ರೀಮಂತನೊಬ್ಬ ವಾಸಿಸುತ್ತಿದ್ದ. ಆತನ ಬಗ್ಗೆ ಹಬ್ಬಿದ ವದಂತಿಯ ಪ್ರಕಾರ ಆತ ಎಂದೂ ಸರಿಯಾಗಿ ಉಣ್ಣುತ್ತಿರಲಿಲ್ಲ. ಒಳ್ಳೇ ಬಟ್ಟೆ ಧರಿಸುತ್ತಲೂ ಇರಲಿಲ್ಲ. ಕುರುಡು ಕಾಸನ್ನೂ ಆತ ದಾನ ಮಾಡಿದವನಲ್ಲ. ಆತ ದೇವರೊಡನೆ ಬೇಡಲೆಂದೇ ಮಂದಿರಕ್ಕೆ ಹೋಗುತ್ತಿದ್ದ.

ಒಮ್ಮೆ ಅವನಿದ್ದ ನಗರದಲ್ಲಿ ಭಯಂಕರ ರೋಗ ಹರಡಿತು. ಸಾವಿರಾರು ಜನ ಸತ್ತರು. ಹೆಂಗಸರು ಮಕ್ಕಳು ನಿರಾಶ್ರಿತರಾಗಿ ಓಣಿಗಳಲ್ಲಿ ಅಲೆಯತೊಡಗಿದರು.

ಆ ನಗರದಲ್ಲಿ ಒಬ್ಬರು ಮಹಾತ್ಮರಿದ್ದರು. ಅವರು ನಗರವಾಸಿಗಳ ಈ ದುಃಸ್ಥಿತಿಯನ್ನು ನೋಡದಾದರು. ನಿರಾಶ್ರಿತ ಮನುಷ್ಯರ ಸೇವೆಗೆ ಅವರು ಮುಂದಾದರು. ಅವರು ಜನರಿಂದ ಚಂದಾ ಪಡೆದು, ಅದರಿಂದ ಆಹಾರ ಬಟ್ಟೆಗಳನ್ನು ಕೊಂಡು ಪೀಡಿತರಿಗೆ ಹಂಚತೊಡಗಿದರು.

ಮಹಾತ್ಮರು ಶ್ರೀಮಂತರ ಸಹಾಯ ಯಾಚಿಸಿದರು. ಅವರು ಬಯಸಿದಷ್ಟು ಹಣ ದೊರೆಯಲಿಲ್ಲ. ಮಹಾತ್ಮರು ಚಿಂತೆಗೀಡಾದರು. ಕಟ್ಟಕಡೆಗೆ ಅವರೊಂದು ಉಪಾಯ ಕಂಡು ಹಿಡಿದರು. ಅವರು ನಗರದ ಆ ವಿಖ್ಯಾತ ಕೃಪಣ ಶ್ರೀಮಂತನ ಬಳಿ ನಡೆದು, ''ಮಹಾಶಯರೇ ..... ನೀವು ನನಗೆ ಒಂದು ಕಾಸನ್ನೂ ಕೊಡಬೇಕಿಲ್ಲ. ಹತ್ತು ಸಾವಿರ ರೂಪಾಯಿಯ ಒಂದು ಚೆಕ್ಕನ್ನು ಇಂದು ಸಂಜೆಯವರೆಗೆ ಕೊಡಿರಿ. ಸಂಜೆ ನಾನು ನಿಮ್ಮ ಆ ಚೆಕ್ಕನ್ನು ಮರಳಿಸುವೆ'' ಎಂದರು.

''ಸಂಜೆಯ ತನಕ ಚೆಕ್ ಹಿಡಿದು ಏನು ಮಾಡುವಿರಿ?'' ಆಶ್ಚರ್ಯದಿಂದ ಕೇಳಿದ ಕೃಪಣ.

''ನೀವು ನಗರದ ಮಹಾ ಸೇಠರಾಗಿಯೂ ಕೃಪಣರಿದ್ದೀರಿ. ನಾನು ನಿಮ್ಮ ಚೆಕ್ ಇತರರಿಗೆ ತೋರಿಸಿದಾಗ, ಅವರು ಖಂಡಿತ ಬೆರಗಾಗುವರು. ನಿಮ್ಮಂತಹ ಕೃಪಣರೇ 10 ಸಾವಿರ ರೂಪಾಯಿ ಕೊಟ್ಟಿರುವಾಗ, ಅವರು ಅದಕ್ಕಿಂತ ಹೆಚ್ಚು ಹಣ ಕೊಡುವರು. ಈ ರೀತಿ ದಾನ ಮಾಡದೆಯೇ ನಿಮಗೆ ಪುಣ್ಯ ದೊರೆಯುವುದು''

ಈ ವ್ಯಾಪಾರ ಲಾಭದ್ದೆಂದು ಕೃಪಣನಿಗೆ ಮನದಟ್ಟಾಯಿತು. 'ಏನೂ ಕಳೆದುಕೊಳ್ಳದೆ ಹೆಸರು ಹಾಗೂ ಪುಣ್ಯ ದೊರೆಯುತ್ತಿರುವಾಗ ಅದನ್ನೇಕೆ ಬಿಟ್ಟುಗೊಡಬೇಕು?' ಎಂದು ಯೋಚಿಸಿ, ಆತ ತಕ್ಷಣ 10 ಸಾವಿರ ರೂಪಾಯಿಯ ಚೆಕ್ ಬರೆದು ಮಹಾತ್ಮರ ಕೈಗಿತ್ತ. ಮಹಾತ್ಮರ ಊಹೆಯಂತೆಯೇ ಕೆಲಸ ನಡೆಯಿತು. ಆ ಚೆಕ್ ನೋಡಿ ಜನ ನಾ ಮುಂದು ತಾ ಮುಂದು ಎಂಬಂತೆ ಉದಾರವಾಗಿ ದಾನ ಮಾಡಿದರು. ಸಂಜೆಯೊಳಗೆ ಲಕ್ಷಾಂತರ ರೂಪಾಯಿ ಸಂಗ್ರಹವಾಯಿತು.

ಸಂಜೆಯಾಗುತ್ತಲೇ ಮಹಾತ್ಮರು ಆ ಕೃಪಣನ ಚೆಕ್ಕನ್ನು ಮರಳಿಸಲು ಬಂದರು. ಆದರೆ ಕೃಪಣ ಅದನ್ನು ತೆಗೆದುಕೊಳ್ಳಲು ಒಪ್ಪಲೇ ಇಲ್ಲ. ಮಹಾತ್ಮರು ಚಕಿತರಾದರು. ಆ ಕೃಪಣ 10 ಸಾವಿರ ರೂಪಾಯಿ ದಾನ ಮಾಡಿಯಾನೆಂದು ಯಾರೂ ನಂಬುವಂತಿರಲಿಲ್ಲ. ''ನೀವೇಕೆ ಚೆಕ್ ತೆಗೆದುಕೊಳ್ಳುವುದಿಲ್ಲ?'' ಎಂದು ಕೇಳಿದರವರು.

ಆಗ ಆ ಕೃಪಣ ಇಂತೆಂದ: ''ಇದುವರೆಗೆ ನನಗೆ ದಾನದ ಮಹಿಮೆ ತಿಳಿದಿರಲಿಲ್ಲ. ನಾನು ಚೆಕ್ ಕೊಟ್ಟಾಗಿನಿಂದ ಪ್ರಶಂಸೆ ಹಾಗೂ ಅಭಿನಂದನೆಗಳ ಸುರಿಮಳೆಯೇ ಬರತೊಡಗಿದೆ. ಇದರಿಂದ ಸಿಕ್ಕಷ್ಟು ಸುಖ ಹಿಂದೆಂದೂ ಸಿಕ್ಕಿರಲಿಲ್ಲ. ಈಗ ಈ ಚೆಕ್ಕನ್ನು ಹಿಂದೆ ಪಡೆದು, ನಾನು ಆ ಅನಿರ್ವಚನೀಯ ಸುಖದಿಂದ ವಂಚಿತನಾಗಲೇ?'' ಆ ಬಳಿಕ ಆತ 10 ಸಾವಿರ ರೂಪಾಯಿಯ ಇನ್ನೊಂದು ಚೆಕ್ ಹರಿದು ಮಹಾತ್ಮರ ಕೈಯಲ್ಲಿಟ್ಟ!

(ಹಿಂದಿಯಿಂದ)

# ಅಂಬಾ

ಗಡಿಬಿಡಿಯ ಬೀದಿಯಲ್ಲಿ ಹಾದುಹೋಗುತ್ತಿ
ರುವಾಗ
ಎಡಗಡೆಯಿಂದ
'ಅಂಬಾ . .' ಎಂಬ ಕೂಗು

ಮತ್ತೆ ಗಡಿಬಿಡಿಯಲ್ಲಿ
ಅಡಗಿಕೊಳ್ಳುತ್ತಿದ್ದಾಗ
ಬಲಗಡೆಯ ಬೀದಿಯಿಂದ
'ಅಂಬಾ ....' ಇನ್ನೊಂದು ಕೂಗು



ಮತ್ತೆ ಗಡಿಬಿಡಿ
ಸುತ್ತ ಗಜಿಬಿಜಿ
ಮತ್ತೆ
ಈ ಬೀದಿಯಿಂದಲೇ
'ಅಂಬಾ ....'

ಆಮೇಲೆ ಎಷ್ಟೋ
ಗಡಿಬಿಡಿಯ ಗಜಿಬಿಜಿಯ
ಬೀದಿಗಳಲ್ಲಿ ಗಲ್ಲಿಗಳಲ್ಲಿ
ಕಳೆದು ಬೀದಿಗಳು ಗಲ್ಲಿಗಳು

ನನ್ನೆದೆಯಲ್ಲಿ
ನಿಮ್ಮೆದೆಯಲ್ಲಿ
ನೀರವದಲ್ಲಿ
ಈ ಖಾಲಿ ಕಾಗದದಲ್ಲಿ
ಮತ್ತೆ
'ಅಂಬಾ ....'

● *ಎಚ್. ಎಸ್. ಶಿವಪ್ರಕಾಶ*

# ರಶಿಯಾದ ಕೊನೆಯ ರಾಜಕುಟುಂಬದ ಅಂತಿಮ ಯಾತ್ರೆ



ಅರುಣ

**ರಶಿಯಾದ ಕೊನೆಯ ಚಕ್ರವರ್ತಿ ಝಾರ್ ಎರಡನೇ ನಿಕೊಲಸ್ ಮತ್ತು ಅವನ ಕುಟುಂಬದ ಸದಸ್ಯರ ಮರಣ ದಂಡನೆ ಆಧುನಿಕ ಇತಿಹಾಸದ ರಕ್ತಸಿಕ್ತ ಅಧ್ಯಾಯಗಳಲ್ಲಿ ಒಂದು. ರಶಿಯಾದಲ್ಲಿ ಅಕ್ಟೋಬರ್ ಮಹಾಕ್ರಾಂತಿಯ ಅನಂತರ ಇಡೀ ದೇಶ ಅಂತರ್ಯುದ್ಧದ ದಾವಾನಲದಲ್ಲಿ ಸಿಲುಕಿದಾಗ ಎಲ್ಲೆಲ್ಲೂ ಸಾವಿನ ವಿಕಟನರ್ತನ ನಡೆಯುತ್ತಿದ್ದಾಗ ರಶಿಯಾದ ರೊಮನೊವ್ ರಾಜಕುಟುಂಬದವರನ್ನು ವಿಚಾರಣೆಗೆ ಗುರಿಪಡಿಸದೆಯೇ ಅಮಾನುಷವಾಗಿ ಗುಂಡಿಕ್ಕಿ ಕೊಲ್ಲಲಾಯಿತು. ರೊಮನೊವ್ ರಾಜಕುಟುಂಬದ ಹತ್ಯೆ ಹೇಯ ನರಮೇಧವೆಂದು ರಶಿಯಾದ ಆಧುನಿಕ ಇತಿಹಾಸಕಾರರೊಬ್ಬರು ವರ್ಣಿಸಿದ್ದಾರೆ.**

ರಶಿಯಾದ ಇಕತೆರಿನ್‌ಬರ್ಗ್‌ನ ವೊಜ್ನೆಸೆನ್ಸ್ಕಿ ಪ್ರಾಸ್ಪೆಕ್ಟ್‌ನಲ್ಲಿತ್ತು ಆ ನಿವಾಸ. ಎರಡು ಸುತ್ತು ಬಲಿಷ್ಠವಾದ ಆವರಣಗಳ ನಡುವೆ ದಿನದ ಇಪ್ಪತ್ತನಾಲ್ಕು ತಾಸು ಪೊಲೀಸರ ಭದ್ರ ಕಾವಲಿದ್ದ ನಿವಾಸವದು. 1918 ಜುಲೈ 16ರಂದು ರಾತ್ರಿ ಆ ನಿವಾಸದ ಕೆಳ ಅಂತಸ್ತಿನ ಸಣ್ಣ ಕೋಣೆಯೊಂ

ಒಂಟಿ ಬಲ್ಬ್ ಮಂಕು ಬೆಳಕು ಚೆಲ್ಲುತ್ತಿತ್ತು. ಬೆಳಗಿನ ಜಾವ ಎರಡು ಗಂಟೆಗೆ ಸಣ್ಣ ಗಡ್ಡದ, ದಟ್ಟವಾದ ಕಪ್ಪು ಕೂದಲಿನ ವ್ಯಕ್ತಿಯೊಬ್ಬ ಹನ್ನೊಂದು ಮಂದಿಯ ಗುಂಪನ್ನು ಕೊಠಡಿಗೆ ಕರೆತಂದ. ಮೊದಲು ಮಧ್ಯಮ ನಿಲುವಿನ, ಸೈನಿಕರ ಸಮವಸ್ತ್ರ ಧರಿಸಿದ್ದ ವ್ಯಕ್ತಿಯೊಬ್ಬ ಬಾಲಕನನ್ನು ಎತ್ತಿಕೊಂಡು ಕೊಠಡಿಗೆ ಕಾಲಿರಿಸಿದ. ಬಾಲಕನು ಸೈನಿಕರ ಸಮವಸ್ತ್ರ ಟೋಪಿ ಧರಿಸಿದ್ದ. ಅವನೊಂದಿಗೆ ಮಧ್ಯವಯಸ್ಸು ದಾಟಿದ ಓರ್ವ ಮಹಿಳೆ ಮತ್ತು ನಾಲ್ವರು ಯುವತಿಯರು ಹಿಂಬಾಲಿಸಿದರು. ಅವರೆಲ್ಲರೂ ಪ್ರವಾಸದಲ್ಲಿ ಧರಿಸುವ ಉಡುಪು ತೊಟ್ಟಿದ್ದರು.

ಇದ್ದಕ್ಕಿದ್ದಂತೆ ಇರುಳಿನ ನೀರವ ಮೌನವನ್ನು ಭೇದಿಸುವಂತೆ ಹೊರಗೆ ಯಾರೋ ಟ್ರಕ್ ಒಂದನ್ನು ಹೊರಡಿಸಿದ ಸದ್ದು ಕೇಳಿಸಿತು. ಅದೇ ಸಂದರ್ಭದಲ್ಲಿ ಇನ್ನೂ ಹನ್ನೆರಡು ಮಂದಿ ಆಯುಧಗಳಿಂದ ಸಜ್ಜಾಗಿ ಆ ಕೊಠಡಿಯನ್ನು ಪ್ರವೇಶಿಸಿದರು. ಕಪ್ಪು ಕೂದಲಿನ ವ್ಯಕ್ತಿಯ ಕೈಯಲ್ಲಿ ಎರಡು ಗನ್‌ಗಳಿದ್ದವು. ಒಂದು ಕೋಲ್ಟ್ ಪಿಸ್ತೂಲು ಮತ್ತೊಂದು ಮಾಸರ್ ಬಂದೂಕು. ಹೊಸದಾಗಿ ಕೊಠಡಿಯನ್ನು ಪ್ರವೇಶಿಸಿದವರ ಕೈಯಲ್ಲಿಯೂ ರಿವಾಲ್ವರ್‌ಗಳಿದ್ದವು. ಹನ್ನೆರಡು ಮಂದಿ ರಿವಾಲ್ವರ್ ಹಿಡಿದು ಕೊಠಡಿಯ ಆಯಕಟ್ಟಿನ ಜಾಗಗಳಲ್ಲಿ ನಿಂತರು.

ಜುಲೈ 17ರ ಬೆಳಗಿನ ಜಾವ ಎರಡು ಗಂಟೆ. ರಶಿಯಾದ ಕೊನೆಯ ಝಾರ್ (ಚಕ್ರವರ್ತಿ) ಎರಡನೇ ನಿಕೋಲಸ್ ಮತ್ತು ಅವನ ಕುಟುಂಬದವರ ಆಯುಷ್ಯದ ಕೊನೆಯ ಕ್ಷಣಗಳಾಗಿದ್ದುವು.

ಸಣ್ಣ ಗಡ್ಡದ, ದಟ್ಟ ಕಪ್ಪು ಕೂದಲುಗಳ ವ್ಯಕ್ತಿಯ ಹೆಸರು ಇಯಾಕೊವ್ ಯುರೊವ್‌ಸ್ಕಿ. ಅಂದು ಇಪಾತಿಯೆವ್ ನಿವಾಸದ (ಆ ದಿನಗಳಲ್ಲಿ ಈ ನಿವಾಸಕ್ಕೆ ವಿಶೇಷ ಕಾರ್ಯಾಚರಣೆ ನಿವಾಸ ಎಂದೂ ಹೆಸರಿತ್ತು) ರಕ್ಷಣೆಗಾಗಿ ನೇಮಕವಾಗಿದ್ದ ಸ್ಥಳೀಯ ಭದ್ರತಾ ಪೊಲೀಸ್‌ದಳದ ಮುಖ್ಯಸ್ಥನಾಗಿದ್ದ. ಜುಲೈ 16 ರಾತ್ರಿ ಜುಲೈ 17ರ ಬೆಳಗಿನ ಜಾವದ ಅವಧಿಯಲ್ಲಿ ಇಪಾತಿಯೆವ್ ನಿವಾಸದಲ್ಲಿ ನಡೆದ ಘಟನೆಗಳು ಮುಂದೆ ಐತಿಹಾಸಿಕವೆನಿಸಲಿವೆ ಎಂಬುದೂ ಯುರೊವ್‌ಸ್ಕಿಗೆ ಗೊತ್ತಿತ್ತು. ಎರಡು ವರ್ಷಗಳ ಅನಂತರ ಆತ ಬರೆದಿರಿಸಿದ 'ನೆನಪುಗಳಲ್ಲಿ' ಆ ರಾತ್ರಿಯ ಘಟನೆಗಳ ವಿವರಗಳಿವೆ. ಇತಿಹಾಸಕಾರ ಪೊಕೊವ್‌ಸ್ಕಿ ಸಲುವಾಗಿ ಈ ನೆನಪುಗಳನ್ನು ಬರೆದಿದ್ದೇನೆ ಎಂದು ಆತ ಹೇಳಿಕೊಂಡಿದ್ದಾನೆ. 1927ರಲ್ಲಿ ರಶಿಯನ್ ಕ್ರಾಂತಿಯ ಹತ್ತನೇ ವರ್ಧಂತಿ ವರ್ಷದಲ್ಲಿ ಆತ ಎರಡು ಗನ್‌ಗಳನ್ನು ಕ್ರಾಂತಿ ಮ್ಯೂಸಿಯಂಗೆ ಕೊಡುಗೆ ನೀಡಿದ.

ಯುರೊವ್‌ಸ್ಕಿ ನೆನಪುಗಳು ಹೀಗೆ ಬಿಚ್ಚಿಕೊಳ್ಳುತ್ತವೆ ....

1918 ಜುಲೈ 16ರಂದು ಬೆಳಿಗ್ಗೆ ಪರ್ಮ್ ಪಟ್ಟಣದಿಂದ ಸಾಂಕೇತಿಕ ಪರಿಭಾಷೆಯಲ್ಲಿರುವ ತಂತಿ ಸಂದೇಶ ತಲುಪಿತು. ರೊಮನೊವ್ ರಾಜಕುಟುಂಬದವರನ್ನು ಮುಗಿಸಿ ಬಿಡುವ ಆಜ್ಞೆ ಅದರಲ್ಲಿತ್ತು. ಅದೇ ದಿನ ಸಂಜೆ ಉರಲ್ಸ್‌ನ ಪ್ರಾದೇಶಿಕ ಭದ್ರತಾದಳದ ಮುಖ್ಯಸ್ಥ ಫಿಲಿಪ್‌ಗೊಲೊಷೆಚ್ಕಿನ್ ರಾಜಕುಟುಂಬದವರಿಗೆ ಮರಣದಂಡನೆ ಕಾರ್ಯಗತಗೊಳಿಸುವ ಇನ್ನೊಂದು ಆಜ್ಞೆ ಹೊರಡಿಸಿದ. ರೊಮನೊವ್ ಕುಟುಂಬದವರ ಶವಗಳನ್ನು ಒಯ್ಯಲು ನಡುರಾತ್ರಿ 12 ಗಂಟೆಗೆ ಟ್ರಕ್ ಇಪಾತಿಯೆವ್ ನಿವಾಸಕ್ಕೆ ತಲುಪಲಿದ್ದಿತು.

ಸಂಜೆ 6 ಗಂಟೆಗೆ ರೊಮನೊವ್ ಕುಟುಂಬದಲ್ಲಿ ಅಡುಗೆ ಕೆಲಸ ಮಾಡುತ್ತಿದ್ದ ಹುಡುಗ ಸಿದ್ನೆವ್‌ನನ್ನು ಅಜ್ಞಾತ ಸ್ಥಳವೊಂದಕ್ಕೆ ಕಳುಹಿಸಿದರು. ಈ ಬೆಳವಣಿಗೆ ಝಾರ್ ಮತ್ತು ಅವನ ಪತ್ನಿ ಹಾಗೂ ಮಕ್ಕಳನ್ನು ತೀವ್ರ ಚಿಂತೆಗೀಡು ಮಾಡಿತು. ಝಾರ್‌ನ ಖಾಸಗಿ ವೈದ್ಯ ಬೋತ್ಕಿನ್‌ಗೂ ಕಳವಳವಾಯಿತು. ಹುಡುಗನ ಮಾವನನ್ನು ಈಚೆಗೆ ಪೊಲೀಸರು ಬಂಧಿಸಿದ್ದರು. ಎರಡು ದಿನಗಳ ಬಳಿಕ ಆತ ಸೆರೆಯಿಂದ ತಪ್ಪಿಸಿಕೊಂಡ. ಈಚೆಗೆ ಆತನೇ ಬಂದು ಪೊಲೀಸರಿಗೆ ಶರಣಾಗಿದ್ದಾನೆ, ಆತ ಹುಡುಗನನ್ನು ನೋಡುವ ಅಪೇಕ್ಷೆ ವ್ಯಕ್ತಪಡಿಸಿದ ಕಾರಣ ಸಿದ್ನೆವ್‌ನನ್ನು

ಅವನ ಬಳಿಗೆ ಕಳುಹಿಸಲಾಗಿದೆ ಎಂದು ಅಡುಗೆ ಹುಡುಗ ಇದ್ದಕ್ಕಿದ್ದಂತೆ ಕಣ್ಮರೆಯಾದುದರ ಬಗ್ಗೆ ಯೂರೊವ್‌ಸ್ಕಿ ಸಮಜಾಯಿಷಿ ನೀಡಿದ. ರಾತ್ರಿ ಹನ್ನೆರಡೂವರೆ ಕಳೆದರೂ ಟ್ರಕ್ ಆಗಮಿಸಲಿಲ್ಲ. ಕಾರ್ಯಾಚರಣೆಯನ್ನು ಮತ್ತೆ ಮುಂದೂಡಬೇಕಾಯಿತು.

### ನರಮೇಧ

ಏತನ್ಮಧ್ಯೆ ಝಾರ್ ಕುಟುಂಬದವರ ಮೇಲೆ ವಿಚಾರಣೆ ಇಲ್ಲದೆಯೇ ಮರಣದಂಡನೆ ಜಾರಿಗೊಳಿಸಲು ಎಲ್ಲ ಸಿದ್ಧತೆಗಳೂ ಮುಕ್ತಾಯವಾದವು. ಹತ್ಯೆ ನಡೆಸಲು ರಿವಾಲ್ವರ್‌ಧಾರಿಯಾದ ಹನ್ನೆರಡು ಮಂದಿ ಪೊಲೀಸರನ್ನು ಯುರೊವ್‌ಸ್ಕಿ ಆರಿಸಿದ. ಅವರಲ್ಲಿ ಆರು ಮಂದಿ ಲೆಟ್ವಿಷ್ ಜನಾಂಗಕ್ಕೆ (ಲಾತ್ವಿಯಾ ಗಣರಾಜ್ಯದವರು) ಸೇರಿದವರಾಗಿದ್ದರು. ಅವರು ಝಾರ್‌ನ ಹೆಣ್ಣು ಮಕ್ಕಳ ಮೇಲೆ ಗುಂಡು ಹಾರಿಸಲು ನಿರಾಕರಿಸಿದರು.

ಸುಮಾರು ಒಂದು ಗಂಟೆಗೆ ಟ್ರಕ್ ನಿವಾಸದ ಎದುರು ಬಂದು ನಿಂತಾಗ ಮೇಲಂತಸ್ತಿನಲ್ಲಿ ಝಾರ್ ಕುಟುಂಬದವರು ಗಾಢ ನಿದ್ರೆಯಲ್ಲಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಡಾ. ಬೋತ್ಕಿನ್‌ಗೆ ಎಚ್ಚರವಾಯಿತು. ಆತ ಉಳಿದವರನ್ನು ಎಬ್ಬಿಸಿದ. ಅಂತರ್ಯುದ್ಧದ ಕಾರಣ ನಗರದಲ್ಲಿ ಅರಾಜಕತೆ ಹರಡಿರುವುದರಿಂದ ಸುರಕ್ಷತೆ ದೃಷ್ಟಿಯಿಂದ ನೀವೆಲ್ಲ ಕೆಳ ಅಂತಸ್ತಿನ ಕೊಠಡಿಗೆ ವಾಸ ಬದಲಾಯಿಸುವುದು ಉತ್ತಮ ಎಂದು ಭದ್ರತಾ ದಳದ ಪೊಲೀಸರು ಝಾರ್‌ನಿಗೆ ಸಲಹೆ ಮಾಡಿದರು. ಝಾರ್ ಮತ್ತು ಅವನ ಕುಟುಂಬದವರು ಉಡುಪು ಧರಿಸಿ ಸಿದ್ಧವಾಗಲು ಒಂದು ತಾಸು ಹಿಡಿಯಿತು. ಕೆಳ ಅಂತಸ್ತಿನಲ್ಲಿ ಮರದ ಗೋಡೆಗಳಿರುವ ಕೊಠಡಿಯನ್ನು ಆರಿಸಿದ್ದರು. ರಿವಾಲ್ವರ್‌ನಿಂದ ಸಿಡಿದ ಗುಂಡು ಹಿಂದಕ್ಕೆ ಚಿಮ್ಮುವುದನ್ನು ತಪ್ಪಿಸಲು ಅಂತಹ ಕೊಠಡಿಯೇ ಪ್ರಶಸ್ತ ಎಂದು ಯೂರೊವ್‌ಸ್ಕಿ ನಿರ್ಧರಿಸಿದ್ದ. ಕೊಠಡಿಯಲ್ಲಿದ್ದ ಎಲ್ಲ ಪೀಠೋಪಕರಣಗಳನ್ನು ಬೇರೆಡೆಗೆ ಸಾಗಿಸಲಾಯಿತು. ಕೊಠಡಿಯ ಹೊರಗೆ ಕೆಂಪು ಸೇನೆಯ ಆಯುಧಧಾರಿ ಕಾವಲುಗಾರರಿದ್ದರು. ಸುಪರಿಂಟೆಂಡೆಂಟ್ ಯೂರೋವ್‌ಸ್ಕಿ ತಾನೇ ಖುದ್ದಾಗಿ ಮೇಲಂತಸ್ತಿಗೆ ಹೋಗಿ ಝಾರ್ ಮತ್ತು ಕುಟುಂಬದವರನ್ನು ಕೆಳಗೆ ಕರೆದುಕೊಂಡು ಬಂದ. ಝಾರ್ ಎರಡನೆ ನಿಕೋಲಸ್ ಸೈನಿಕರು ಧರಿಸುವ ಉಡುಪು ಧರಿಸಿ ಕಿರಿಯ ಮಗ ಅಲೆಕ್ಸಿಯನ್ನು ಎತ್ತಿಕೊಂಡಿದ್ದ. ಝಾರಿನಾ ಅಲೆಗ್ಸಾಂಡ್ರಾ ಫೆಡೊರೊವ್ನಾ, ತಾತ್ಯಾನಾ, ಪೊಲ್ಗಾ, ಅನಸ್ತಾಸಿಯಾ, ಮರಿಯಾ, ಡಾಕ್ಟರ್ ಬೋತ್ಕಿನ್, ಕೆಲಸದಾಳು ಖಾರಿತೊನೊವ್, ಸೇವಕಿ ದೆಮಿದೊವ ಝಾರ್‌ನನ್ನು ಹಿಂಬಾಲಿಸಿದರು (ಡಾಕ್ಟರ ಬೋತ್ಕಿನ್ ಮತ್ತು ಸೇವಕರಿಗೆ ಝಾರ್ ಕುಟುಂಬವನ್ನು ತ್ಯಜಿಸಿ ನಿವಾಸದಿಂದ ಹೊರಡಲು ಅನುಮತಿ ನೀಡಲಾಗಿತ್ತು. ಆದರೆ ಅವರು ಅದನ್ನು ನಿರಾಕರಿಸಿದರು ಎಂಬ ಸುದ್ದಿಯೂ ಇದೆ) ಕೆಳ ಅಂತಸ್ತಿನ ಖಾಲಿ ಕೋಣೆಯೊಳಗೆ ಪ್ರವೇಶಿಸುವಾಗ ರಾಣಿ ಅಲೆಗ್ಸಾಂಡ್ರ ಅಲ್ಲಿ ಕುಳಿತುಕೊಳ್ಳಲು ಒಂದೇ ಒಂದು ಕುರ್ಚಿ ಇಲ್ಲದಿರುವ ಬಗ್ಗೆ ಸೋಜಿಗ ವ್ಯಕ್ತಪಡಿಸಿದಳು. ಯೂರೊವ್‌ಸ್ಕಿ ತಕ್ಷಣ ಎರಡು ಕುರ್ಚಿಗಳನ್ನು ತರಿಸಿದ. ಅವುಗಳಲ್ಲಿ ಒಂದರಲ್ಲಿ ಅಲೆಕ್ಸಿ ಕುಳಿತರೆ, ಮತ್ತೊಂದರಲ್ಲಿ ಅಲೆಗ್ಸಾಂಡ್ರಾ ಕುಳಿತಳು. ಉಳಿದವರು ಸಾಲಾಗಿ ನಿಲ್ಲಲು ಆಜ್ಞೆಯಾಯಿತು. ಹೊರಗೆ ಆಯುಧಧಾರಿಗಳಾಗಿ ನಿಂತವರಿಗೆ ಒಳ ಬರಲು ಆಜ್ಞೆಯಾಯಿತು. ಅವರು ಒಳಗೆ ಪ್ರವೇಶಿಸಿದ ಬಳಿಕ ಯೂರೊವ್‌ಸ್ಕಿ ಅತಿ ಕ್ರೂರ ಆಜ್ಞೆಯನ್ನು ಝಾರ್‌ನಿಗೆ ತಿಳಿಸಿದ. ''ಯೂರೋಪ್‌ನಲ್ಲಿರುವ ರೊಮನೊವ್ ಕುಟುಂಬದ ಸಂಬಂಧಿಕರು ರಶಿಯಾದ ಮೇಲೆ ಧಾಳಿ ನಡೆಸಲು ಸಿದ್ಧತೆ ನಡೆಸುತ್ತಿರುವುದರಿಂದ ರೊಮನೊವ್ ರಾಜಕುಟುಂಬದವರನ್ನು ಗುಂಡಿಕ್ಕಿ ಕೊಲ್ಲಲು ಉರಲ್ಸ್ ಸರಕಾರದ ಕಾರ್ಯ ನಿರ್ವಾಹಕ ಸಮಿತಿ ನಿರ್ಧರಿಸಿದೆ'' ಎಂದು ಯೂರೊವ್‌ಸ್ಕಿ ಹೇಳಿದ. ಝಾರ್ ನಿಕೋಲಸ್ ತನ್ನ ಪತ್ನಿ ಮತ್ತು ಮಕ್ಕಳ ಕಡೆಗೆ ಅಸಹಾಯಕ ನೋಟ ಬೀರಿದ. ಮತ್ತೆ ಸುಪರಿಂಟೆಂಡೆಂಟರ ಕಡೆಗೆ ತಿರುಗಿ ನೀವು ಹೇಳಿದ್ದೇನು ಎಂದು

ಪ್ರಶ್ನಿಸಿದ. ಯೂರೊವ್‌ಸ್ಕಿ ಮತ್ತೊಮ್ಮೆ ಮರಣ ದಂಡನೆ ಆಜ್ಞೆಯನ್ನು ಉಚ್ಚರಿಸಿದ. ರಿವಾಲ್ವರ್ ಹಿಡಿದು ನಿಂತಿದ್ದ ಪೊಲೀಸರಲ್ಲಿ ಪ್ರತಿಯೊಬ್ಬ ನಿಗೂ ಯಾರ ಮೇಲೆ ಗುಂಡು ಹಾರಿಸಿ ಕೊಲ್ಲಬೇಕೆಂದು ತಿಳಿಸಲಾಯಿತು. ಹೆಚ್ಚು ರಕ್ತ ಹರಿಯಿಸದೆ ತಕ್ಷಣ ಪ್ರಾಣ ಹೋಗುವಂತೆ ಗುಂಡು ಹಾರಿಸಲು ಆಜ್ಞೆಯಾಯಿತು. ಝಾರ್ ನಿಕೋಲಸ್ ಸಾವನ್ನು ಸ್ವಾಗತಿಸಲು ಸಿದ್ಧವಾಗಿರುವಂತೆ ಮೌನವಾಗಿದ್ದ. ಕೆಲವೇ ಸೆಕೆಂಡುಗಳಲ್ಲಿ ರಿವಾಲ್ವರ್‌ನಿಂದ ಗುಂಡು ಹಾರಿತು. ಮೂರು ನಾಲ್ಕು ನಿಮಿಷ ಗುಂಡು ಹಾರಾಟ ಮುಂದುವರಿಯಿತು. ಸ್ವತಃ ಯೂರೋವ್‌ಸ್ಕಿ ಝಾರ್ ನಿಕೋಲಸ್‌ನ ಮೇಲೆ ನೇರವಾಗಿ ಗುಂಡು ಹಾರಿಸಿ ಕೊಂದ. ಅನಂತರದ ಸರದಿ ಅಲೆಗ್ಸಾಂಡ್ರಾಳದು. ಆ ಮೇಲೆ ಉಳಿದವರ ಸರದಿ. ಝಾರ್ ಮತ್ತು ಝಾರಿನಾ ಗುಂಡೇಟನಿಂದ ತಕ್ಷಣ ಸತ್ತರು. ಉಳಿದವರಿಗೆ ಆ ಭಾಗ್ಯವಿರಲಿಲ್ಲವೇನೊ. ಅಲೆಕ್ಸಿ, ಆತನ ನಾಲ್ವರು ಸೋದರಿಯರು, ಡಾಕ್ಟರ್ ಬೋಟ್ಕಿನ್ ಮತ್ತು ಝಾರಿನಾಳ ಸೇವಕಿ ತಕ್ಷಣ ಸಾಯಲಿಲ್ಲ. ಮತ್ತೊಂದು ಸುತ್ತು ಗುಂಡು ಹಾರಿಸಿ ಅವರನ್ನು ಕೊಲ್ಲಲಾಯಿತು. ಆಲಿಕಲ್ಲು ಮಳೆಯಂತೆ ರಿವಾಲ್ವರ್‌ನಿಂದ ಸಿಡಿದ ಗುಂಡುಗಳು ಮರದ ಗೋಡೆಗೆ ಅಪ್ಪಳಿಸಿ ಹಿಂದಕ್ಕೆ ಚಿಮ್ಮುತ್ತಿದ್ದುವು. ಝಾರ್‌ನ ಹೆಣ್ಣುಮಕ್ಕಳಲ್ಲಿ ಒಬ್ಬಳು ಪೂರ್ತಿ ಸತ್ತಿರಲಿಲ್ಲ. ಬಯೊನೆಟ್‌ನಿಂದ ಇರಿದು ಅವಳನ್ನು ಕೊಲ್ಲಲು ಯತ್ನಿಸಿದರೆ ಅವಳು ಧರಿಸಿದ ದಪ್ಪ ಲಂಗವನ್ನು ಭೇದಿಸಿ ಬಯೊನೆಟ್ ಶರೀರವನ್ನು ತಾಗಲು ಸ್ವಲ್ಪ ಸಮಯ ತಗಲಿತು. ಒಟ್ಟಿನಲ್ಲಿ ಇಡೀ ಹತ್ಯಾಕಾಂಡ ಮುಗಿಯಲು 20 ನಿಮಿಷವಾಯಿತು.

### ಶವ ಸಾಗಾಣಿಕೆ

ಅನಂತರ ಶವಗಳನ್ನು ಟ್ರಕ್‌ಗೆ ಸಾಗಿಸುವ ಕೆಲಸ ಆರಂಭವಾಯಿತು. ಕಳೇಬರದಿಂದ ಸುರಿದ ರಕ್ತ ಟ್ರಕ್‌ನಲ್ಲಿ ಹರಡುವುದನ್ನು ತಪ್ಪಿಸಲು ಉಣ್ಣೆಯ ಒರಟು ಬಟ್ಟೆಯನ್ನು ಅವುಗಳ ಮೇಲೆ ಮುಚ್ಚಿದರು. ಇದೇ ಸಂದರ್ಭದಲ್ಲಿ ಶವ ಸಾಗಿಸುವ ಕೆಲಸ ಮಾಡುತ್ತಿದ್ದ ಕೆಲವು ಗಾರ್ಡ್‌ಗಳಿಗೆ ಶವಗಳಿಗೆ ಮೈಮೇಲಿದ್ದ ಆಭರಣಗಳನ್ನು ಕದಿ



ಯುವ ಚಪಲ ಹುಟ್ಟಿತು. ಇದನ್ನು ಮೊದಲೇ ಊಹಿಸಿದ್ದ ಯೂರೊವ್‌ಸ್ಕಿ ರಾಜಕುಟುಂಬದವರು ಧರಿಸಿದ್ದ ಒಡವೆಗಳನ್ನು ಕದಿಯಲು ಪ್ರಯತ್ನಿಸಿದರೆ ಸ್ಥಳದಲ್ಲಿಯೇ ಗುಂಡಿಟ್ಟು ಕೊಲ್ಲಲಾಗುವುದು ಎಂದು ಎಚ್ಚರಿಸಿದ. ಕಾಮ್ರೇಡ್ ಎರ್ಮಕೊವ್ (ಈತ ಕಮ್ಯೂನಿಸ್ಟ್ ಪಾರ್ಟಿ ಸದಸ್ಯನಾಗಿದ್ದ, ವರ್ಕ್ಹ್ - ಇಸೆತ್ಸ್‌ಕ್ ಕಲ್ಲಿದ್ದಲು ಗಣಿಯಲ್ಲಿ ಕೆಲಸ ಮಾಡುತ್ತಿದ್ದ) ಶವಗಳನ್ನು ಟ್ರಕ್‌ಗೆ ಸಾಗಿಸುವ ಕೆಲಸವನ್ನು ಯಶಸ್ವಿಯಾಗಿ ಪೂರೈಸಿದ. ಅವುಗಳನ್ನು ಎಲ್ಲಿ ಸಮಾಧಿ ಮಾಡುವುದು? ಎರಡನೇ ದೊಡ್ಡ ಸಮಸ್ಯೆ ಅವರಿಗೆ ಎದುರಾಯಿತು. ಎರ್ಮಕೊವ್ ಪರಿಹಾರೋಪಾಯ ಸೂಚಿಸಿದ.

ಬೆಳಗಿನ ಜಾವ ಮೂರು ಗಂಟೆಗೆ ಅವರು ವರ್ಕ್ಹ್ - ಇಸೆತ್ಸ್‌ಕ್ ಕಲ್ಲಿದ್ದಲು ಗಣಿ ಪ್ರದೇಶವನ್ನು ದಾಟಿದರು. ಅಲ್ಲಿಂದ ಮುಂದೆ ರಸ್ತೆ ಅತ್ಯಂತ ಕೆಟ್ಟ ಸ್ಥಿತಿಯಲ್ಲಿದ್ದ ಕಾರಣ ಟ್ರಕ್ ಮುಂದುವರಿಯುವಂತಿರಲಿಲ್ಲ. ಕಾರಿನಲ್ಲಿ ಪ್ರಯಾಣ ಮುಂದುವರಿಸಲು, ಅನಂತರ ಸ್ವಲ್ಪ ದೂರ ಕುದುರೆ ಗಾಡಿಯಲ್ಲಿ ಸಾಗಲು ನಿರ್ಧರಿಸಲಾಯಿತು. ವರ್ಕ್ಹ್ - ಇಸೆತ್ಸ್‌ಕ್ ಕಲ್ಲಿದ್ದಲು ಗಣಿ ಪ್ರದೇಶದಿಂದ ಸುಮಾರು 3 ಮೈಲು ದಾಟಿದ ಬಳಿಕ ಅವರಿಗೆ 25 ಮಂದಿಯುಳ್ಳ ಅಶ್ವಾರೋಹಿಗಳ ತಂಡ ಎದುರಾಯಿತು. ಶವಗಳನ್ನು ಸಮಾಧಿ ಮಾಡಲು ಎರ್ಮಕೋವ್ ಆರಿಸಿದ ಕೆಲಸಗಾರರು ಅವರಾಗಿದ್ದರು. ಶವಗಳನ್ನು ನೋಡಿದ ತಕ್ಷಣ ಓಹ್ ಇವರೆಲ್ಲ ಸತ್ತಿದ್ದಾರೆ ಎಂದು ಅವರು ಉದ್ಗರಿಸಿದರು. ಝೂರ್ ಕುಟುಂಬದವರನ್ನು ಮುಗಿಸುವ ಕೆಲಸವನ್ನು ತಮಗೆ ಒಪ್ಪಿಸಲಾಗುತ್ತದೆ ಎಂದು ಅವರು ಭಾವಿಸಿದ್ದರು. ಅನಂತರ ಎಲ್ಲ ಶವಗಳನ್ನು ಕುದುರೆಗಾಡಿಗೆ ಸಾಗಿಸಲಾಯಿತು. ಅವು ಎರಡು ಆಸನಗಳುಳ್ಳ ಕುದುರೆಗಾಡಿಗಳು. ಶವ ಸಾಗಿಸಲು ಯೋಗ್ಯವಾಗಿರಲಿಲ್ಲ. ಶವಗಳ ಮೈಮೇಲಿದ್ದ ಒಡವೆಗಳನ್ನು ನೋಡಿ ಕಾರ್ಮಿಕರ ಕಣ್ಣುಗಳು ಮಿನುಗಿದವು. ಕದಿಯಲು ಪ್ರಯತ್ನಿಸಿದರೆ ಸ್ಥಳದಲ್ಲಿಯೇ ಗುಂಡಿಕ್ಕಲಾಗುವುದು ಎಂದು ಯೂರೊವ್‌ಸ್ಕಿ ಮತ್ತೊಮ್ಮೆ ಎಚ್ಚರಿಸಿದ. ಝೂರ್‌ನ ನಾಲ್ವರು ಹೆಣ್ಣು ಮಕ್ಕಳು ಚಿನ್ನದ ಎಳೆಗಳಿಂದ ಕಸೂತಿ ಹಾಕಿದ ಬೆಲೆಬಾಳುವ ಕುಪ್ಪಸಗಳನ್ನು ಧರಿಸಿರುವುದು ಯೂರೊವ್‌ಸ್ಕಿಯ ಗಮನ ಸೆಳೆಯಿತು. ಶವಗಳನ್ನು ಹೂಳುವ ಮೊದಲು ಅವುಗಳ ಮೈಮೇಲಿನ ಉಡುಪುಗಳನ್ನು ಕಳಚಿ ಬೆತ್ತಲೆಗೊಳಿಸಲು ನಿರ್ಧರಿಸಲಾಯಿತು. ಆದರೆ ಶವಗಳನ್ನು ಹೂಳುವ ಸ್ಥಳ ಎಲ್ಲಿದೆ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಚೆನ್ನಾಗಿ ಬೆಳಗಾಗಲು ಒಂದೆರಡು ತಾಸು ಉಳಿದಿತ್ತು. ಶವಗಳನ್ನು ಸಮಾಧಿ ಮಾಡಲು ಯಾವುದೇ ಸಿದ್ಧತೆ ನಡೆದಿರಲಿಲ್ಲ ಎಂಬುದು ಆಗ ಸ್ಪಷ್ಟವಾಯಿತು. ಅವರು ಪ್ರಯಾಣಿಸುತ್ತಿದ್ದ ಕಾರು ಕಾಡಿನ ದಾರಿಯಲ್ಲಿ ಎರಡು ಮರಗಳ ನಡುವೆ ಸಿಕ್ಕಿ ಹಾಕಿಕೊಂಡಿದ್ದ ಕಾರಣ ಅದನ್ನು ಅಲ್ಲಿಯೇ ಬಿಟ್ಟು ಕುದುರೆಗಾಡಿಯಲ್ಲಿ ಪ್ರಯಾಣ ಮುಂದುವರಿಸಿದರು. ಆ ವೇಳೆಗೆ ಅವರು ಇಕತೆರಿನ್‌ಬರ್ಗನಿಂದ ಹತ್ತು ಮೈಲು ದೂರ ಕ್ರಮಿಸಿದ್ದರು. ಮುಂಜಾನೆ ಏಳು ಗಂಟೆಗೆ ಅವರು ಕೊಪ್ತಿಯಾಕಿ ಗ್ರಾಮಕ್ಕೆ ತಲುಪಿದರು. ಗ್ರಾಮದ ಸಮೀಪ ಕಾಡಿನಲ್ಲಿ ಪಾಳು ಬಿದ್ದ ಹಳೆಯ ಕಲ್ಲಿದ್ದಲು ಗಣಿಯಿತ್ತು. ಒಂದು ಕಾಲದಲ್ಲಿ ಅದು ಚಿನ್ನದ ಗಣಿಯಾಗಿತ್ತು. ಏಳು ಅಡಿ ಆಳದ ಗಣಿಯಲ್ಲಿ ಎರಡು ಅಡಿ ತನಕ ನೀರು ತುಂಬಿತ್ತು.

ಆ ಸ್ಥಳದ ಸುತ್ತಲೂ ಕಾವಲುಗಾರರು ನಿಂತು ಗ್ರಾಮದ ಯಾರೊಬ್ಬರೂ ಅಲ್ಲಿಗೆ ಸುಳಿಯದಂತೆ ಜಾಗ್ರತೆವಹಿಸಿದರು. ಆಗ ಯೂರೊವ್‌ಸ್ಕಿ ಐವರು ಕಾರ್ಮಿಕರು ಮತ್ತು ಇಬ್ಬರು ರೆಡ್‌ಗಾರ್ಡ್‌ಗಳನ್ನು ಮಾತ್ರ ಅಲ್ಲಿರಿಸಿ ಉಳಿದವರನ್ನೆಲ್ಲಾ ದೂರ ಕಳುಹಿಸಿ ಶವಗಳನ್ನು ಸಮಾಧಿ ಮಾಡಲು ನಿರ್ಧರಿಸಿದ. ಶವಗಳ ಉಡುಪು ಕಳಚಿ ಬೆತ್ತಲೆ ಮಾಡಿ ಸುಡಲು ನಿರ್ಧರಿಸಿದ. ರಾಣಿ ಅಲೆಗ್ಸಾಂಡ್ರಾ ರೇಷ್ಮೆ ಬಟ್ಟೆಯಲ್ಲಿ ಮುತ್ತಿನ ಹರಳುಗಳನ್ನು ಪೋಣಿಸಿದ ಆಕರ್ಷಕ ಸೊಂಟ ಪಟ್ಟಿ ಧರಿಸಿದ್ದಳು. ಆಕೆ ತೊಟ್ಟುಕೊಂಡಿದ್ದ ಎಲ್ಲ ಆಭರಣ

ಗಳ ಒಟ್ಟು ತೂಕವೇ 8 ಕೆ.ಜಿ.ಗಳಷ್ಟು. ಅವೆಲ್ಲವನ್ನೂ ಅಲಾಪತ್ಯೆವ್‌ಸ್ಕ್ ಎಂಬಲ್ಲಿ ಪಾಳು ಬಿದ್ದ ಕಟ್ಟಡದ ತಳಭಾಗದ ಕೋಣೆಯಲ್ಲಿ ಹೂತು ಹಾಕಲಾಯಿತು. (1919ರಲ್ಲಿ ಝಾರ್ ಕುಟುಂಬದ ಹತ್ಯೆಯ ತನಿಖೆ ಮುಗಿದ ತರುವಾಯ ಅವೆಲ್ಲವನ್ನೂ ಅಗೆದು ತೆಗೆದು ಮಾಸ್ಕೋ ನಗರಕ್ಕೆ ಕಳುಹಿಸಲಾಯಿತು) ಉಳಿದ ಸೊತ್ತುಗಳನ್ನು ಸುಟ್ಟು ಹಾಕಿದರು. ಶವಗಳನ್ನು ನೀರಲ್ಲಿ ಮುಳುಗಿಸಿದರು. ಅನಂತರ ಕೈ ಬಾಂಬ್ ಸ್ಫೋಟಿಸಿ ಗುಂಡಿಗೆ ಮಣ್ಣು ತುಂಬಿಸಿದರು. ಈ ಪ್ರಕ್ರಿಯೆಯಲ್ಲಿ ಕೆಲವು ಶವಗಳಿಗೆ ಜಖಂ ಆಗಿರಬೇಕು. ಕೆಲವು ಶವಗಳ ಅಂಗಾಂಗಗಳು ಮುಖ್ಯವಾಗಿ ಕೈ ಹಾಗೂ ಕಾಲಿನ ಬೆರಳುಗಳು ತುಂಡಾದವು. ಕೆಲವು ತಿಂಗಳ ಬಳಿಕ ಇಡೀ ಕಾರ್ಯಾಚರಣೆಯ ತನಿಖೆಗೆ ಸಂಬಂಧಿಸಿ ತನಿಖಾಧಿಕಾರಿಗಳು ಗಣಿಯ ತಳವನ್ನು ಜಾಲಾಡಿ ಶೋಧಿಸಿದಾಗ ತುಂಡಾದ ಕೈಗಳು ಬೆರಳುಗಳು ಪತ್ತೆಯಾದವು. ಆದರೆ ರೊಮನೊವ್ ಕುಟುಂಬದ ಶವಗಳು ಶಾಶ್ವತವಾಗಿ ಈ ಗಣಿಯ ಹೊಂಡದಲ್ಲಿ ಉಳಿಯಲಿಲ್ಲ. ಅದು ತಾತ್ಕಾಲಿಕ ಸಮಾಧಿಯಾಗಿತ್ತು. ಅದೇ ದಿನ (ಜುಲೈ 17) ಮಧ್ಯಾಹ್ನ 11 ಗಂಟೆಯ ವೇಳೆಗೆ ಯುರೋವ್‌ಸ್ಕಿ ಕಾರ್ಯಾಚರಣೆ ಮುಕ್ತಾಯವಾದುದರ ಬಗ್ಗೆ ಉರಲ್ಸ್ ಕಾರ್ಯನಿರ್ವಾಹಕ ಸಮಿತಿಗೆ ವರದಿ ಒಪ್ಪಿಸಿದ. ಝಾರ್ ನಿಕೋಲಸ್ ಮತ್ತು ಕುಟುಂಬದವರ ಶವಗಳು ಯಾವುದೇ ಕ್ಷಣದಲ್ಲಿಯೂ ಗ್ರಾಮದ ಜನರ ಕಣ್ಣಿಗೆ ಬೀಳುವ ಭೀತಿಯಿತ್ತು. ಶವಗಳನ್ನು ವ್ಯವಸ್ಥಿತವಾಗಿ ಸಮಾಧಿ ಮಾಡದೆ ವಿಧಿಯೇ ಇರಲಿಲ್ಲ.

ಆಗ ಉರಲ್ಸ್ ಕಾರ್ಯನಿರ್ವಾಹಕ ಸಮಿತಿಯ ಅಧಿಕಾರಿಗಳಿಬ್ಬರು (ಸಫರೊವ್, ಬೆಲೊಬೊರೊಡೊವ್) ಉಪಯುಕ್ತ ಸಲಹೆ ನೀಡಿದರು. ಕೊಪ್ತಿಯಾಕಿ ಗ್ರಾಮದಿಂದ ಮಾಸ್ಕೋ ನಗರದ ಕಡೆಗೆ ಸಾಗುವ ರಸ್ತೆಯಲ್ಲಿ 9 ಕಿ.ಮೀ. ದೂರದಲ್ಲಿ ಆಳವಾದ, ನೀರು ತುಂಬಿದ ಸುರಂಗಗಳಿವೆ. ಅದು ಸಮಾಧಿಗೆ ಪ್ರಶಸ್ತ ಸ್ಥಳವೆಂದು ಅವನಿಗೆ ತಿಳಿಸಲಾಯಿತು. ತಕ್ಷಣವೇ ಯೂರೊವ್‌ಸ್ಕಿ ತನ್ನ ಬೆಂಗಾವಲು ಮಂದಿಯೊಂದಿಗೆ ಕಾರಿನಲ್ಲಿ ಆ ಸ್ಥಳಕ್ಕೆ ಧಾವಿಸಿದ. ಆದರೆ ಮಧ್ಯ ದಾರಿಯಲ್ಲಿ ಕಾರು ಕೆಟ್ಟು ಹೋಗಿ ಮುಂದೆ ಚಲಿಸಲು ನಿರಾಕರಿಸಿದ ಕಾರಣ ಆ ಸ್ಥಳಕ್ಕೆ ಬೇಗನೆ ತಲುಪಲು ಸಾಧ್ಯವಾಗಲಿಲ್ಲ. ಕಾಲ್ನಡಿಗೆಯಲ್ಲಿ ಅಲ್ಲಿಗೆ ತಲುಪಿದ. ಅಲ್ಲಿ ನೀರು ತುಂಬಿದ ಆಳವಾದ ಮೂರು ಸುರಂಗಗಳಿದ್ದವು. ಶವಗಳ ಕತ್ತಿಗೆ ಕಲ್ಲು ಬಿಗಿದು ಅದರಲ್ಲಿ ಮುಳುಗಿಸಲು ಯೋಚಿಸಿದ. ಆದರೆ ಆ ಸ್ಥಳದ ಆಸುಪಾಸಿನಲ್ಲಿ ಕೆಲವು ರೆಡ್‌ಗಾರ್ಡ್‌ಗಳಿದ್ದ ಕಾರಣ ಯೂರೋವ್‌ಸ್ಕಿಯ ಯೋಜನೆ ಫಲಿಸಲಿಲ್ಲ. ಶವಗಳನ್ನು ಮುಳುಗಿಸುವಾಗ ಅವರು ನೋಡಿದರೆ ಇಡೀ ಪ್ರಕ್ರಿಯೆ ಕಾಳ್ಗಿಚ್ಚಿನಂತೆ ಹರಡಬಹುದು ಎಂದು ಆತ ಭಾವಿಸಿದ. ಮತ್ತೆ ಶವಗಳನ್ನು ಇಕತೆರಿನ್‌ಬರ್ಗ್‌ನಿಂದ ಸಾಗಿಸಿದ ಟ್ರಕ್‌ನಲ್ಲಿಯೇ ತುಂಬಿಸಿ ಭದ್ರತಾ ದಳದ ಮೂರು ನಾಲ್ಕು ಮಂದಿ ಇದ್ದ ಬೆಂಗಾವಲಿನ ಕಾರು ಅದನ್ನು ಹಿಂಬಾಲಿಸುವುದು ಎಂದು ಯೂರೊವ್‌ಸ್ಕಿ ನಿರ್ಧರಿಸಿದ. ಈ ಮಧ್ಯೆ ಯೂರೊವ್‌ಸ್ಕಿ ದಾರಿಯಲ್ಲಿ ಬರುತ್ತಿದ್ದ ಕುದುರೆ ಗಾಡಿಯೊಂದರಲ್ಲಿ ಕೊಪ್ತಿಯಾಕಿ ಗ್ರಾಮಕ್ಕೆ ವಾಪಸಾದ. ದಾರಿಯಲ್ಲಿ ಮತ್ತೆ ಒಂದೆರಡು ಅಪಘಾತಗಳಾದವು. ಶವಗಳನ್ನು ಮುಳುಗಿಸಿದ ಪಾಳು ಬಿದ್ದ ಗಣಿಯಿರುವಲ್ಲಿಗೆ ಅವರು ಪ್ರಯಾಣಿಸುತ್ತಿದ್ದಾಗ ಯೂರೊವ್‌ಸ್ಕಿ ಕುದುರೆಗಾಡಿಯಿಂದ ಜಾರಿ ಬಿದ್ದು ತೀವ್ರ ಗಾಯವಾಯಿತು. ಸ್ವಲ್ಪ ದೂರ ಕ್ರಮಿಸುವಷ್ಟರಲ್ಲಿ ಅವನ ಜೊತೆಗಿದ್ದ ಭದ್ರತಾ ದಳದವರೂ ಗಾಡಿಯಿಂದ ಬಿದ್ದು ಗಾಯಗಳಾದವು. ಶವಗಳನ್ನು ಸುರಂಗಗಳಲ್ಲಿ ಹೂಳಲು ನಿರ್ಧರಿಸಿದ ಯೋಜನೆಯನ್ನು ಕೈಬಿಡಬೇಕಾಗುವುದೇನೋ ಎಂದು ಯೂರೊವ್‌ಸ್ಕಿ ಯೋಚಿಸಿದ. ಪಾಳು ಬಿದ್ದ ಗಣಿಯಿಂದ ಶವಗಳನ್ನು ಮೇಲೆತ್ತಿ ಎಲ್ಲವನ್ನೂ ಸುಟ್ಟು ಹಾಕಲು ಅಂತಿಮವಾಗಿ ನಿರ್ಧರಿಸಲಾಯಿತು.

ಕೊನೆಗೆ ಜುಲೈ 17ರ ಸಂಜೆ ಶವ ದಹನಕ್ಕೆ ಅಗತ್ಯವಿರುವ ವಸ್ತುಗಳನ್ನು (ಸೀಮೆಎಣ್ಣೆ, ಹೈಡ್ರೊಕ್ಲೋರಿಕ್ ಆಮ್ಲ ಇತ್ಯಾದಿ) ಸಂಗ್ರಹಿಸ

ಲಾಯಿತು. ರಾತ್ರಿ 11 ಗಂಟೆಯೊಳಗೆ ಶವಗಳ ದಹನಕಾರ್ಯ ಮುಗಿಯಬೇಕೆಂದು ಯೂರೊವ್‌ಸ್ಕಿ ನಿರ್ಧರಿಸಿದ. ಆದರೆ ಭದ್ರತಾದಳದ ಕೆಲವು ಪೊಲೀಸರ ಮಧ್ಯೆ ಉದ್ಭವಿಸಿದ ಸಣ್ಣ ಘರ್ಷಣೆಯ ಪರಿಣಾಮವಾಗಿ ಈ ಕೆಲಸ ಮತ್ತೆ ತಡವಾಯಿತು. ಹೆಣಗಳನ್ನು ಮೇಲೆತ್ತಲು ಬಲವಾದ ಹಗ್ಗಗಳನ್ನು ಆರಿಸಲಾಯಿತು. ಮಧ್ಯ ರಾತ್ರಿ ಹನ್ನೆರಡು ಗಂಟೆಗೆ ಯೂರೊವ್‌ಸ್ಕಿಯ ತಂಡ ಕೊಪ್ತಿಯಾಕಿ ಗ್ರಾಮಕ್ಕೆ ತಲುಪಿತು.

### ಆಕಸ್ಮಿಕ ಅಪಘಾತ

ಏತನ್ಮಧ್ಯೆ ಇನ್ನೊಂದು ದಿನ ಉದಯವಾಗುತ್ತಿತ್ತು. ಝಾರ್ ಕುಟುಂಬದ ಹತ್ಯೆಯಾಗಿ ಅಂದಿಗೆ ಎರಡನೇ ದಿನ. ಪಾಳು ಬಿದ್ದ ಚಿನ್ನದ ಗಣಿಯಲ್ಲಿಯೇ ಕೆಲವು ಶವಗಳನ್ನು ಸಮಾಧಿ ಮಾಡುವುದೆಂದು ನಿರ್ಧರಿಸಲಾಯಿತು. ಆಗ ಎರ್ಮಕೊವ್‌ನ ಪರಿಚಯವಿದ್ದ ರೈತನೊಬ್ಬ ಅಲ್ಲಿಗೆ ಬಂದ. ಶವಗಳನ್ನು ಮೇಲೆತ್ತುವ ಕೆಲಸ ಮತ್ತೆ ತಡವಾಯಿತು. ಶವಗಳನ್ನು ಆಳವಾದ ಸುರಂಗಕ್ಕೆ ಎಸೆಯುವುದು ಎಂದು ನಿರ್ಧರಿಸಿದರು. ಆದರೆ ಶವಗಳನ್ನು ಒಯ್ಯಲು ಬಳಸಿದ ಕುದುರೆಗಾಡಿ ಸಾಕಷ್ಟು ಬಲಿಷ್ಠವಾಗಿರಲಿಲ್ಲ. ಗಾಡಿ ತುಸು ದೂರ ಹೋಗುವಷ್ಟರಲ್ಲಿ ಹೆಣಗಳ ಭಾರಕ್ಕೆ ಅದು ಮುರಿಯಿತು. ಆಗ ಸುಪರಿಂಟೆಂಡೆಂಟ್ ಯೂರೊವ್‌ಸ್ಕಿ ಸಮೀಪದ ಪಟ್ಟಣಕ್ಕೆ ಹೋಗಿ ಒಂದು ಟ್ರಕ್ ಮತ್ತು ಎರಡು ಕಾರುಗಳನ್ನು ಎರವಲು ಪಡೆದ. ಆ ದಿನವೂ ರಾತ್ರಿ 9ರವರೆಗೆ ಕೆಲಸ ಆರಂಭಿಸಲು ಸಾಧ್ಯವಾಗಲಿಲ್ಲ. ಜುಲೈ 19ರಂದು ಮುಂಜಾನೆ ಶವಗಳನ್ನು ಒಯ್ಯುತ್ತಿದ್ದ ಟ್ರಕ್ ಕೆಸರಿನಲ್ಲಿ ಸಿಕ್ಕಿಹಾಕಿಕೊಂಡಿತು. ಶವಗಳನ್ನು ಆ ಸ್ಥಳದಲ್ಲಿಯೇ ಸುಟ್ಟು ಹಾಕುವುದು ಅಥವಾ ಆಳವಾದ ಹೊಂಡ ಅಗೆದು ಹೂಳುವುದರ ಹೊರತು ಅನ್ಯಮಾರ್ಗವಿರಲಿಲ್ಲ.

ಝಾರ್ ಕುಟುಂಬದ ಕಗ್ಗೊಲೆಯಾಗಿ ಅಂದು ಮೂರನೇ ದಿನ. ಎಲ್ಲ ಹೆಣಗಳೂ ಕೊಳೆತು ದುರ್ನಾತ ಸಹಿಸಲಸಾಧ್ಯವಾಗಿತ್ತು. ಅವು ಇನ್ನಷ್ಟು ದುರ್ನಾತ ಬೀರುವುದನ್ನು, ಕೊಳೆಯು




ವುದನ್ನು ತಪ್ಪಿಸಲು ಅವುಗಳ ಮೇಲೆ ಹೈಡ್ರೋಕ್ಲೋರಿಕ್ ಆಮ್ಲ ಸುರಿಯಲಾಯಿತು. ಮೊದಲು ಅವರು ರಾಜಕುಮಾರ ಅಲೆಕ್ಸಿ ಮತ್ತು ರಾಣಿ ಅಲೆಗ್ಸಾಂಡ್ರ ಫೆಡೊರೊವ್ನಾಳ ಶವಗಳ ಮೇಲೆ ಸೀಮೆಎಣ್ಣೆ ಸುರಿದು ಸುಟ್ಟು ಹಾಕಿದರು. ಉಳಿದ ಶವಗಳನ್ನು ಸಾಮೂಹಿಕ ಗೋರಿಯಲ್ಲಿ ಸಮಾಧಿ ಮಾಡಲು ಅವರು ನಿರ್ಧರಿಸಿದರು. ಬೆಳಗಿನ ಜಾವದ ವೇಳೆಗೆ ಕಾರ್ಮಿಕರು ಎಂಟು ಅಡಿ ಉದ್ದ ಆರು ಅಡಿ ಆಳದ ಚೌಕಾಕೃತಿಯ ದೊಡ್ಡ ಹೊಂಡ ನಿರ್ಮಿಸಿದರು. ಎಲ್ಲ ಶವಗಳನ್ನೂ ಅದರಲ್ಲಿ ಗುಡ್ಡೆ ಹಾಕಿ ಮತ್ತೊಮ್ಮೆ ಹೈಡ್ರೋಕ್ಲೋರಿಕ್ ಆಮ್ಲ ಸುರಿದರು. ಅನಂತರ ಹೊಂಡವನ್ನು ಮಣ್ಣು ಕಸಕಡ್ಡಿ ಮರದ ರೆಂಬೆಗಳಿಂದ ಮುಚ್ಚಿ ಅವುಗಳ ಮೇಲೆ ಮರದ ಹಲಗೆ ಮುಚ್ಚಿ ಎಲ್ಲರೂ ಅದರ ಮೇಲೆ ಹಲವು ಬಾರಿ ಓಡಾಡಿ ಭದ್ರಗೊಳಿಸಿದರು. ಹೊಸಬರು ಯಾರಾದರೂ ಅದನ್ನು ನೋಡಿದರೆ ಅಲ್ಲಿ ಹೊಂಡವಿತ್ತೆಂಬುದೇ

ಗುರುತು ಹಚ್ಚಲು ಸಾಧ್ಯವಾಗುತ್ತಿರಲಿಲ್ಲ.

ಯೂರೊವ್‌ಸ್ಕಿಯ 'ನೆನಪುಗಳಲ್ಲಿ' ಇಷ್ಟು ವಿವರಗಳು ನಮಗೆ ದೊರೆಯುತ್ತವೆ. ಅವೆಲ್ಲವೂ ಶೀಘ್ರಲಿಪಿಯಲ್ಲಿವೆ.

ಇಕ್ತೆರಿನ್ ಬರ್ಗ್‌ನ ಇಪಾತಿಯೆವ್ ನಿವಾಸದಲ್ಲಿ ರಶಿಯದ ಕೊನೆಯ ಚಕ್ರವರ್ತಿ ಎರಡನೇ ನಿಕೋಲಸ್ ಮತ್ತು ಕುಟುಂಬದವರ ಅಮಾನುಷ ಹತ್ಯೆಯಾಗಿ ಇಪ್ಪತ್ತು ವರ್ಷಗಳ ತರುವಾಯ 1938ರಲ್ಲಿ ಯೂರೊವ್‌ಸ್ಕಿ ಕ್ರೆಮ್ಲಿನ್‌ನ ಆಸ್ಪತ್ರೆಯಲ್ಲಿ ಹೊಟ್ಟೆ ಹುಣ್ಣಿನ ಕಾಯಿಲೆಯಿಂದ ಮರಣಶಯ್ಯೆಯಲ್ಲಿದ್ದ. ಆಸ್ಪತ್ರೆಯ ಹಾಸಿಗೆಯಿಂದಲೇ ಆತ ತನ್ನ ಮಕ್ಕಳಿಗೊಂದು ಪತ್ರ ಬರೆದಿದ್ದ. ಆದರೆ ಆ ಪತ್ರದಲ್ಲಿ 1918 ಜುಲೈ 16ರ ರಾತ್ರಿ ನಡೆದ ಕರಾಳ ಘಟನೆಗಳ ವಿವರಗಳಿರಲಿಲ್ಲ. ತನ್ನ ಆಯುಷ್ಯದ ಅಂತಿಮ ಕ್ಷಣಗಳಲ್ಲಿಯೂ ಆತ ಅಂದಿನ ಅಮಾನುಷ ಕೃತ್ಯಕ್ಕೆ ಕಿಂಚಿತ್ ಪಶ್ಚಾತ್ತಾಪ ವ್ಯಕ್ತಪಡಿಸಿದ ಕುರುಹೂ ಈ ಪತ್ರದಲ್ಲಿರಲಿಲ್ಲ.

ಜುಲೈ 16-17ರ ಭಯಾನಕ ರಾತ್ರಿಯ ಘಟನೆಗಳಲ್ಲಿ ಸಹಭಾಗಿಯಾದ ಇತರ ವ್ಯಕ್ತಿಗಳು ಆ ದಿನವನ್ನು ಜ್ಞಾಪಿಸಿಕೊಳ್ಳುತ್ತಿದ್ದರೇ? ಉದಾಹರಣೆಯಾಗಿ 'ಉರಾಲ್‌ಸ್ಕಿ ರಬೊಚಿ' ಪತ್ರಿಕೆಯ ಸಂಪಾದಕ ಪೊರೊಜಿಯೆವ್ ಉರಲ್ಸ್ ಪ್ರಾದೇಶಿಕ ಕಾರ್ಯಕಾರಿ ಸಮಿತಿಯ ಸದಸ್ಯರಲ್ಲಿ ಒಬ್ಬನಾಗಿದ್ದ. ರೊಮನೊವ್ ರಾಜಕುಟುಂಬವನ್ನು ನಾಮಾವಶೇಷಗೊಳಿಸುವ ನಿರ್ಧಾರ ಕೈಗೊಂಡ ಸದಸ್ಯರಲ್ಲಿ ಆತನೂ ಸೇರಿದ್ದ. ಝಾರ್ ಕುಟುಂಬದ ಹತ್ಯೆ ನಡೆದು ಹತ್ತು ವರ್ಷಗಳ ಬಳಿಕ 1928ರಲ್ಲಿ ಈತ ತನ್ನ 'ನೆನಪು'ಗಳನ್ನು ಪ್ರಕಟಿಸಿದ. ಆತ ಹೀಗೆ ಬರೆದಿದ್ದಾನೆ:

ಪ್ರತಿ ಕ್ರಾಂತಿಕಾರಿಗಳ ದಾಳಿಯಿಂದ ಇಕ್ತೆರಿನ್ ಬರ್ಗನ್ನು ರಕ್ಷಿಸುವುದು ಅಸಾಧ್ಯವೆನಿಸಿದಾಗ ರಾಜಕುಟುಂಬದವರ ಭವಿಷ್ಯದ ಚಿಂತೆ ಎಲ್ಲರನ್ನೂ ಕಾಡಿತು. ಅಂದಿನ ಅಂತರ್ಯುದ್ಧದ ಪರಿಸ್ಥಿತಿಯಲ್ಲಿ ಮಾಜಿ ಝಾರ್‌ನನ್ನು ಬೇರೆಡೆಗೆ ಕಳುಹಿಸಲು ಸಾಧ್ಯವಿರಲಿಲ್ಲ. ಆದುದರಿಂದ ಉರಲ್ಸ್‌ನ ಪ್ರಾದೇಶಿಕ ಸೋವಿಯೆತ್‌ನ ಸಭೆಯೊಂದರಲ್ಲಿ ರೊಮನೊವ್‌ನ ಕುಟುಂಬದವರನ್ನು ವಿಚಾರಣೆ ನಡೆಸದೆಯೇ ಗುಂಡಿಕ್ಕಿ ಕೊಲ್ಲಲು ನಿರ್ಧರಿಸಲಾಯಿತು. ಜುಲೈ 16-17ರ ರಾತ್ರಿ ರಾಜಕುಟುಂಬದವರನ್ನು ನಿದ್ದೆಯಿಂದ ಎಬ್ಬಿಸಿ ವಿಶೇಷ ಕಾರ್ಯಾಚರಣೆ ನಿವಾಸದ ಕೆಳ ಅಂತಸ್ತಿನ ಕೊಠಡಿಗೆ ಕರೆ ತರಲಾಯಿತು. ಅನಂತರ ಅವರಿಗೆ ಯಾವುದೇ ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ನೀಡದೆ ರೆಡ್‌ಗಾರ್ಡ್‌ಗಳು ಗುಂಡು ಹಾರಿಸಿ ಅವರ ಬದುಕಿನ ಕತೆ ಮುಗಿಸಿದರು. ಮರುದಿನ ಮುಂಜಾನೆ ಉರಲ್ಸ್‌ನ ಪ್ರಾದೇಶಿಕ ಸೋವಿಯೆತ್‌ನ ಪ್ರಿಸೀಡಿಯಂ ಹಿಂದಿನ ರಾತ್ರಿ ನಡೆದ ಘಟನೆಗಳ ಕುರಿತ ಅಧಿಕೃತ ಹೇಳಿಕೆ ನೀಡಿತು. ಅದರ ಬೆನ್ನಲ್ಲೇ ಕೇಂದ್ರ ಸರಕಾರ ಈ ಹೇಳಿಕೆಯನ್ನು ಅಧಿಕೃತವಾಗಿ ಒಪ್ಪುವವರೆಗೂ ಅದನ್ನು ಪ್ರಕಟಿಸಲು ಸಾಧ್ಯವಿಲ್ಲ ಎಂದು ಆಜ್ಞೆಯೂ ಹೊರಟಿತು. ಎರಡು ದಿನಗಳ ಬಳಿಕ ಕೇಂದ್ರ ಕಾರ್ಯನಿರ್ವಾಹಕ ಸಮಿತಿ ಹೇಳಿಕೆಯನ್ನು ಅಧಿಕೃತವಾಗಿ ಅನುಮೋದಿಸಿದ ಸುದ್ದಿ ತಲುಪಿತು.

★ ★ ★

ರಶಿಯಾದ ರಾಜಕೀಯ ಬದುಕಿನಲ್ಲಿ ಮಹತ್ತರ ಪರಿವರ್ತನೆಗಳಾಗಿರುವ ಇಂದಿನ ದಿನಗಳಲ್ಲಿ 73 ವರ್ಷಗಳ ಹಿಂದೆ ನಡೆದ ರೊಮನೊವ್ ರಾಜಕುಟುಂಬದ ಹತ್ಯೆಯನ್ನು ಕುರಿತು ಇತಿಹಾಸಕಾರರು ವಿಭಿನ್ನ ನಿಲುವು ತಳೆದಿದ್ದಾರೆ. ರಶ್ಯದ ಕೊನೆಯ ಝಾರ್ ಮತ್ತು ಅವನ ಕುಟುಂಬದ ಹತ್ಯೆ ಅಕ್ಟೋಬರ್ ಮಹಾಕ್ರಾಂತಿಯ ಅತಿರೇಕಗಳಲ್ಲಿ ಒಂದು ಎಂದು ಅವರು ಪರಿಗಣಿಸಿದ್ದಾರೆ. ವಿಚಾರಣೆಗೆ ಗುರಿಪಡಿಸದೆಯೇ ಝಾರ್ ಕುಟುಂಬವನ್ನು ಅಮಾನುಷವಾಗಿ ಹತ್ಯೆ ಮಾಡಿದ್ದು ನರಮೇಧವಲ್ಲವೇ ಎಂದು ಅವರು ಪ್ರಶ್ನಿಸುತ್ತಿದ್ದಾರೆ. (ಕೃಪೆ: ಸ್ಪುಟ್ನಿಕ್)



# ನಿಮ್ಮ ಶಬ್ದಭಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

1. ಪ್ರತ್ಯಯ
   (ಅ) ಎದುರು ಬೀಳುವಿಕೆ
   (ಆ) ವಿಶ್ವಾಸ
   (ಇ) ಪಲಾಯನ
   (ಈ) ಮೇಲಾಟ
2. ಭದ್ರ
   (ಅ) ಹರಿಯುವಿಕೆ
   (ಆ) ಕೊಳಕು ವಾಸನೆ
   (ಇ) ಸುರಕ್ಷಿತ
   (ಈ) ಮೋಡ
3. ಆಶಯ
   (ಅ) ನಿಟ್ಟುಸಿರು
   (ಆ) ಉಸಿರು ಕಟ್ಟುವಿಕೆ
   (ಇ) ಶಿಕ್ಷೆ ಕೊಡುವುದು
   (ಈ) ಅಭಿಪ್ರಾಯ
4. ಮುದಿತ
   (ಅ) ಆನಂದಗೊಂಡ
   (ಆ) ವಾರ್ಧಕ್ಯ
   (ಇ) ತಲೆ ಬೋಳಾದ
   (ಈ) ಬೀಗ ಹಾಕಿದ
5. ನಕಾರ
   (ಅ) ಇಲ್ಲವೆನ್ನುವುದು
   (ಆ) ತಿರಸ್ಕಾರ
   (ಇ) ರೂಪವಿಲ್ಲದಿರುವಿಕೆ
   (ಈ) ಸಿಹಿ
6. ಹೃದಯಂಗಮ
   (ಅ) ಎದೆಯೊಡೆಯುವಿಕೆ
   (ಆ) ಮನಮುಟ್ಟುವ
   (ಇ) ಎದೆಗೆ ಗುಂಡು ಹಾಕುವುದು
   (ಈ) ಸೂರ್ಯೋದಯದ ವೇಳೆ
7. ಹ್ರದ
   (ಅ) ಸಾವಕಾಶ
   (ಆ) ನೀರು ತುಂಬುವ ಗುದಾಣ
   (ಇ) ಹುಡುಗ
   (ಈ) ಬಿಲ್ಲಿನ
8. ಸೊಮ್ಮು
   (ಅ) ಜೂಜಿನ ಪಣ
   (ಆ) ಕೃತಜ್ಞತೆ
   (ಇ) ಮೈಗಳ್ಳತನ
   (ಈ) ಸೊಬಗು
9. ಸ್ಖಾಲಿತ್ಯ
   (ಅ) ಬರಿದಾಗಿರುವುದು
   (ಆ) ಕಳ್ಳತನ
   (ಇ) ತಪ್ಪು ನಡೆ
   (ಈ) ಕುಣಿದಾಟ
10. ಮೋರಿ
    (ಅ) ತೂಬು
    (ಆ) ಹೆಣ್ಣು ನವಿಲು
    (ಇ) ಮೊಡವೆ
    (ಈ) ಸೇದುವುದು
11. ಮೋಘ
    (ಅ) ಮುಗಿಲು
    (ಆ) ಭ್ರಾಂತಿ
    (ಇ) ಪ್ರೀತಿ
    (ಈ) ವ್ಯರ್ಥ
12. ಚಾಕಚಕ್ಯ
    (ಅ) ಬೆಂಕಿಗಾಗಿ ಕಡೆಯುವ ಕಲ್ಲುಗಳು
    (ಆ) ಹಲಸಿನ ತೊಳೆ
    (ಇ) ಪ್ರೇಮಭಂಗ
    (ಈ) ಚಾತುರ್ಯ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

**1. ಪ್ರತ್ಯಯ**

(ಆ) ವಿಶ್ವಾಸ, ನಂಬಿಕೆ; ಖಂಡಿತವಾಗುವುದು. ಉದಾ: ಏನೆಂದರೂ ಅವಳಿಗೆ ಅವನ ಮಾತು ಪ್ರತ್ಯಯಕ್ಕೆ ಬರಲಿಲ್ಲ. (ಸಂ.)

**2. ಭದ್ರ**

(ಇ) ಸುರಕ್ಷಿತ; ಶುಭಕರ, ಮಂಗಳಕರ; ಶ್ರೇಷ್ಠ. ಉದಾ: ಗುಟ್ಟು ಅವನ ಕೈಲಿ ಭದ್ರವಾಗಿತ್ತು. (ಸಂ.)

**3. ಆಶಯ**

(ಈ) ಅಭಿಪ್ರಾಯ; ಮನಸ್ಸು; ಕೋಶ. ಉದಾ: ಒಳ್ಳೆಯ ಆಶಯದಿಂದ ಹೇಳಿದ ಮಾತು. (ಸಂ.)

**4. ಮುದಿತ**

(ಅ) ಆನಂದಗೊಂಡ, ಸಂತೋಷಗೊಂಡ, ಹಿಗ್ಗಿದ. ಉದಾ: ಸುದ್ದಿ ಕೇಳಿ ಮುದಿತನಾದ. (ಸಂ. ಮುದ= ಸಂತೋಷ-ದಿಂದ)

**5. ನಕಾರ**

(ಅ) ಇಲ್ಲವೆನ್ನುವುದು, ನಿರಾಕರಿಸುವುಪಿಕೆ, ಒಲ್ಲೆನೆನ್ನುವಿಕೆ. ಉದಾ: ಬೇಡಿಕೆಗೆ ನಕಾರದ ಉತ್ತರ ಬಂತು. (ಸಂ. ನ= ಇಲ್ಲ+ಕಾರ= ಮೂಡುವಿಕೆ)

**6. ಹೃದಯಂಗಮ**

(ಅ) ಮನಮುಟ್ಟುವ, (ಆಹ್ಲಾದದ) ಸುಂದರ, ಮೆಚ್ಚುವಂಥ. ಉದಾ: ಹೃದಯಂಗಮವಾದ ಮಾತು. (ಸಂ. ಹೃದಯಂ= ಮನಸ್ಸನ್ನು+ಗಮ= ಹೊಕ್ಕುವ)

**7. ಹೈದ**

(ಇ) ಹುಡುಗ, ಬಾಲಕ. ಉದಾ: ನಮ್ಮೂರ ಹೈದರು ಬಲು ತುಂಟರು (ದೇಶ್ಯ(?) ತಮಿಳು- ಪಯ್= ಹಸುರುತನ, ಎಳೆತನದಿಂದ?)

**8. ಸೊಮ್ಮು**

(ಈ) ಸೊಬಗು, ಸೌಂದರ್ಯ; ರೀತಿ; ಸಂಬಂಧ. ಉದಾ: ಸೊಮ್ಮಿನ ತರುಣಿ. (ಸಂ. ಸ್ವಯಂ= ತಾನು?)

**9. ಸ್ಖಾಲಿತ್ಯ**

(ಇ) ತಪ್ಪು ನಡೆ, ಎಡಹುವುದು, ಬೀಳುವುದು; ದೋಷ. ಉದಾ: ಬರವಣಿಗೆಯ ಸ್ಖಾಲಿತ್ಯಗಳು. (ಸಂ. ಸ್ಖಲಿತ= ಎಡಹುವಿಕೆ- ಅದರ ಭಾವ)

**10. ಮೋರಿ**

(ಅ) ತೂಬು, ಗಟಾರು, ಚರಂಡಿ. ಉದಾ: ಬಚ್ಚಲು ಮೋರಿ. (ಹಿಂದಿ)

**11. ಮೋಘ**

(ಈ) ವ್ಯರ್ಥವಾದ್ದು, ಹುಸಿಯಾದದ್ದು, ನಿರುಪಯೋಗಿ. ಉದಾ: ಪ್ರಯತ್ನಗಳು ಮೋಘವಾದವು. (ಸಂ.)

**12. ಚಾಕಚಕ್ಯ**

(ಈ) ಚಾತುರ್ಯ, ಜಾಣ್ಮೆ, ಚುರುಕುತನ. ಉದಾ: ಚಾಕಚಕ್ಯದಿಂದ ಕೆಲಸ ಸಾಧಿಸಿದನು. (ಸಂ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ನಿಮ್ಮ ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

6- 8 ಸರಿಯಿದ್ದರೆ ... ಸಾಧಾರಣ
9-10 " ... ಉತ್ತಮ
11-12 " ... ಅತ್ಯುತ್ತಮ

# ಚುಂಬಕ ಮಾನವ

ಐವತ್ತೆಂಟು ವರ್ಷಗಳ ಯೂರಿ ಕಲ್ನಿತ್ಸೇವನ ಶರೀರದ ದೆಶೆಯನ್ನು ನೋಡಿ ಡಾಕ್ಟರುಗಳು ಚಕಿತರಾಗಿದ್ದಾರೆ. ಇವನ ದೇಹ ಶಕ್ತಿಶಾಲಿ ಚುಂಬಕದಂತೆ; ಯಾವುದೇ ಧಾತುವಿನ ಸಾಮಾನನ್ನು ಐದು ಅಡಿ ದೂರದಿಂದ ತನ್ನೆಡೆಗೆ ಸೆಳೆದುಕೊಳ್ಳುತ್ತದೆ. ಚಾಕು, ಚಮಚ, ಕತ್ತರಿ, ಬಾಂಡ್ಲಿ, ತವ, ಐರನ್ ಬಾಕ್ಸ್ ಇಂತಹವುಗಳನ್ನು ಸರಕ್ಕೆಂದು ಇವನ ಶರೀರ ಸೆಳೆದುಕೊಂಡುಬಿಡುತ್ತದೆ. ಇದರಿಂದ ಇವನು ಸಾಮಾನುಗಳ ಹತ್ತಿರ ಓಡಾಡುವಂತೆಯೇ ಇಲ್ಲ!

ಯೂರಿ 39 ವರ್ಷಗಳಿಂದ ಕಬ್ಬಿಣದ ಅದಿರಿನ ಗಣಿಯಲ್ಲಿ ಕೆಲಸ ಮಾಡುತ್ತಿದ್ದಾನೆ. ಇವನಿಗೆ 40 ವರ್ಷ ವಯಸ್ಸಾದಾಗ ಈ ರೀತಿಯ ಚುಂಬಕೀಯ ಲಕ್ಷಣ ಇವನ ದೇಹದಲ್ಲಿ ಪ್ರಕಟವಾಯಿತು.

*ಟೇಕಲ್ ಗೋಪಾಲಕೃಷ್ಣ*



ಮೊದಲು ಮೊದಲು ಲೋಹದ ಸಾಮಾನುಗಳು ಮೈಯಿಗೆ ಮೆತ್ತಿ ಕೊಂಡಂತಾಗುತ್ತಿತ್ತು. ಆಮೇಲೆ ಸ್ಥಿತಿ ದುಸ್ತರವಾಗುತ್ತಾ ಬಂತು. ಶರೀರದಿಂದ ಈ ಸಾಮಾನುಗಳನ್ನು ಬಿಡಿಸುವುದೇ ಕಷ್ಟವಾಯಿತು.

'ಈಗ ನನಗೆ ಹೊರಗೆ ಹೋಗಲೇ ಹೆದರಿಕೆಯಾಗುತ್ತೆ' ಅನ್ನುತ್ತಾನೆ ಈತ. ಹೊರಗೆ ಹೋದರೆ ಯಾರದೋ ವಸ್ತುಬಿಡಿಸಿಕೊಂಡು ಬಂದು ತನಗೆ ಮೆತ್ತಿಕೊಂಡರೆ ಫಜೀತಿಯಾಗುತ್ತದೆ ಎಂಬುದು ಯೂರಿಯ ಸಮಸ್ಯೆ. ಅದನ್ನು ಆಮೇಲೆ ಬಿಡಿಸಲು ಆಗದೇ ಹೋದರೆ ಏನು ಗತಿ? ನೀವೇ ಯೋಚಿಸಿ. ದಿನೇ ದಿನೇ ಚುಂಬಕದ ಶಕ್ತಿ ಇವನಲ್ಲಿ ಹೆಚ್ಚುತ್ತಾ ಹೋಗುತ್ತಿದೆ. ಎಷ್ಟೋ ಸಲ ಚಾಕು, ಚೂರಿ, ಎಗರಿ ಬಂದು ಇವನ ದೇಹಕ್ಕೆ ತೀವ್ರವಾದ ಘಾಯವನ್ನು ಉಂಟುಮಾಡಿವೆ.

ಈ ಕಾರಣದಿಂದ ಕಬ್ಬಿಣದ ಅದಿರಿನ ಗಣಿಯ ಅಧಿಕಾರಿಗಳು ಇವನನ್ನು ಕೆಲಸದಿಂದ ತೆಗೆದು

ಹಾಕಲು ಯೋಚಿಸುತ್ತಿದ್ದಾರೆ. ಇವನ ಶರೀರದ ಈ ವಿಚಿತ್ರ ಶಕ್ತಿಯಿಂದ ಗಣಿಯಲ್ಲಿ ದುರ್ಘಟನೆ ಯಾಗಬಹುದೆಂದು ಹೆದರುತ್ತಾರೆ. ಪತ್ನಿಯ ಪ್ರೇರಣೆಯಿಂದ ಇವನು ಡಾಕ್ಟರುಗಳ ಹತ್ತಿರವೂ ಹೋದ.

ವಿಶ್ವವಿಖ್ಯಾತ ಡಾ. ಸೆರ್‌ಗ ಈ ಫ್ರೂಮಿನ್ ಇವನ ಚಿಕಿತ್ಸೆ ಮಾಡುತ್ತಿದ್ದಾರೆ. ''ಮಾನವೀಯ ಚುಂಬಕತ್ವ ಅಂತಹ ಆಶ್ಚರ್ಯವೇನಲ್ಲ. ಕೋಟಿ ಜನಗಳಲ್ಲಿ ಒಬ್ಬರಿಗೆ ಈ ರೀತಿ ಉಂಟಾಗುತ್ತದೆ.'' ಎಂದು ಹೇಳಿಕೆಯಿತ್ತಿದ್ದಾರೆ. ಆದರೆ ಯೂರಿ ವಿಷಯ ನಿಜಕ್ಕೂ ಪ್ರಮಾದವಾಗಿದೆ ಎನ್ನುತ್ತಾರೆ ಈ ಡಾಕ್ಟರ್.

ಇಷ್ಟು ಹೆಚ್ಚು ಚುಂಬಕತ್ವ ಮೊದಲ ಬಾರಿಗೆ ಕಂಡು ಬಂದಿರುವುದು ಯೂರಿಯಲ್ಲಿಯೇ. ನೋಡಲು ಯೂರಿ ಆರೋಗ್ಯವಾಗಿ ಕಂಡರೂ ಸಹ ಇವನ ಶರೀರದಲ್ಲಿ ಎಲ್ಲೋ ಹೆಚ್ಚು ಕಡಿಮೆ ಯಿದೆ ಎಂದು ಡಾಕ್ಟರು ಹೇಳಿಕೆಯಿತ್ತಿದ್ದಾರೆ.

ಅನೇಕ ವರ್ಷಗಳ ಕಾಲ ಉಚ್ಚ ಚುಂಬಕತ್ವ ಇರುವ ಕಬ್ಬಿಣದ ಅದಿರಿನ ಗಣಿಯಲ್ಲಿ ಕೆಲಸ ಮಾಡಿದ್ದರಿಂದ ಈ ರೋಗ ಇವನಿಗೆ ಉಂಟಾಗಿರಬಹುದೆಂದು ಡಾಕ್ಟರರ ಅಭಿಪ್ರಾಯ. ಇವನ ರೋಗಕ್ಕೆ ಉಪಚಾರ ಕಂಡುಹಿಡಿಯಲು ಇನ್ನೂ ನಾವು ಅಸಮರ್ಥರಾಗಿದ್ದೇವೆಂದು ಡಾಕ್ಟರರು ಅಭಿಪ್ರಾಯ ಪಟ್ಟಿದ್ದಾರೆ. ●

---

## ● ಗೂಬೆಯ ಸಂಕೇತ :

ತಮಿಳುನಾಡಿನ ವೆಲಿಂಗ್‌ಟನ್ ಅವರ ಮಿಲಿಟರಿ ಮಹಾವಿದ್ಯಾಲಯದಿಂದಾಗಿ ವಿಶ್ವವಿಖ್ಯಾತವಾಗಿದೆ. ಅತ್ಯುನ್ನತ ಮಿಲಿಟರಿ ಅಧಿಕಾರಿಗಳಿಗೆ ತರಬೇತಿ ನೀಡುವ ಮಹಾವಿದ್ಯಾಲಯದ ಅಧಿಕೃತ ಚಿಹ್ನೆ ಏನು ಗೊತ್ತೆ? 1.56 ಕೆ.ಜಿ. ತೂಕದ ಬೆಳ್ಳಿಯ ಗೂಬೆಯ ಮೂರ್ತಿ ಅವರ ಹೆಮ್ಮೆಯ ಲಾಂಛನವಾಗಿದೆ.

ಗೂಬೆ ಅನೇಕರಿಗೆ ದುಃಶಕುನದ ಪಕ್ಷಿ. ಪುರಾಣಗಳಲ್ಲಿ ಅದು ಲಕ್ಷ್ಮಿಯ ವಾಹನ. ರೋಮ್‌ನ ಬುದ್ಧಿ ದೇವತೆ ಮಿನರ್ವಳ ಪ್ರೀತಿ ಪಾತ್ರ ಜೀವಿಯದು. ಮರಾಠರಲ್ಲಿ ಗೂಬೆಯ ಧ್ವನಿಯನ್ನು ಕೇಳಿಕೊಂಡು ಭವಿಷ್ಯ ನುಡಿಯುವ ವಾಡಿಕೆಯಿದೆ. ಬಸವನ ಹುಳು, ಜೀರುಂಡೆ, ಹೆಗ್ಗಣ ಮೊದಲಾದವನ್ನು ಕಬಳಿಸಿ ರೈತರಿಗೆ ಅದು ಉಪಕರಿಸುತ್ತದೆ. ತಂತ್ರಬದ್ಧವಾಗಿ ಸದ್ದಿಲ್ಲದೆ ಕಾರ್ಯ ಮಗ್ನವಾಗಿರುವ ಈ ಪಕ್ಷಿಯನ್ನು ಪರಿಶ್ರಮ, ಚಿಂತನೆ, ಕಟ್ಟೆಚ್ಚರಗಳ ಸಂಕೇತ ಎಂದು ಭಾವಿಸಲಾಗುತ್ತದೆ. ಹೀಗಾಗಿ ಅದು ಮಹಾವಿದ್ಯಾಲಯವೊಂದರ ಹೆಮ್ಮೆಯ ಸಂಕೇತವಾಗಿದೆ.

## ● ರಂಜಾನಿನ ಉಪವಾಸ :

ಉಪವಾಸವ್ರತವಾದ ರಂಜಾನಿನ ಆಚರಣೆಯ ಬಗ್ಗೆ ಹಜರತ್ ಮಹಮದರು ಹೀಗೆಂದಿರುವರು. 'ನೀವು ಉಪವಾಸ ಮಾಡುವಾಗ ನಿಮ್ಮ ಕಿವಿ, ಕಣ್ಣು, ನಾಲಗೆ, ಕೈ ಹಾಗೂ ಪ್ರತಿಯೊಂದು ಅಂಗವೂ ಉಪವಾಸ ಮಾಡಲಿ. ಉಪವಾಸವು ಒಂದು ಧಾರ್ಮಿಕ ಶಿಸ್ತು. ಅದು ನಮ್ಮನ್ನು ಅಲ್ಲಾ ಬಳಿ ಕರೆದೊಯ್ಯುವ ಸಾಧನ. ಉಪವಾಸವು ನನಗಾಗಿ ಮಾತ್ರ ಆಗಿರುವುದರಿಂದ ಅದಕ್ಕೆ ತಕ್ಕ ಫಲ ನೀಡುವುದು ನನ್ನ ಹಕ್ಕು ಎಂದು ಅಲ್ಲಾ ಭಾವಿಸುತ್ತಾರೆ. ಆದ್ದರಿಂದ ರಂಜಾನಿನ ಮಾಸದಲ್ಲಿ ಉಪವಾಸವು ಅಲ್ಲಾನ ಭಕ್ತರ ಕರ್ತವ್ಯವಾಗಿದೆ.'

(ಸಂಗ್ರಹ) ಕೆ.ವೆಂಕಣ್ಣಾಚಾರ್

# ಪ್ರವೀಣ

ಮೂಲ : ನಕಶೀಮಾ ಟೋನ್

ಸಂಗ್ರಹಾನುವಾದ : ಎಚ್.ಪಾಂಡುರಂಗ ವಿಠಲ

ಪುರಾತನ ಚೀನದ ಚಾಪೊ ರಾಜ್ಯದ ರಾಜಧಾನಿ ಹ್ಯಾನ್‌ಟನ್‌ನಲ್ಲಿ ಚಿ ಚಾಂಗ್ ಎಂಬ ಬಿಲ್ಗಾರ ನಿದ್ದ. ಅವನಿಗೆ ಪ್ರಪಂಚದಲ್ಲೆ ಶ್ರೇಷ್ಠ ಬಿಲ್ಗಾರ ಎನಿಸಿಕೊಳ್ಳಬೇಕೆಂಬ ಆಸೆ. ಅನೇಕ ಕಡೆ ವಿಚಾರಿಸಿದ ಮೇಲೆ ದೇಶದಲ್ಲಿ ಅತ್ಯುತ್ತಮ ಆಚಾರ್ಯ ವಿಯ್‌ಫಿ ಎಂದು ಅವನಿಗೆ ತಿಳಿಯಿತು. ನೂರು ಗಜ ದೂರದಿಂದ ಒಂದು ಎಲೆಯೊಳಗೆ ಬತ್ತಳಿಕೆಯಲ್ಲಿದ್ದ ಬಾಣಗಳನ್ನೆಲ್ಲ ತುಂಬಬಲ್ಲ ಕೌಶಲ್ಯ ಈ ಆಚಾರ್ಯನದ್ದು ಎಂಬ ಪ್ರಸಿದ್ಧಿ ಇತ್ತು. ಅವನು ಇದ್ದ ದೂರದ ರಾಜ್ಯಕ್ಕೆ ಚಿ ಚಾಂಗ್ ಪ್ರಯಾಣ ಬೆಳೆಸಿ, ಅವನ ಶಿಷ್ಯನಾದ.

ವಿಯ್ ಫಿ ಮೊದಲು ಕಣ್ಣು ಮಿಟುಕಿಸದೆ ಇರುವುದನ್ನು ಕಲಿಯಲು ಆಜ್ಞೆ ಮಾಡಿದ; ಚಿ ಚಾಂಗ್ ತನ್ನ ಮನೆಗೆ ಹೋದ. ಒಳಗೆ ಹೋದೊಡನೆ ಹೆಂಡತಿಯ ಮಗ್ಗದ ಅಡಿ ನುಸುಳಿ ಅಂಗಾತ ಮಲಗಿದ. ಮಗ್ಗದ ಕಾಲೊತ್ತು ಕಣ್ಣ ಹತ್ತಿರವೇ ಆಡುವುದನ್ನು ದುರುಗುಟ್ಟಿ ನೋಡುವುದು ಆತನ ಉದ್ದೇಶ. ಹೀಗೆ ಇದ್ದ ಅವನನ್ನು ನೋಡಿ ಆತನ ಹೆಂಡತಿ ಆಶ್ಚರ್ಯಪಟ್ಟಳು. ಹೀಗೆ ಅವಿಯಿಂದ ಯಾರಾದರೂ ಗಂಡಸು ನೋಡುತ್ತಿದ್ದರೆ ತಾನೇ ನೇಯಲು ಅಸಾಧ್ಯ [illegible] ಎಷ್ಟೇ ಮುಜುಗರವಾದರೂ ಹೀಗೆಯೇ ಕಾಲೊತ್ತನ್ನು ಆಡಿಸುತ್ತ ನೆಯ್ಯುವಂತೆ ಈತ ಒತ್ತಾಯಿಸಿದ.

ಚಿ ಚಾಂಗ್ ನಿತ್ಯ ಹೀಗೆ ಮಗ್ಗದಡಿ ಮಲಗಿ ದೃಷ್ಟಿಸುವುದನ್ನು ಮುಂದುವರೆಸಿದ. ಎರಡು ವರ್ಷದ ಬಳಿಕ ಕಾಲೊತ್ತಿನ ಕೆಳಗೆ ರೆಪ್ಪೆ ಸಿಕ್ಕಿ ಹಾಕಿಕೊಂಡರೂ ರೆಪ್ಪೆ ಆಡಿಸದೆ ಇರುವ ಘಟ್ಟಕ್ಕೆ ತಲುಪಿದ. ಮಗ್ಗದ ಅಡಿಯಿಂದ ಆತ ಕೊನೆಯ ಸಲ ಹೊರ ಬಂದಾಗ ಈ ದೀರ್ಘ ಅಭ್ಯಾಸ ಫಲಕಾರಿಯಾದದ್ದನ್ನು ಕಂಡ. ಈಗ ಕಣ್ಣುಗುಡ್ಡೆಗೇ ಪೆಟ್ಟಾದರೂ, ಬೆಂಕಿ ಕಿಡಿ ಹಾರಿದರೂ, ಧೂಳಿನ ರಾಸಿಯೇ ಬಿದ್ದರೂ ಈ ಯಾವುದೂ ಆತನ ರೆಪ್ಪೆ ಮುಚ್ಚಿಸಲು ಅಸಮರ್ಥವಾಗಿತ್ತು. ಅವನು ತನ್ನ ರೆಪ್ಪೆಯ ಸ್ನಾಯುಗಳಿಗೆ ಎಂತಹ ತರಬೇತಿ ನೀಡಿದ್ದನೆಂದರೆ ನಿದ್ದೆ ಮಾಡುವಾಗಲೂ ಅವನ ಕಣ್ಣು ಅಗಲವಾಗಿ ತೆರೆದೇ ಇರುತ್ತಿತ್ತು. ಒಂದು ದಿನ ಕಣ್ಣು ತೆರೆದು ತನ್ನ ಮುಂದಿರುವುದನ್ನು ದಿಟ್ಟಿಸುತ್ತ ಕುಳಿತಿರುವಾಗ ಸಣ್ಣ ಜೇಡವೊಂದು ಆತನ ರೆಪ್ಪೆಗಳ ನಡುವೆ ಬಲೆ ನೇಯ್ದಿತು. ಆತನಿಗೆ ಈಗ ತನ್ನ ಸಾಧನೆಯ ಬಗ್ಗೆ ಗುರುವಿಗೆ ಹೇಳುವ ವಿಶ್ವಾಸ ಬಂತು.

ಚಿ ಚಾಂಗ್ ತನ್ನ ಸಾಧನೆಯ ಹಂತಗಳನ್ನು ನೆನಪಿಸಿ ಹೇಳುತ್ತಿದ್ದಂತೆಯೇ ವಿಯ್‌ಫಿ, 'ರೆಪ್ಪೆ ಮಿಟುಕಿಸದಿರುವುದು [illegible] ಈಗ [illegible]

ವಸ್ತುಗಳನ್ನು ಗಮನಿಸಿ ನೋಡುವುದನ್ನು ಕಲಿ. ಅತಿ ಸೂಕ್ಷ್ಮವಾದದ್ದು ಎದ್ದು ಕಾಣುವಂತಾದಾಗ, ಸಣ್ಣದು ಭಾರಿಯಾಗಿ ಕಾಣುವ ಕಾಲ ಬಂದಾಗ ಮತ್ತೆ ಬಂದು ನನ್ನನ್ನು ಕಾಣು' ಎಂದ.

ಚಿ ಚಾಂಗ್ ಪುನಃ ಮನೆಗೆ ಹಿಂದಿರುಗಿದ. ಈ ಸಲ ಮನೆಯ ಕೈತೋಟಕ್ಕೆ ಹೋಗಿ ಅತಿ ಸಣ್ಣ ಹುಳುವನ್ನು ಹುಡುಕಿದ. ಬರಿಗಣ್ಣಿಗೆ ಕಂಡೂಕಾಣದಷ್ಟು ಸೂಕ್ಷ್ಮಹುಳು ಸಿಕ್ಕಾಗ ಅದನ್ನು ಹುಲ್ಲಿನ ದಳವೊಂದರ ಮೇಲೆ ಇಟ್ಟು ಒಳಗೆ ತಂದು ತನ್ನ ಕೋಣೆಯ ಕಿಡಕಿಗೆ ತೂಗು ಹಾಕಿದ. ಆ ಕೋಣೆಯ ಇನ್ನೊಂದು ತುದಿಗೆ ಹೋಗಿ ಕುಳಿತು ದಿನಗಟ್ಟಲೆ ಆ ಹುಳುವನ್ನು ದಿಟ್ಟಿಸಿ ನೋಡಲಾರಂಭಿಸಿದ. ಮೊದಲಿಗೆ ಆತ ಅದನ್ನು ಬರೀ ನೋಡಬಲ್ಲವನಾಗಿದ್ದ. ಹತ್ತು ದಿನಗಳ ಬಳಿಕ ಅದು ಸ್ವಲ್ಪ ದೊಡ್ಡದಾಗಿ ಕಂಡಂತೆ ಭಾಸವಾಯಿತು. ಮೂರು ತಿಂಗಳ ಕೊನೆಯಲ್ಲಿ ಅದು ಒಂದು ರೇಷ್ಮೆ ಹುಳುವಿನಷ್ಟು ಬೆಳೆದಂತೆ ಕಂಡು, ಅದರ ದೇಹದ ಭಾಗಗಳನ್ನೆಲ್ಲ ಆತ ಗುರುತಿಸಬಲ್ಲವನಾಗಿದ್ದ.

ಹೀಗೆ ಹುಳುವನ್ನು ದಿಟ್ಟಿಸುತ್ತಾ ಕುಳಿತಾಗ ಚಿ ಚಾಂಗ್ ಋತುಗಳು ಸರಿದಿದ್ದನ್ನೂ ಗಮನಕ್ಕೆ ತಂದುಕೊಳ್ಳಲಿಲ್ಲ: ವಸಂತದ ನಗುತ್ತ ಹೊಳೆ



ಯುವ ಸೂರ್ಯ ಹೇಗೆ ಗ್ರೀಷ್ಮದ ಧಗೆಯ ಚುಚ್ಚುವ ತೀಕ್ಷ್ಣ ದೃಷ್ಟಿ ಹರಿಸಿದನೆಂಬುದು; ವರ್ಷಾಕಾಲದ ಭಾರವಾದ ಆಕಾಶದಲ್ಲಿ ಬೆಳ್ಳಕ್ಕಿಗಳ ಸಾಲು ಸಾಗುತ್ತಾ ಇದ್ದು ಕ್ರಮೇಣ ಹೇಗೆ ಆ ಆಕಾಶವು ಬೂದಿ ಬಣ್ಣದ ಶಿಶಿರದ ಚಳಿಯನ್ನು ಉದುರಿಸಿತೆಂಬುದು, ಇವಾವುದೂ ಅವನ ದೃಷ್ಟಿಯಲ್ಲಿ ಈಗ ಅಸ್ತಿತ್ವದಲ್ಲೇ ಇರಲಿಲ್ಲ. ಅಸ್ತಿತ್ವದಲ್ಲಿ ಇದ್ದುದು ಹುಲ್ಲಿನ ಮೇಲಿನ ಸೂಕ್ಷ್ಮ ಹುಳು ಮಾತ್ರ. ಪ್ರತಿ ಹುಳು ಸತ್ತಾಗ ಅಥವಾ ಮಾಯವಾದಾಗ ಇನ್ನೊಂದು ಅಷ್ಟೇ ಸೂಕ್ಷ್ಮವಾದ ಹುಳುವನ್ನು ತಂದಿಡಲು ಅವನ ಆಳು ಇದ್ದ. ಆ ಹುಳುಗಳ ಗಾತ್ರ, ಚಿ ಚಾಂಗ್‌ನ ದೃಷ್ಟಿಯಲ್ಲಿ ನಿರಂತರವಾಗಿ ದೊಡ್ಡದಾಗುತ್ತಲೆ ಇತ್ತು.

ಆತ ಮೂರು ವರ್ಷಗಳು ಆ ಕೋಣೆಯಲ್ಲೇ ಇದ್ದ. ಆಮೇಲೆ ಒಂದು ದಿನ ಕಿಡಕಿಯಲ್ಲಿನ ಹುಳು ಒಂದು ಕುದುರೆಯಷ್ಟು ದೊಡ್ಡದಾದುದನ್ನು ಕಂಡ. ತನ್ನ ಮೊಣಕಾಲು ತಟ್ಟುತ್ತ 'ಕೃತಾರ್ಥನಾದೆ' ಎಂದು ಉದ್ಗರಿಸುತ್ತ ಅವನು ಮನೆಯಿಂದ ಹೊರಬಿದ್ದ. ಅಲ್ಲಿ ಅವನಿಗೆ ತನ್ನ ಕಣ್ಣನ್ನೆ ನಂಬಲಾರದಂತಹ ಆಶ್ಚರ್ಯ ಕಾದಿತ್ತು. ಕುದುರೆಗಳು ಬೆಟ್ಟದಷ್ಟು ಗಾತ್ರದವಾಗಿ ಕಂಡವು. ಹಂದಿಗಳು ಗುಡ್ಡದಷ್ಟಿದ್ದವು. ಕೋಳಿಗಳು ಕೋಟೆ ಬುರುಜುಗಳಷ್ಟು ಎತ್ತರವಾಗಿದ್ದವು. ಆತ ರೋಮಾಂಚಗೊಂಡು ಆನಂದದಿಂದ ತುಂಬಿ ತನ್ನ ಮನೆಗೆ ಹಿಂದಿರುಗಿ ತನ್ನ ಹಗುರು ಬಿಲ್ಲಿಗೆ ಒಂದು ತೀರ ತೆಳ್ಳಗಿನ ಷುವೋ ಪೆಂಗ್ ಬಾಣವನ್ನು ಹೂಡಿದ. ಆ ಹುಳುವಿನ ಹೃದಯಕ್ಕೆ ಗುರಿಯಿಟ್ಟು ನೇರವಾಗಿ ಹೂಡೆದ. ಅದು ಇದ್ದ ಎಲೆ ಸ್ವಲ್ಪವೂ ಅಲುಗಾಡಲಿಲ್ಲ.

ಈಗ ಆತ ತಡಮಾಡದೆ ವಿಯ್‌ಫಿಯ ಬಳಿ ಹೋಗಿ ಈ ಎಲ್ಲವನ್ನು ಹೇಳಿದ. ಈ ಸಲ ಗುರುವಿಗೂ ಮೆಚ್ಚಿಗೆಯಾಗಿ, 'ಚೆನ್ನಾಗಿ ಸಾಧಿಸಿದೆ' ಎಂದ.

ಬಿಲ್ಗಾರಿಕೆಯ ಸೂಕ್ಷ್ಮಗಳನ್ನು ಅರಿಯಲು ಹೀಗೆ ಐದು ವರ್ಷ ತಪಸ್ಸು ಮಾಡಿದ ಚಿ ಚಾಂಗ್‌ನಿಗೆ ತನ್ನ ಈ ಕಠಿಣ ಪರಿಶ್ರಮ ಫಲ ನೀಡಿತೆಂದು ಅನಿಸಿತು. ಬಿಲ್ಗಾರಿಕೆಯ ಎಲ್ಲ ಸಿದ್ಧಿಗಳೂ ತನ್ನ ಶಕ್ತಿಯ ಅಳವಿನಲ್ಲೆ ಇವೆ ಎಂಬ ವಿಶ್ವಾಸ ಮೂಡಿತು. ಮನೆಗೆ ಹಿಂದಿರುಗುವ ಹಾದಿಯಲ್ಲಿ ಇದನ್ನು ದೃಢಗೊಳಿಸಲು ತಾನೇ ಕೆಲವು ಪರೀಕ್ಷೆಗಳನ್ನು ಮಾಡಿಕೊಂಡ.

ಮೊದಲು ತನ್ನ ಗುರು ವಿಯ್‌ಫಿಯ ಪ್ರಸಿದ್ಧಿಯಂತೆ ತಾನೂ ನೂರುಗಜ ದೂರದಲ್ಲಿರುವ ಎಲೆಯೊಂದರಲ್ಲಿ ಬತ್ತಳಿಕೆಯಲ್ಲಿದ್ದ ಬಾಣಗಳನ್ನೆಲ್ಲ ತುಂಬಿದ. ಕೆಲವು ದಿನಗಳ ಬಳಿಕ ಬಲ ಮೊಳಕೈ ಮೇಲೆ ಒಂದು ಲೋಟ ನೀರನ್ನಿಟ್ಟುಕೊಂಡು ಅದರ ಒಂದು ಹನಿಯೂ ಚೆಲ್ಲದಂತೆ ತನ್ನ ಭಾರವಾದ ಬಿಲ್ಲಿನಿಂದ ಬಾಣ ಪ್ರಯೋಗಿಸಿ ಒಂದೇ ಎಲೆಯೊಳಗೆ ನೂರು ಬಾಣಗಳನ್ನು ತುಂಬಿದ.

ಇನ್ನೊಂದು ವಾರದ ಬಳಿಕ ಅವನು ನೂರು ಹಗುರು ಬಾಣಗಳನ್ನು ಎತ್ತಿಕೊಂಡು ದೂರದ ಗುರಿಗೆ ಸರಸರನೆ ಪ್ರಯೋಗಿಸಿದ. ಆಗ ಮೊದಲಿನ ಬಾಣ ನೇರ ಗುರಿ ಕಣ್ಣಿಗೆ ನಾಟಿತು. ಎರಡನೆಯದು ಮೊದಲಿನದರ ಗರಿಗೆ ನಾಟಿತು. ಮೂರನೆಯದು ಎರಡನೆಯದರ ಗರಿಗೆ ನಾಟಿತು. ಹೀಗೇ ಕೆಲವು ಕ್ಷಣಗಳಲ್ಲಿ ಬಾಣಗಳೆಲ್ಲಾ ಒಂದನ್ನೊಂದು ಕಚ್ಚಿ ಗುರಿಯಿಂದ ಬಿಲ್ಲಿನವರೆಗೆ ಒಂದೇ ಸಾಲಾಗಿ ನಿಂತವು. ಅವನ ಗುರಿ ಎಷ್ಟು ನಿಖರವಾಗಿತ್ತೆಂದರೆ, ಬಾಣ ಪ್ರಯೋಗವಾದ ಬಹುಕಾಲದವರೆಗೂ ಆ ಬಾಣಗಳು ಉದುರದೆ ಗಾಳಿಯಲ್ಲಿ ತೂಗುತ್ತ ಹಾಗೇ ನಿಂತಿದ್ದವು. ಇದನ್ನು ಮರೆಯಿಂದ ನೋಡುತ್ತಿದ್ದ ವಿಯ್‌ಫಿಗೂ ತಡೆಯಲಾಗದೆ, ಚಪ್ಪಾಳೆ ತಟ್ಟಿ, 'ಶಾಭಾಸ್' ಎಂದು ಕೂಗಿದ.

ಚಿ ಚಾಂಗ್ ಎರಡು ತಿಂಗಳ ಕೊನೆಗೆ ಮನೆಗೆ ಮರಳಿದ. ಅವನ ಸುದೀರ್ಘ ಔದಾಸೀನ್ಯದಿಂದ ಬೇಸತ್ತಿದ್ದ ಹೆಂಡತಿ ತೀರಾ ಸಿಟ್ಟಾಗಿ ವಾಗ್ಬಾಣಗಳನ್ನು ಸುರಿಸಿದಳು. ಆತ ಅವಳ ಚಂಡಿತನವನ್ನು ತಗ್ಗಿಸಲು ತನ್ನ ಹಕ್ಕಿಬಿಲ್ಲಿಗೆ ಚಿಕ್ಕ ಚಿ ವಿಯ್ ಬಾಣವೊಂದನ್ನು ಹೂಡಿ, ಪೂರ್ತಿ ನಾಣ್ಯೆಳೆದು ಅವಳ ಕಣ್ಣಿನ ಹತ್ತಿರ ಬಿಟ್ಟ. ಅದು ಅವಳ

ರೆಪ್ಪೆಯ ಮೂರು ಕೂದಲನ್ನು ಕತ್ತರಿಸಿ ಹೋಯಿತು. ಆದರೆ ಬಾಣದ ನಿಖರ ಗುರಿಯೂ ವೇಗವೂ ಎಷ್ಟಿತ್ತೆಂದರೆ ಅವಳಿಗೆ ಅದು ಗೊತ್ತೇ ಆಗಲಿಲ್ಲ. ಬೈಗಳ ಮಳೆಯನ್ನು ಮುಂದುವರೆಸಿದಳು.

ಹೀಗೆ ಚಿ ಚಾಂಗ್ ತನ್ನ ಆಕಾಂಕ್ಷೆಯ ಸಿದ್ಧಿಯ ಹತ್ತಿರ ಬಂದಿದ್ದ. ಇನ್ನು ಏಯ್ ಫಿಯಿಂದ ಕಲಿಯಬೇಕಾದದ್ದೇನೂ ಉಳಿದಿರಲಿಲ್ಲ.

ಆದರೆ ಒಂದೇ ಅಡ್ಡಿ ಉಳಿದಿತ್ತು! ಅದೆಂದರೆ ಸ್ವತಃ ಏಯ್ ಫಿಯೇ ಎಂದು ಅರಿವಾದಾಗ ಚಿ ಚಾಂಗ್ ಸಖೇದಾಶ್ಚರ್ಯಗೊಂಡ. ಗುರು ಜೀವಂತವಿರುವವರೆಗೆ ಈತ ತನ್ನನ್ನು ಅದ್ವಿತೀಯ ಬಿಲ್ಗಾರನೆಂದು ಕರೆದುಕೊಳ್ಳುವುದು ಅಸಾಧ್ಯವಾಗಿತ್ತು. ಈಗ ಗುರುವಿನ ಸಮಾನನಾಗಿದ್ದರೂ ಅವನನ್ನು ಮೀರಿಸಲಾರೆ ಎನ್ನಿಸಿತು. ಅವನ ಜೀವಂತಿಕೆ ಈತನ ಮಹೋದ್ದೇಶವನ್ನು ಅಲ್ಲಗಳೆಯುತ್ತಿತ್ತು.

ಒಂದು ದಿನ ಚಿ ಚಾಂಗ್ ಗದ್ದೆಯಲ್ಲಿ ನಡೆಯುತ್ತಿದ್ದಾಗ ದೂರದಲ್ಲಿ ಏಯ್ ಫಿ ಕಾಣಿಸಿದ. ಈತ ಒಂದು ಕ್ಷಣವೂ ಸಂದೇಹ ಪಡದೆ ಬಿಲ್ಲನ್ನೆತ್ತಿ ಒಂದು ಬಾಣ ಹೂಡಿ ಗುರುವಿಗೆ ಗುರಿಯಿಟ್ಟ. ವೃದ್ಧ ಗುರುವಾದರೋ ತಕ್ಷಣವೇ ಏನು ನಡೆಯುತ್ತಿದೆ ಎಂಬುದನ್ನು ಗ್ರಹಿಸಿ ತಾನೂ ಬಾಣ ಹೂಡಿದ. ಇಬ್ಬರೂ ಒಂದೇ ಕ್ಷಣದಲ್ಲಿ ಬಾಣ ಪ್ರಯೋಗಿಸಿದರು. ಅರ್ಧ ದಾರಿಯಲ್ಲಿ ಅವು ಒಂದಕ್ಕೊಂದು ತಗುಲಿ ಬಿದ್ದವು. ಚಿ ಚಾಂಗ್ ಇನ್ನೊಂದು ಬಾಣ ಬಿಟ್ಟ. ಅದನ್ನು ಎರಡನೆಯ ಬಾಣದಿಂದ ಏಯ್ ಫಿ ಕತ್ತರಿಸಿದ. ಗುರುವಿನ ಪ್ರಾಣಕ್ಕೆ ಹಾನಿಯಾಗುವವರೆಗೆ ಈ ವಿಚಿತ್ರ ದ್ವಂದ್ವ ಯುದ್ಧ ನಡೆಯಿತು. ಶಿಷ್ಯನ ಬಳಿ ಆಗ ಇನ್ನೊಂದೇ ಒಂದು ಬಾಣ ಉಳಿದಿತ್ತು. ಚಿ ಚಾಂಗ್ 'ಈಗ ನನ್ನದೇ ಅದೃಷ್ಟ' ಎನ್ನುತ್ತ ಆ ಕೊನೆಯ ಬಾಣವನ್ನು ಗುರಿಯಿಟ್ಟ. ಅದನ್ನು ಕಂಡ ಏಯ್ ಫಿ ತನ್ನ ಪಕ್ಕದಲ್ಲಿದ್ದ ಜಾಲಿಮುಳ್ಳಿನ ಮರವೊಂದರ ಟೊಂಗೆಯನ್ನು ಮುರಿದ. ಶಿಷ್ಯನ ಬಾಣ ಸುಯ್ಯೆನ್ನುತ್ತ ತನ್ನ ಹೃದಯವನ್ನು ಸೀಳಬಂದಾಗ, ಒಂದು ಮುಳ್ಳಿನ ಮೊನೆಯನ್ನು ಬಾಣದ ಮೊನೆಗೆ ನಿಖರವಾಗಿ ತಾಗಿಸಿ, ಅದು ತನ್ನ ಕಾಲ ಕೆಳಗೆ ಬೀಳುವಂತೆ ಮಾಡಿದ.

ತನ್ನ ಉದ್ದೇಶ ಹೀಗೆ ವಿಫಲವಾದಾಗ ಚಿ ಚಾಂಗ್ ತುಂಬ ನಾಚಿಕೆಪಟ್ಟ. ಒಂದೇ ಒಂದು ಬಾಣವಾದರೂ ಸಫಲವಾಗಿದ್ದರೆ ಇಂತಹ ಭಾವನೆ ಮೂಡುತ್ತಿರಲಿಲ್ಲ. ಆದರೆ ಗುರು ಏಯ್ ಫಿ ತಾನು ಪಾರಾಗಿದ್ದಕ್ಕೆ ನಿರಾತಂಕದ ಉಸಿರಿಟ್ಟ; ಈ ಸಂಗತಿಯಿಂದ ಆತ ಸ್ವಶಕ್ತಿಯ ಬಗ್ಗೆ ಎಷ್ಟು ಹೆಮ್ಮೆಪಟ್ಟನೆಂದರೆ ಕೊಲೆ ಮಾಡಲಿದ್ದವನ ಬಗ್ಗೆ ಕೋಪ ಬರಲೇ ಇಲ್ಲ. ಇಬ್ಬರೂ ಹತ್ತಿರ ಓಡಿ ಬಂದು ಅಪ್ಪಿಕೊಂಡರು. (ಪುರಾತನರ ವಿಚಿತ್ರ ರೀತಿಗಳನ್ನು ನೋಡಿ! ಈಗ ಯೋಚನೆಯಲ್ಲಾದರೂ ಇಂತಹ ವರ್ತನೆ ಬಂದೀತೇ? ಹಳೆಯ ಜನರ ಹೃದಯ ನಮ್ಮದರಂತೆ ಖಂಡಿತ ಇರಲಿಲ್ಲ. ಪುರಾಣ ಕಾಲದ ರಾಜ ಹುವಾನ್ ಇದುವರೆಗೆ ತಿಂದಿರದ ಭಕ್ಷ್ಯ ಮಾಡೆಂದಾಗ ಆತನ ಅರಮನೆಯ ಮುಖ್ಯ ಅಡುಗೆಯವನಾದ ಇ ಯಾ ತನ್ನ ಮಗನನ್ನೇ ಬೇಯಿಸಿ ರುಚಿ ನೋಡಿ ಎಂದದ್ದು; ಛಿನ್ ಸಂತತಿಯ ಮೊದಲ ಚಕ್ರವರ್ತಿ ತನ್ನ ತಂದೆ ಸತ್ತ ರಾತ್ರಿಯೇ ಅವನ ಮೆಚ್ಚಿನ ದಾಸಿಯನ್ನು ಸ್ವಲ್ಪವೂ ಅಳುಕದೆ ಮೂರು ಬಾರಿ ಸಂಭೋಗಿಸಿದ್ದು - ಇಂತಹ ಸಂಗತಿಗಳನ್ನು ನಾವು ಹೇಗೆ ತಾನೇ ವಿವರಿಸಿಯೇವು?)

ಏಯ್ ಫಿ ತನ್ನ ಗಟ್ಟಿ ತಲೆಯ ಶಿಷ್ಯನನ್ನು ಅಪ್ಪಿಕೊಳ್ಳುವಾಗಲೂ ಎಂದಾದರೊಂದು ದಿನ ಇವನಿಂದ ತನ್ನ ಜೀವಕ್ಕೆ ತೊಂದರೆ ಎಂಬುದನ್ನು ಮರೆಯಲಿಲ್ಲ. ಈ ನಿರಂತರ ಅಪಾಯ ದೂರಾಗಬೇಕಾದರೆ ಚಿ ಚಾಂಗ್‌ನ ಮನಸ್ಸಿಗೆ ಬೇರೆ ಗುರಿಯನ್ನು ತೋರಿಸಬೇಕಿತ್ತು.

'ಮಿತ್ರ, ನನಗೆ ಗೊತ್ತಿರುವ ಚಾಪ ವಿದ್ಯೆಯನ್ನೆಲ್ಲ ನೀನು ಕಲಿತೆ. ವಿದ್ಯಾ ರಹಸ್ಯಗಳಲ್ಲಿ ಇನ್ನೂ ನೀನು ಮುಂದುವರೆಯಬೇಕೆಂದಿದ್ದರೆ ಅತಿ ದುರ್ಗಮವಾದ ಟಾ ಚಿಂಗ್ ಕಣಿವೆ ದಾಟಿ ಹೊ ಪರ್ವತದ ಪಶ್ಚಿಮದ ಶಿಖರವನ್ನು ಏರು. ಅಲ್ಲಿ ನಿನಗೆ ವೃದ್ಧ ಪಿತಾಮಹ ಕಾನ್‌ಯಿಂಗ್ ಸಿಕ್ಕರೂ

**ಟಿಪ್ಪಣಿ:**

ಟಾವೊ ಧರ್ಮದಲ್ಲಿ ಕಲೆಯೂ, ಎಲ್ಲ ರೀತಿಯ ಕುಶಲತೆಯೂ ಮುಖ್ಯ. ಆ ಮತದವರು ಕಲೆ ಕೌಶಲ್ಯಗಳಲ್ಲಿ ಟಾವೊ (ಋತ) ಅಥವಾ ಅದಕ್ಕೆ ಸಂವಾದಿಯಾದ ಶಕ್ತಿಯು ಉಪಯೋಗವಾಗಿರುವು ದನ್ನು ಕಾಣುತ್ತಾರೆ. ಚಕ್ರಕಾರ, ಬಡಗಿ, ಕಟುಕ, ಜಿಲ್ಗಾರ, ಈಜುಗಾರ ಮೊದಲಾದವರೆಲ್ಲ ತಮ್ಮ ಕಲೆಯಲ್ಲಿ ಸಿದ್ಧಿಪಡೆಯುವುದು ಆ ಕಲೆಗಳ ಬಗೆಗಿನ ಮಾಹಿತಿ, ಅಂಶಗಳನ್ನು ಕಲೆ ಹಾಕುವುದರಿಂ ದಲ್ಲ. ಅಥವಾ ತಮ್ಮ ಇಂದ್ರಿಯಗಳ ಮತ್ತು ಸ್ನಾಯುಗಳ ಶಕ್ತಿಯನ್ನು ಉಪಯೋಗಿಸುವುದನ್ನು ಕಲಿಯುವುದರಿಂದಲ್ಲ. ಬದಲಾಗಿ ಅವರು ತೋರಿಕೆಯ ವೈಶಿಷ್ಟ್ಯ ವಿಭಿನ್ನತೆಗಳ ಕೆಳಗೇ, ತಮ್ಮೊಳ ಗಿನ ಮೂಲಸತ್ವ ಮತ್ತು ತಾವು ಕೆಲಸ ಮಾಡುವ ಮಾಧ್ಯಮದೊಳಗಿನ ಮೂಲಸತ್ವದ ನಡುವೆ ಇರುವ ಮೂಲಭೂತ ಮೈತ್ರಿಯನ್ನು ಉಪಯೋಗಿಸುವುದರಿಂದ ಸಿದ್ಧಿ ಪಡೆಯುವರು.

''ಕ್ರಿಯೆಯ ತುತ್ತತುದಿಯ ಸ್ಥಿತಿ ಅಕ್ರಿಯೆಯಲ್ಲಿದೆ'' ಎಂಬ ಈ ಕತೆಯ ನಾಯಕ ಚಿ ಚಾಂಗ್‌ನ ಅಭಿಪ್ರಾಯವನ್ನು ಚೀನೀ ವೇದ ಟಾವೊ ಟೆ ಚಿಂಗ್‌ನಲ್ಲಿ ಹೀಗೆ ನುಡಿಯಲಾಗಿದೆ: (ಅಧ್ಯಾಯ 38)

**ಅತಿ ಹೆಚ್ಚು 'ಶಕ್ತಿ'ವಂತನಾದವನು**
**ತನ್ನಲ್ಲಿ 'ಶಕ್ತಿ'ಯಿದೆಯೆಂದು ತೋರಲಾರ**
**ಹೀಗೆ ತನ್ನೊಳಗೆ 'ಶಕ್ತಿ'ಯನ್ನು ಹೊಂದಿರುವನು.**

**ಅಲ್ಪ 'ಶಕ್ತಿ'ಯಿರುವವ**
**'ಶಕ್ತಿ'ಯ ತೋರಿಕೆಯನ್ನು ನಿಲ್ಲಿಸಲಾರ**
**ಹೀಗೆ ನಿಜವಾಗಿ 'ಶಕ್ತಿ'ಯನ್ನು ಹೊಂದಲಾರ**

**ಅತಿ 'ಶಕ್ತಿ'ವಂತ ಕರ್ಮ ಸಂನ್ಯಾಸಿ**
**ಅಲ್ಪ 'ಶಕ್ತಿ'ವಂತ ಕ್ರಿಯಾಶಾಲಿ**

(ಗೀತೆಯ 'ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ। ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ' ಮೊದಲಾದ ವಾಕ್ಯಗಳಲ್ಲೂ ಈ ತತ್ವವನ್ನು ಕಾಣಬಹುದು.)

ಸಿಗಬಹುದು. ಈ ಯುಗದಲ್ಲಾಗಲಿ, ಕಳೆದ ಯುಗದಲ್ಲಾಗಲಿ ಬಿಲ್ವಿದ್ಯೆಯಲ್ಲಿ ಅವನಿಗೆ ಸಮಾನರಾದವರು ಯಾರೂ ಇಲ್ಲ. ಅವನ ವಿದ್ಯೆಗೆ ಹೋಲಿಸಿದರೆ ನಮ್ಮದು ಮಕ್ಕಳಾಟ. ಇನ್ನು ನಿನಗೆ ಈ ಪ್ರಪಂಚದಲ್ಲಿ ಗುರುಗಳಾಗಲು ಅರ್ಹರು ಅವನನ್ನು ಬಿಟ್ಟರೆ ಯಾರೂ ಇಲ್ಲ. ಹೋಗು. ಹುಡುಕು. ಅವನೇನಾದರೂ ಇನ್ನೂ ಜೀವಂತ ಇದ್ದರೆ ಅವನ ಶಿಷ್ಯನಾಗು' ಎಂದ.

ಒಡನೆಯೇ ಚಿ ಚಾಂಗ್ ಪಶ್ಚಿಮದತ್ತ ಹೊರಟ. ಅವನಿಗೆ ತನ್ನ ಸಾಧನೆಯನ್ನು ಮಕ್ಕಳಾಟ ಎಂದುದು ಹೆಮ್ಮೆ ಮುರಿದಂತೆ ಆಯಿತಷ್ಟೆ ಅಲ್ಲ, ತನ್ನ ಮಹತ್ವಾಕಾಂಕ್ಷೆ ಪೂರ್ಣವಾಗಲು ಇನ್ನೂ ದೂರ ಇದೆ ಎಂಬ ಹೆದರಿಕೆಯೂ ಆಯಿತು. ತನ್ನ ವಿದ್ಯೆಯನ್ನು ಆ ಹಳೆಯ ಗುರುವಿನವರ ಜತೆಯಲ್ಲಿ ಒರೆ ಹಚ್ಚುವ ಅವಕಾಶ ಕಳೆದು ಹೋಗಬಾರದೆಂಬ ತವಕದಿಂದ ಹೊ ಪರ್ವತ ಹತ್ತಲು ಹೊರಟ.

ಟಾ ಚಿಂಗ್ ಕಣಿವೆಯನ್ನು ಅವನು ಪ್ರಯಾಸದಿಂದ ದಾಟಿ ಆ ದುರ್ಗಮ ಪರ್ವತವನ್ನು ತುಂಬ ಕಷ್ಟದಿಂದ ಏರಿದ. ಅವನ ಪಾದರಕ್ಷೆಗಳು

ಹರಿದು, ಪಾದಗಳು ಬಿರಿದು ರಕ್ತ ಹರಿಯಿತು. ಎದೆಗುಂದದೆ ಆತ ಅಪಾಯಕಾರಿ ಇಳಿಜಾರುಗಳನ್ನು ಪ್ರಪಾತಗಳಿಗೆ ಇಟ್ಟಿದ್ದ ಅತಿ ಕಿರಿದಾದ ಸೇತುವೆಗಳನ್ನೂ ದಾಟಿ, ಹೊ ಪರ್ವತದ ಶಿಖರದಲ್ಲಿ ಕಾನ್ ಯಿಂಗ್ ಇದ್ದ ಗುಹೆಯೊಳಗೆ ನುಗ್ಗಿದ. ವೃದ್ಧ ಪಿತಾಮಹ ಕಾನ್‌ಯಿಂಗ್ ನಿಜಕ್ಕೂ ಅಲ್ಲಿದ್ದ. ಆತ ಪ್ರಶಾಂತವಾದ ಮೇಕೆಯ ಕಣ್ಣುಗಳಿದ್ದ ಹಣ್ಣು ಮುದುಕನಾಗಿದ್ದ. ಇದುವರಗೆ ಚಿ ಚಾಂಗ್ ನೋಡಿದ್ದ ಮುದುಕರುಗಳಿಗಿಂತಲೂ ಹೆಚ್ಚು ಮುದುಕನಾಗಿದ್ದ. ಅವನ ಬೆನ್ನು ತುಂಬ ಬಾಗಿತ್ತು. ನಡೆಯುವಾಗ ಆತನ ಶುಭ್ರ ಬಿಳಿ ಕೂದಲು ನೆಲವನ್ನು ಒರೆಸುತ್ತಿತ್ತು.

ಇಷ್ಟು ವಯಸ್ಸಾದ ಯಾರಿಗಾದರೂ ಕಿವಿ ಮಂದವಾಗಿರಲೇಬೇಕೆಂದು ಭಾವಿಸಿದ ಚಿ ಚಾಂಗ್ ಗಟ್ಟಿಯಾದ ದನಿಯಲ್ಲಿ 'ನಾನು ಅತ್ಯುತ್ತಮ ಬಿಲ್ಗಾರ ಹೌದೋ ಅಲ್ಲವೋ ಅಂತ ಪರೀಕ್ಷಿಸಿಕೊಳ್ಳಲು ಬಂದಿದ್ದೇನೆ' ಎಂದು ಘೋಷಿಸಿ, ಉತ್ತರಕ್ಕೆ ಕಾಯದೆ ತನ್ನ ದೊಡ್ಡ ಬಿಲ್ಲನ್ನೆತ್ತಿ ಟ್ಸುಚೀ ಬಾಣವೊಂದನ್ನು ಹೂಡಿ, ಮೇಲೆ ಹಾರುತ್ತಿದ್ದ ಹಂಸಗಳ ಗುಂಪಿನತ್ತ ಬಿಟ್ಟ. ತಕ್ಷಣವೇ ನೀಲಿ ಆಕಾಶದಿಂದ ಐದು ಹಕ್ಕಿಗಳು ಸತ್ತು ಉರುಳಿದವು.

ವೃದ್ಧ ಸಹನೆಯಿಂದ ಮುಗುಳ್ನಕ್ಕು 'ಮಹರಾಯಾ ಇದು ಬಿಲ್ಲು ಬಾಣಗಳನ್ನು ಉಪಯೋಗಿಸಿದ ಹೊಡೆತ. ಅವು ಇಲ್ಲದ ಹೊಡೆತವಿಲ್ಲದ ಹೊಡೆತ ನಿನಗೆ ತಿಳಿದಿಲ್ಲವೆ? ನನ್ನ ಜತೆ ಬಾ' ಎಂದ.

ತನ್ನ ವಿದ್ಯೆಯಿಂದ ವೃದ್ಧನ ಮೇಲೆ ಏನೂ ಪರಿಣಾಮವಾಗದ್ದನ್ನು ಕಂಡ ಚಿ ಚಾಂಗ್ ಮಂಕಾಗಿ ಅವನ ಹಿಂದೆ ಹೋದ. ಗುಹೆಯಿಂದ ಇನ್ನೂರು ಅಡಿ ದೂರದಲ್ಲಿದ್ದ ಕೋಡುಗಲ್ಲಿನ ತುದಿಗೆ ಹೋಗಿ ನೋಡಿದಾಗ ಅದು 'ಮೂರು ಸಾವಿರ ಅಡಿಯ ಪರದೆ' ಎಂದು ಚಾಂಗ್ ಟ್ಸು ಹಾಂತದ ಹಳಬರು ಹೇಳುವ ಪ್ರಪಾತದ ಅಂಚಾಗಿತ್ತು. ಬಂಡೆಗಳ ನಡುವೆ ನೂಲಿನಂತೆ ಪರ್ವತದ ಝರಿಯೊಂದು ಹರಿಯುವುದು ಕೆಳಗೆ ಕಾಣುತ್ತಿತ್ತು. ಚಿ ಚಾಂಗ್‌ನಿಗೆ ಕಣ್ಣುತ್ತಲೆ ಬಂದು ತಲೆ ತಿರುಗುವಂತಾಯ್ತು. ಅಷ್ಟರಲ್ಲಿ ಆ ವೃದ್ಧ ಹಗುರಾಗಿ ತುದಿಯ ಚಪ್ಪಡಿಯೊಂದರ ಮೇಲೆ ಓಡಿ ನಿಂತು ಹಿಂದಿರುಗಿ ಚಿ ಚಾಂಗ್‌ನಿಗೆ ಹೇಳಿದ. 'ಈಗ ನಿನ್ನ ಚಾತುರ್ಯ ತೋರು. ನಾನಿರುವಲ್ಲಿ ಬಾ. ನಿನ್ನ ಬಿಲ್ಗಾರಿಕೆ ನೋಡೋಣ'

ಚಿ ಚಾಂಗ್‌ನ ಹೆಮ್ಮೆ ಈ ಆಹ್ವಾನಕ್ಕೆ ಒಪ್ಪುವಂತೆ ಮಾಡಿತು. ಹಿಂದೆ ಮುಂದೆ ನೋಡದೆ ಆತ ವೃದ್ಧನೊಡನೆ ಸ್ಥಳ ಬದಲಾಯಿಸಿದ. ಆ ಚಪ್ಪಡಿಯೇ ಆತ ನಿಂತೊಡನೆ ಆಚೀಚೆ ಅಲ್ಲಾಡತೊಡಗಿತು. ಇಲ್ಲದ ಧೈರ್ಯ ತಂದುಕೊಂಡು ಅವನು ನಡುಗುವ ಬೆರಳುಗಳಿಂದ ಬಿಲ್ಲಿಗೆ ಬಾಣ ಹೂಡಿದ. ಆಗಷ್ಟೆ ಒಂದು ಸಣ್ಣ ಕಲ್ಲು ಚಪ್ಪಡಿಯ ಅಡಿಯಿಂದ ಉರುಳಿ ಸಾವಿರಾರು ಅಡಿಗಳ ತನ್ನ ಪ್ರಯಾಣ ಆರಂಭಿಸಿತು. ಅದನ್ನು ನೋಡಿ ಚಿ ಚಾಂಗ್‌ನಿಗೆ ತನ್ನ ಆಯ ತಪ್ಪಿದಂತೆನಿಸಿ, ಆ ಚಪ್ಪಡಿಯ ಅಂಚನ್ನು ಗಟ್ಟಿಯಾಗಿ ಹಿಡಿದು ಅದರ ಮೇಲೆ ಮಲಗಿದ. ಅವನ ತೊಳ್ಳೆ ನಡುಗಿ ಇಡೀ ಶರೀರದಿಂದ ಬೆವರು ಬಸಿಯಲಾರಂಭಿಸಿತು.

ವೃದ್ಧ ನಕ್ಕು, ತನ್ನ ತೋಳು ನೀಡಿ, ಚಿ ಚಾಂಗ್‌ನನ್ನು ಚಪ್ಪಡಿಯಿಂದ ಇಳಿಸಿಕೊಂಡ. ತಾನು ಅದರ ಮೇಲೆ ಲಘುವಾಗಿ ನೆಗೆದು, 'ಮಹರಾಯ, ನಿಜವಾದ ಬಿಲ್ಗಾರಿಕೆಯೇನೆಂಬುದನ್ನು ನಾನು ತೋರಿಸಲೇ' ಎಂದ.

ಚಿ ಚಾಂಗ್‌ನ ಹೃದಯ ಗಟ್ಟಿಯಾಗಿ ಬಡಿಯುತ್ತ ಮುಖವೆಲ್ಲ ಬಿಳಿಚಿಕೊಂಡಿದ್ದರೂ, ಗುರುವಿನ ಕೈ ಖಾಲಿಯಿರುವುದನ್ನು ಗಮನಿಸುವಷ್ಟು ಚುರುಕಾಗಿತ್ತು.

ಆತ ಸತ್ತ ದನಿಯಲ್ಲಿ, 'ನಿಮ್ಮ ಬಿಲ್ಲು ಎಲ್ಲಿ?' ಎಂದು ಕೇಳಿದ.

'ನನ್ನ ಬಿಲ್ಲು ..... ನನ್ನ ಬಿಲ್ಲು?' ಎಂದು ನಗೆಯಾಡುತ್ತ ವೃದ್ಧ ಹೇಳಿದ, 'ಎಲ್ಲಿಯವರೆಗೆ ಬಿಲ್ಲು ಬಾಣಗಳು ಬೇಕಾಗುತ್ತವೆಯೋ ಅಲ್ಲಿಯವರೆಗೆ ಕಲೆಯ ಅಂಚಿನಲ್ಲೇ ಇರುತ್ತಾನೆ. ಬಿಲ್ಲು ಬಾಣ ಎರಡನ್ನೂ ಕೈ ಬಿಡುತ್ತದೆ ನಿಜವಾದ

ಬಿಲ್ಗಾರಿಕೆ.

ಒಂದು ಹದ್ದು ಅವರ ತಲೆಯ ಮೇಲೆ ಅತಿ ಎತ್ತರದಲ್ಲಿ ಹಾರಾಡುತ್ತಿತ್ತು. ಆ ತಪಸ್ವಿಯು ಅದನ್ನು ತಲೆಯೆತ್ತಿ ನೋಡಿದ. ಚಿ ಚಾಂಗ್ ಅವನ ದೃಷ್ಟಿಯನ್ನು ಅನುಸರಿಸಿದ. ಹದ್ದು ಅದೆಷ್ಟು ಎತ್ತರದಲ್ಲಿತ್ತೆಂದರೆ ಚಿ ಚಾಂಗ್‌ನ ಸೂಕ್ಷ್ಮ ದೃಷ್ಟಿಗೂ ಅದು ಸಾಸಿವೆಯಷ್ಟು ಸಣ್ಣದಾಗಿ ತೋರಿತು. ಅದೃಶ್ಯ ಬಾಣವೊಂದನ್ನು ಅಶರೀರಿಯಾದ ಧನುಸ್ಸಿಗೆ ಹೂಡಿದ ಕಾನ್‌ಯಿಂಗ್ ಕಿವಿಯವರೆಗೆ ನಾಣನ್ನೆಳೆದು ಬಿಟ್ಟ. ಮರುಕ್ಷಣವೇ ಆ ಹದ್ದು ರೆಕ್ಕೆ ಮಡಿಸಿ, ಕಲ್ಲಿನಂತೆ ಕೆಳಗೆ ಬಿತ್ತು.

ಚಿ ಚಾಂಗ್ ನಿಬ್ಬೆರಗಾದ. ಈಗ ಮೊದಲ ಬಾರಿಗೆ ತಾನು ತೀರ ಕಷ್ಟದಿಂದ ಪ್ರಭುತ್ವ ಸಂಪಾದಿಸಿದ ತನ್ನ ತಿರುಳಿಲ್ಲದ ವಿದ್ಯೆಯ ಪರಿಮಿತಿ ಎಷ್ಟೆಂದು ಅರ್ಥವಾಯಿತು.

ಆ ವೃದ್ಧ ತಪಸ್ವಿಯೊಂದಿಗೆ ಅವನು ಆ ಪರ್ವತದಲ್ಲಿ ಒಂಬತ್ತು ವರ್ಷಗಳನ್ನು ಕಳೆದ. ಆತ ಈ ಕಾಲದಲ್ಲಿ ಯಾವಾವ ಪ್ರಕಾರಗಳಲ್ಲಿ ಶಿಕ್ಷಿತನಾದನೆಂದು ಯಾರಿಗೂ ತಿಳಿಯಲಿಲ್ಲ. ಹತ್ತನೆಯ ವರ್ಷದಲ್ಲಿ ಆತ ಕೆಳಗಿಳಿದು ತನ್ನ ಮನೆಗೆ ಹಿಂದಿರುಗಿದಾಗ ಆತನಲ್ಲಿ ಆಗಿದ್ದ ಬದಲಾವಣೆಯನ್ನು ಕಂಡು ಎಲ್ಲರೂ ಚಕಿತರಾದರು. ತನ್ನದೇ ಸರಿಯೆಂಬ ಮೊದಲಿದ್ದ ಅವನ ದುರಹಂಕಾರಿ ಮುಖಭಾವ ಈಗ ಮಾಯವಾಗಿತ್ತು. ಅದರ ಜಾಗದಲ್ಲಿ ಭಾವನೆಗಳಿಲ್ಲದ ದಡ್ಡನೊಬ್ಬನ ಮರದಂತಹ ಮುಖಭಾವವಿತ್ತು. ಹಳೆಯ ಗುರು ವಿಯ್ ಫಿ ಅವನ ಭೇಟಿಗಾಗಿ ಬಂದು, ಅವನನ್ನು ನೋಡಿದೊಡನೆ 'ಈಗ ನೀನು ನಿಜಕ್ಕೂ ಶ್ರೇಷ್ಠನಾಗಿರುವೆ. ನನ್ನಂತಹವರು ನಿನ್ನ ಪಾದಸ್ಪರ್ಶಿಸಲೂ ಯೋಗ್ಯರಲ್ಲ' ಎಂದ.

ಚಿ ಚಾಂಗ್‌ನನ್ನು ದೇಶದಲ್ಲಿನ ಧನುರ್ಧಾರಿಗಳಲ್ಲಿ ಅತಿ ಶ್ರೇಷ್ಠ ಎಂದು ಹ್ಯಾನ್‌ಟನ್‌ನ ನಿವಾಸಿಗಳು ಹೊಗಳಿದರು; ಎಂದಾದರೂ ತನ್ನ ಚಾಪ ಕೌಶಲ್ಯವನ್ನು ಅವ ತೋರಿಸಿಯಾನೇ ಎಂದು ಅಸಹನೆಯಿಂದ ಕಾದರು. ಆದರೆ ಅವರ ಆಸೆಯನ್ನು ಚಿ ಚಾಂಗ್ ಪೂರ್ಣಗೊಳಿಸಲೇ ಇಲ್ಲ. ಎಂದೂ ಬಿಲ್ಲು ಬಾಣ ಹಿಡಿಯಲಿಲ್ಲ. ಬಹುಶಃ ಆತನಲ್ಲಿದ್ದ ದೊಡ್ಡ ಬಿಲ್ಲನ್ನು ಪರ್ವತದಲ್ಲಿಯೇ ಬಿಟ್ಟು ಬಂದಿದ್ದನೇನೋ. ಹೀಗೇಕೆ ಎಂದು ಯಾರೋ ಕೇಳಿದಾಗ ಅವನು ನೀರಸ ಧ್ವನಿಯಲ್ಲಿ 'ಕರ್ಮದ ಕೊನೆ ಅಕರ್ಮದಲ್ಲಿದೆ ಮಾತಿನ ತುತ್ತ



ತುದಿಯು ಮೌನದಲ್ಲಿದೆ, ಚಾಪ ವಿದ್ಯೆಯ ಔನ್ನತ್ಯ ಬಾಣ ಹೊಡೆಯದೆ ಇರುವುದರಲ್ಲಿದೆ' ಎಂದ.

ಅವನ ಮಾತನ್ನು ಹ್ಯಾನ್‌ಟನ್‌ನ ಜಾಣರು ಅರ್ಥಮಾಡಿಕೊಂಡು ಬಿಲ್ಲನ್ನು ಮುಟ್ಟಲು ಒಲ್ಲದ ಈ ಧನುರ್ವಿದ್ಯಾಶ್ರೇಷ್ಠನ ಎದುರು ಗೌರವದಿಂದ ನಿಂತರು. ಈಗ ಬಾಣ ಹೊಡೆಯಲು ನಿರಾಕರಿಸಿದ್ದೇ ಆತನ ಕೀರ್ತಿ ಬೆಳೆಯಲು ಕಾರಣವಾಯಿತು.

ದೇಶವಿಡೀ ಚಿ ಚಾಂಗ್‌ನ ಬಗ್ಗೆ ಅನೇಕ ವದಂತಿ ದಂತಕತೆಗಳು ಹಬ್ಬಿದವು. ಯಾವಾಗಲೂ ಮಧ್ಯರಾತ್ರಿ ಕಳೆದ ಮೇಲೆ ಅವನ ಮನೆಯ ತಾರಸಿಯ ಮೇಲೆ ಯಾರೋ ಅದೃಶ್ಯ ನಾಣನ್ನು ಮಿಡಿಯುತ್ತಿರುವ ಧ್ವನಿ ಕೇಳಿ ಬರುತ್ತದೆ ಎಂದು ವರದಿಯಾಯಿತು. ಕೆಲವರು ಆಚಾರ್ಯರ ಒಳಗೆ ಸೇರಿರುವ ಧನುರ್ವಿದ್ಯಾದೇವನು ರಾತ್ರಿ ಹೊರಬಂದು ದುಷ್ಟಶಕ್ತಿಗಳಿಂದ ಅವನನ್ನು ರಕ್ಷಿಸುವನು ಎಂದರು. ಒಂದು ರಾತ್ರಿ ಚಿ ಚಾಂಗ್ ಮೋಡ ಹತ್ತಿ ಸವಾರಿ ಮಾಡುತ್ತ ತನ್ನ ಮನೆಯ ಮೇಲೇ ಹಾದು ಹೋದದ್ದನ್ನು ಸ್ಪಷ್ಟವಾಗಿ ಕಂಡೆನೆಂದು ಅಲ್ಲೆ ಹತ್ತಿರ ವಾಸಿಸುತ್ತಿದ್ದ ವ್ಯಾಪಾರಿಯೊಬ್ಬ ವದಂತಿ ಹಬ್ಬಿಸಿದ. ಆಗ ಚಿ ಚಾಂಗ್ ತನ್ನ ಬಿಲ್ಲನ್ನು ಹಿಡಿದಿದ್ದನೆಂದೂ, ಪುರಾಣಕಾಲದ ಚತುರ ಬಿಲ್ಗಾರರಾದ ಹೂ ಇ ಮತ್ತು ಯಾಂಗ್ ಯು ಚಿಯುವರ ನೈಪುಣ್ಯದ ಜತೆ ತನ್ನ ವಿದ್ಯೆಯನ್ನು ಹೋಲಿಸಿ ನೋಡುತ್ತಿದ್ದನೆಂದೂ ಸುದ್ದಿಯಾಯಿತು. ವ್ಯಾಪಾರಿಯ ಕತೆಯ ಪ್ರಕಾರ ಈ ಮೂವರು ಆಚಾರ್ಯರ ಬಾಣಗಳು ಮೃಗಶಿರಾ ಹಾಗೂ ಲುಬ್ಧಕ ಪುಂಜದ ನಡುವೆ ಹೊಳೆಯುವ ನೀಲಿ ರೇಖೆಗಳಾಗಿ ನಿಂತುವಂತೆ. ತಾನು ಚಿ ಚಾಂಗ್‌ನ ಮನೆಯೊಳಕ್ಕೆ ಇಳಿಯಲಿರುವಾಗ ಕಿಟಕಿಯಿಂದ ಇದ್ದಕ್ಕಿದ್ದಂತೆಯೇ ಗಾಳಿಯೊಂದು ತನ್ನ ಹಣೆಗೆ ಬಡೆದು ಗೋಡೆಯಿಂದ ತಾನು ಉರುಳಿಬಿದ್ದುದಾಗಿ ಕಳ್ಳನೊಬ್ಬ ಹೇಳಿದ. ಅದರ ನಂತರ ದುಷ್ಟರ್‍ಯಾರೂ ಚಿ ಚಾಂಗ್ ಮನೆಯ ಹತ್ತಿರ ಸುಳಿಯಲಿಲ್ಲ. ಅಷ್ಟೇಕೆ, ಮೇಲೆ ಹಾರುವ ಹಕ್ಕಿಗಳ ಗುಂಪೂ ಆತನ ಚಾವಣಿಯ ಗಾಳಿಯನ್ನು ತಪ್ಪಿಸಿ ಹಾರುತ್ತಿದ್ದುವಂತೆ.

ಮೋಡಗಳೆತ್ತರಕ್ಕೆ ಈ ಕೀರ್ತಿ ಹಬ್ಬುತ್ತಾ ಇರಲು, ಚಿ ಚಾಂಗ್ ಮುಪ್ಪಾದ. ದೇಹ ಮತ್ತು ಚಿತ್ತವು ಹೊರಗಿನ ವಸ್ತುಗಳ ಕಡೆ ಹರಿಯದೆ ತಮ್ಮಷ್ಟಕ್ಕೆ ತಾವು ಅಸ್ತಿತ್ವದಲ್ಲಿರುವ ವಿಶ್ರಾಂತ ಹಾಗೂ ಸರಳತೆ ಎದ್ದು ಕಾಣುವ ಸ್ಥಿತಿಗೆ ಆತ ಹೆಚ್ಚು ಹೆಚ್ಚಾಗಿ ಪ್ರವೇಶಿಸಿದಂತೆ ತೋರುತ್ತಿತ್ತು. ಉದ್ವೇಗವಿಲ್ಲದ ಆತನ ಮುಖ ಯಾವ ಭಾವಕ್ಕೂ ಇನಿತೂ ಆಸ್ಪದ ಕೊಡುತ್ತಿರಲಿಲ್ಲ. ಹೊರಗಿನ ಯಾವ ಶಕ್ತಿಯೂ ಆ ಪರಿಪೂರ್ಣ ಪ್ರಶಾಂತತೆಯನ್ನು ಅಲ್ಲಾಡಿಸಲಾಗುತ್ತಿರಲಿಲ್ಲ. ಈಗ ಆತ ಮಾತನಾಡುವುದೇ ಅಪರೂಪವಾಗಿತ್ತು; ಇತ್ತೀಚೆಗೆ ಆತ ಉಸಿರಾಡುತ್ತಿರುವನೋ ಇಲ್ಲವೋ ಎಂದು ಯಾರಿಗೂ ಹೇಳಲು ಸಾಧ್ಯವಿರಲಿಲ್ಲ. ಅನೇಕ ಬಾರಿ ಅವನ ಕೈಕಾಲು ಸೆಟೆತು ಒಣಮರದ ಬೊಡ್ಡೆಯಂತೆ ನಿರ್ಜೀವವಾಗಿ ಕಾಣುತ್ತಿದ್ದವು. ವಿಶ್ವದ ಆಳದ ಮೂಲಭೂತ ನಿಯಮಗಳಿಗೆ ಆತ ಎಷ್ಟರಮಟ್ಟಿಗೆ ಶ್ರುತಿಗೊಂಡಿದ್ದನೆಂದರೆ, ಜೀವನದ ಸಂಜೆಯಲ್ಲಿ 'ನಾನು' ಮತ್ತು 'ಅವನು', 'ಇದು' ಮತ್ತು 'ಅದು' ಎಂಬುದರ ನಡುವಿನ ವ್ಯತ್ಯಾಸವೇ ಅವನಿಗೆ ತೋರುತ್ತಿರಲಿಲ್ಲ. ಇಂದ್ರಿಯಗಳು ತೋರುವ ವಿವಿಧವರ್ಣದ ವೈಶಿಷ್ಟ್ಯಗಳು ಆತನ ಗಮನ ಸೆಳೆಯುತ್ತಲೇ ಇರಲಿಲ್ಲ. ಎಷ್ಟು ನಿರ್ವಿಕಾರನಾಗಿದ್ದನೆಂದರೆ ಆತನ ಕಣ್ಣು ಕಿವಿಯಾಗಿ ಇರಬಹುದಿತ್ತು; ಕಿವಿ-ಮೂಗಾಗಿ, ಮೂಗು-ಬಾಯಾಗಿ ಇರಬಹುದಿತ್ತು.

ಪರ್ವತದಿಂದ ಹಿಂದಿರುಗಿದ ನಲವತ್ತು ವರ್ಷಗಳ ಮೇಲೆ ಚಿ ಚಾಂಗ್‌ನು ಹೊಗೆ ಗಾಳಿಯಲ್ಲಿ ಲೀನವಾಗುವಂತೆ ಶಾಂತನಾಗಿ ಪ್ರಪಂಚ ತ್ಯಾಗ ಮಾಡಿದನು. ಈ ವರ್ಷಗಳಲ್ಲಿ ಆತ ಬಿಲ್ಲುಬಾಣಗಳನ್ನು ತೆಗೆದುಕೊಳ್ಳುವುದಿರಲಿ, ಬಿಲ್ವಿದ್ಯೆಯ ಕುರಿತು ಒಂದು ಮಾತನ್ನೂ ಆಡಲಿಲ್ಲ.

ಆತನ ಕೊನೆಯ ವರ್ಷದಲ್ಲಿ ನಡೆದ ಕತೆಯಿದು: ಒಂದು ದಿನ ಆತ ತನ್ನ ಸ್ನೇಹಿತನ ಮನೆಗ

ಹೋಗಿದ್ದಾಗ ಅಲ್ಲಿದ್ದ ಮೇಜಿನ ಮೇಲೆ ಒಂದು ಉಪಕರಣವಿತ್ತು. ಚಿ ಚಾಂಗ್‌ನಿಗೆ ಆ ಉಪಕರಣ ತಾನು ಹಿಂದೆಂದೋ ಉಪಯೋಗಿಸುತ್ತಿದ್ದಂತಹುದ್ದೆನಿಸಿದರೂ ಅದರ ಹೆಸರಾಗಲಿ, ಉಪಯೋಗವಾಗಲಿ ನೆನಪಿಗೆ ಬರಲಿಲ್ಲ. ನೆನಪನ್ನು ಬೆದಕಿಸಾಕಾಗಿ ಆತ ಸ್ನೇಹಿತನತ್ತ ತಿರುಗಿ, 'ದಯವಿಟ್ಟು ನನಗೆ ಹೇಳು ಇದರ ಹೆಸರೇನು? ಏತಕ್ಕಾಗಿ ಇದನ್ನು ಉಪಯೋಗಿಸುವರು?' ಎಂದು ಕೇಳಿದ. ಚಿ ಚಾಂಗ್ ಏನೋ ಹಾಸ್ಯ ಮಾಡುತ್ತಿದ್ದಾನೆ ಎಂಬಂತೆ ಆ ಮನೆಯೊಡೆಯ ನಕ್ಕ. ಆತ ಮತ್ತೆ ಅದೇ ಪ್ರಶ್ನೆ ಕೇಳಿದಾಗ ಸ್ನೇಹಿತ ಸ್ವಲ್ಪ ಸಂಶಯದಿಂದ ನಕ್ಕ. ಚಿ ಚಾಂಗ್ ತುಂಬ ಗಂಭೀರವಾಗಿ ಮತ್ತೆ ಅದೇ ಪ್ರಶ್ನೆ ಕೇಳಿದಾಗ ಸ್ನೇಹಿತ ದಿಗ್ಭ್ರಾಂತನಾದ. ತಾನು ಸರಿಯಾಗಿ ಕೇಳಿಸಿಕೊಂಡೆನೋ ಇಲ್ಲವೋ ಎಂದು ಚಿ ಚಾಂಗ್‌ನನ್ನ ನೋಡುತ್ತ, ಮುದುಕನಿಗೆ ಅರಳುಮರಳಾಗಿಲ್ಲ ಮತ್ತು ತಮಾಷೆ ಮಾಡುತ್ತಿಲ್ಲ ಎಂದು ಖಚಿತಪಡಿಸಿಕೊಂಡು, ತುಂಬ ಅಚ್ಚರಿಯ ದನಿಯಲ್ಲಿ ತೊದಲಿದ: 'ಓ ಆಚಾರ್ಯ! ನೀನು ಬಹುಶಃ ಎಲ್ಲ ಕಾಲಗಳಲ್ಲಿನ ಅತ್ಯುನ್ನತ ಆಚಾರ್ಯನೇ. ಹಾಗಾಗಿಯೇ ನಿನಗೆ ಬಿಲ್ಲಿನ .... ಹೆಸರು ಮತ್ತು ಉಪಯೋಗ ಮರೆತಿದೆ!'.

ಈ ಘಟನೆಯಾದ ನಂತರ ಸ್ವಲ್ಪ ದಿನ ಹ್ಯಾನ್‌ಟನ್ ನಗರದ ಚಿತ್ರಗಾರರು ತಮ್ಮ ಕುಂಚವನ್ನು ಒಗೆದರಂತೆ; ಸಂಗೀತಕುಶಲರು ತಮ್ಮ ವಾದ್ಯಗಳ ತಂತಿ ಕಿತ್ತು ಹಾಕಿದರಂತೆ; ಬಡಗಿಗಳಿಗೆ ಮೂಲೆಮಟ್ಟ ಹಿಡಿದಾಗಲೆಲ್ಲ ನಾಚಿಕೆಯಾಗುತ್ತಿತ್ತಂತೆ. ●

## ನೆನಪಿನಲ್ಲಿಡಿರಿ

ನಮ್ಮ ವಿಚಾರಗಳು ಶುದ್ಧವಾಗಿರಬೇಕಾದರೆ ಈ ಕೆಳಗಿನ ಸೂತ್ರಗಳನ್ನು ನೆನಪಿನಲ್ಲಿಡಬೇಕು.

1. ನಮ್ಮ ಪರಿಶೀಲನೆ ವ್ಯಾಪಕವಿರಬೇಕು. ಜಾಗೃತವಾದದ್ದಾಗಿರಬೇಕು.
2. ಒಂದು ತೀರ್ಮಾನಕ್ಕೆ ಬರುವ ಮುನ್ನ ಇದಕ್ಕೆ ಆಧಾರವಾದ ವಾಸ್ತವಿಕಾಂಶಗಳನ್ನೆಲ್ಲಾ ಗಮನಿಸಿದ್ದೇವೆಯೇ ಎಂದು ನೋಡಬೇಕು.
3. ವಾಸ್ತವಿಕಾಂಶಗಳನ್ನು ಆರಿಸಿಕೊಳ್ಳುವುದರಲ್ಲಿ ನಾವು ಪಕ್ಷಪಾತರಹಿತವಾಗಿದ್ದೇವೆಂದು ಮನದಟ್ಟು ಮಾಡಿಕೊಳ್ಳಬೇಕು.
4. ಉತ್ಪ್ರೇಕ್ಷೆಗೆ ಮತ್ತು ದುಡುಕಿ ಮಾಡಿಕೊಳ್ಳುವ ತೀರ್ಮಾನಕ್ಕೆ ಅವಕಾಶ ಕೊಡಬಾರದು.

## ಇವುಗಳನ್ನು ಗಮನಿಸಿರಿ

1. ನಾವು ಕಣ್ಣಿಗೆ ಬಿದ್ದದ್ದನ್ನೆಲ್ಲಾ, ಕಿವಿಯಿಂದ ಕೇಳಿದ್ದನ್ನೆಲ್ಲಾ ಗಮನಿಸುವುದಿಲ್ಲ. ಕೆಲವನ್ನು ಮಾತ್ರ ಗಮನಿಸುತ್ತೇವೆ.
2. ಇಂದ್ರಿಯಗಳು ವಸ್ತುವಿನ ಬೇರೆ ಬೇರೆ ಮುಖವನ್ನು ನಮಗೆ ಪರಿಚಯ ಮಾಡಿಕೊಟ್ಟರೂ ಪದಾರ್ಥಗಳ ಸಮಗ್ರ ಜ್ಞಾನ ಪಡೆಯುತ್ತೇವೆ. ಪದಾರ್ಥಗಳನ್ನು ಛಿದ್ರಛಿದ್ರವಾಗಿ ನೋಡುವುದಿಲ್ಲ. ಸಮಗ್ರವಾಗಿಯೇ ನೋಡುತ್ತೇವೆ.
3. ನಾವು ಗ್ರಹಿಸುವ ಜ್ಞಾನ ಪ್ರತ್ಯೇಕ ಇಂದ್ರಿಯಜನ್ಯ ಜ್ಞಾನ ಪ್ರತ್ಯೇಕ, ಪ್ರತ್ಯೇಕವಾದ ಖಂಡ ಜ್ಞಾನವಾಗುವುದಿಲ್ಲ. ಅಸಂಘಟಿತವಾದದ್ದು ಜ್ಞಾನವಾಗುವುದಿಲ್ಲ. ಸಂಘಟಿತವಾದದ್ದು ಜ್ಞಾನವಾಗುತ್ತದೆ.
4. ವಸ್ತುಗಳು ಇಂತಹ ಸ್ಥಳದಲ್ಲಿವೆ ಎನ್ನುವುದನ್ನು ಗ್ರಹಿಸುವುದು ಮಾತ್ರವಲ್ಲದೆ ಅವುಗಳು ಚಲಿಸುವುದನ್ನು ಮನಗಾಣುತ್ತೇವೆ.

(ಸಂಗ್ರಹ) ಕೆ.ಎಸ್.ಅಮೃತ.ನಿರ್ಮಾ

# —ಎಲ್ಲಿಂದೆಲ್ಲಿಗೆ—

# ಬೆಳೆಯಿತು ತಾಳೆ !

ಯಾವುದೇ ಗಿಡವನ್ನು ನೆಡುವ ಮುಂಚೆ ಆ ಗಿಡದ ವಿವಿಧ ಬಗೆಯ ಉಪಯುಕ್ತತೆ ಕುರಿತು ವಿವೇಚಿಸುವುದು ಸಾಮಾನ್ಯ. ವರ್ಷಗಟ್ಟಲೆ ಸತುವು, ನೀರು ಉಣಿಸಿ ಬೆಳೆಸುವ ಮರಗಳು ಕೊಡಬಹುದಾದ ಕಟ್ಟಿಗೆ, ಹಣ್ಣು, ಗಿಡದ ಆಯುಷ್ಯ, ಶೀಘ್ರ ಬೆಳವಣಿಗೆ ಇತ್ಯಾದಿಗಳೆಡೆ ಗಮನವೀಯುವುದರಲ್ಲಿ ಅರ್ಥವಿದೆ.

ಇತ್ತೀಚಿನ ದಿನಗಳಲ್ಲಿ ಎಣ್ಣೆ ಮತ್ತು ಕೊಬ್ಬು ಪದಾರ್ಥಗಳಿಗೆ ಜಗತ್ತಿನಾದ್ಯಂತ ವಿಪರೀತ ಬೇಡಿಕೆ ಇದೆ. ಚೀನಾ, ಪಾಕಿಸ್ತಾನ ಮುಂತಾದ ದೇಶಗಳಲ್ಲಿ ಎಣ್ಣೆ ಉತ್ಪಾದನೆ ರಾಷ್ಟ್ರದ ಬೇಡಿಕೆಯನ್ನು ಸರಿದೂಗಿಸಲು ಸಮರ್ಥವಾಗದೆ ಆ ದೇಶಗಳು ಆಮದಿಗಾಗಿ ಅಪಾರ ಹಣ ವ್ಯಯಿಸುತ್ತಿವೆ. ಈ ಹಿನ್ನೆಲೆಯಲ್ಲಿ ಎಣ್ಣೆ ಉತ್ಪಾದನೆಯ ಅಗತ್ಯ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದ್ದು, ಈ ನಿಟ್ಟಿನ ಸಂಶೋಧನೆಗಳಿಗೆ ಮಹತ್ವದ ಚಾಲನೆ ದೊರಕುವಂತಾಗಿದೆ.

ಅಂತೆಯೇ ನೂರಕ್ಕಿಂತ ಹೆಚ್ಚು ವರ್ಷ ಬದುಕುಳಿದು ಮಾನವನ ಅಗತ್ಯ ಪೂರೈಸುವ ತಾಳೆ ಮರಕ್ಕೆ ಭಾರಿ ಬೆಲೆ ಬಂದಿದೆ. ಈ ಮರ ಎರಡು ಬಗೆಯ ಎಣ್ಣೆಯನ್ನು ಒದಗಿಸಬಲ್ಲದು. ಹಣ್ಣಿನ ತಿರುಳಿನಿಂದ ಸಂಸ್ಕರಿಸುವ ತಾಳೆ ಎಣ್ಣೆ ಒಂದು ಬಗೆಯದಾದರೆ, ಬೀಜದ ತಿರುಳಿನಿಂದ ಹೊರತೆಗೆದ ತಾಳೆ ಬೀಜದೆಣ್ಣೆ ಮತ್ತೊಂದು ಬಗೆಯದು. ಈ ಎರಡೂ ಬಗೆಯ ಎಣ್ಣೆ ಆಹಾರ ಪದಾರ್ಥವಾಗಿಯಲ್ಲದೆ ಸಾಬೂನು, ಸೌಂದರ್ಯ ವರ್ಧಕಗಳ ತಯಾರಿಕೆಯಲ್ಲಿಯೂ ಬಳಸಲ್ಪಡುತ್ತದೆ.

ತಾಳೆ ಎಣ್ಣೆ ಉತ್ಪಾದನೆಗಾಗಿ ಏಶಿಯಾ, ಆಫ್ರಿಕಾ ಅಮೆರಿಕಾ ಪ್ರದೇಶಗಳಲ್ಲಿ ಲಕ್ಷಾಂತರ ಹೆಕ್ಟೇರ್ ಭೂಮಿಯನ್ನು ಉಪಯೋಗಿಸಲಾಗುತ್ತಿದ್ದರೂ ಬೇಡಿಕೆಯ ಗಣನೀಯ ಏರಿಕೆಯಿಂದಾಗಿ ವರ್ಷಂಪ್ರತಿ ಹತ್ತು ದಶಲಕ್ಷ ತಾಳೆಯ ಮರಿ ಗಿಡಗಳನ್ನು ನೆಡಲಾಗುತ್ತಿದೆ. ಕಳೆದ ಮೂರು ದಶಕಗಳಲ್ಲಿ ತಾಳೆ ಮರದ ಕೃಷಿಯ ಭಾರಿ ಹೆಚ್ಚಳ ಖಾದ್ಯ ತೈಲದ ಉತ್ಪಾದನೆಯಲ್ಲಿ ತಾಳೆ ಎಣ್ಣೆಗೆ ಎರಡನೇ ಸ್ಥಾನ ದೊರಕಿಸಿಕೊಟ್ಟಿದೆ. ಮಾರುಕಟ್ಟೆಯಲ್ಲಿ ತಾಳೆ ಎಣ್ಣೆಗೆ ನಂಬರ್ ಒನ್ ಸ್ಪರ್ಧಾತ್ಮಕ ಸವತಿಯೆಂದರೆ ಸೋಯಾಬಿನ್. ಇತ್ತೀಚಿನ ಇಪ್ಪತ್ತು ವರ್ಷಗಳಲ್ಲಂತೂ ತಾಳೆ ಎಣ್ಣೆಯ ಉತ್ಪಾದನೆ ಇಮ್ಮಡಿಸಿದೆ. ಕೃಷಿ ಭೂಮಿಯ ಮೂರನೇ ಒಂದರಷ್ಟು ಭಾಗದಲ್ಲಿ ತಾಳೆ ಗಿಡಗಳನ್ನು ನೆಟ್ಟು ರಾಷ್ಟ್ರದ ಶೇಕಡಾ ಹತ್ತರಷ್ಟು ರಫ್ತಿನ ಪದಾರ್ಥವನ್ನಾಗಿಸಿಕೊಂಡಿರುವ ಮಲೇಶಿಯಾ ಪ್ರಪಂಚದಲ್ಲಿಯೇ ಅತಿ ಹೆಚ್ಚು ತಾಳೆ ಎಣ್ಣೆ ಪದಾರ್ಥ ಉತ್ಪಾದಿಸುವ ಅಗ್ರ ರಾಷ್ಟ್ರವಾಗಿದೆ.

ನಂಬಲಸಾಧ್ಯವಾದ ಸತ್ಯವೆಂದರೆ ಕೇವಲ ಒಂದು ಶತಮಾನದ ಹಿಂದೆಯಷ್ಟೇ ಆಫ್ರಿಕಾ ಮೂಲದ ಈ ತಾಳೆ ಮರ ಏಶಿಯನ್ನರಿಗೆ ಅಪರಿಚಿತವಾಗಿತ್ತು! ತಾಳೆ ಮರದ ಕೇವಲ ನಾಲ್ಕು ಸಸಿಗಳನ್ನು (೧೮೭೭ರಲ್ಲಿ) ಮಲೇಶಿಯಾದಲ್ಲಿ ನೆಟ್ಟಿದ್ದೇ ಇಂದು ಪವಾಡಸದೃಶವಾಗಿ ಹಬ್ಬಿ ಅನಿವಾರ್ಯ ಖಾದ್ಯವಾಗಿ ಬೆಳೆದು ನಿಂತಿದೆ.

ತಾಳೆ ಎಣ್ಣೆಯ ಮಹತ್ವದ ಅರಿವಾಗುತ್ತಲೇ ಅದರ ತಳಿ ಅಭಿವೃದ್ಧಿಗೆಂದು ಸಾಕಷ್ಟು ಸಂಶೋಧನೆಗಳು ನಡೆದು ಹೆಕ್ಟೇರಿಗೆ ಮೂರು ಟನ್ನು ಇದ್ದ ಉತ್ಪಾದನೆಯನ್ನು ಐದು ಟನ್ನುಗಳಿಗೆ ಹೆಚ್ಚಿಸಲಾಗಿದೆ.

ತಾಳೆಯೆಣ್ಣೆಯಲ್ಲಿ ಶೇಕಡಾ ಐವತ್ತರಷ್ಟು ಕೊಬ್ಬಿನಂಶ ಇರುವುದರಿಂದ ಇದರ ಸೇವನೆ ರಕ್ತದೊಳಗಿನ ಕೊಲೆಸ್ಟಿರಾಲ್ ಪ್ರಮಾಣವನ್ನು ಹೆಚ್ಚಿಸುವುದೆಂದು ಇದುವರೆಗೆ ಸಂಶಯಿಸಲಾಗಿತ್ತು. ಆದರೆ ಪ್ಯಾರೀಸಿನ ವಿಜ್ಞಾನಿ ಡಾ: ಫಾತಿ ಡ್ರಿಸ್ ಅವರು ಅನೇಕ ಮನುಷ್ಯರು ಮತ್ತು ಪ್ರಾಣಿಗಳ ಮೇಲೆ ನಡೆಸಿದ ಪ್ರಯೋಗಗಳಿಂದ ಈ ಊಹೆ ಇನ್ನೂ ಋಜುವಾತಾಗಿಲ್ಲ. ಅಷ್ಟೇ ಅಲ್ಲ ಸಂಸ್ಕರಣ ಪೂರ್ವ ತಾಳೆ ಎಣ್ಣೆಯಲ್ಲಿರುವ ಬೀಟಾಕೆರೋಟಿನ್, ಟ್ರೈಕೋಟಿನಾಲ್‌ಗಳು ಟ್ಯೂಮರ್‌ವಿರೋಧಿ ಲಕ್ಷಣಗಳನ್ನು ಹೊಂದಿವೆ ಎಂದು ಡಾ: ಡ್ರಿಸ್ ಅಭಿಪ್ರಾಯಪಡುತ್ತಾರೆ.

(ಆಧಾರ) 'ಸುಧಿ'




# ಕೆಂಪು ಪಟ್ಟಿಯ ತಾಂಡವ ನೃತ್ಯ

ನಮ್ಮ ದೇಶದಲ್ಲಿ 'ಕೆಂಪು ಪಟ್ಟಿ' (Red tape), ಆಡಳಿತ ವ್ಯವಸ್ಥೆಗೇ ಒಂದು ಪರ್ಯಾಯ ಪದವೆನಿಸಿದೆ.

ದೆಹಲಿ ನಮ್ಮ ದೇಶದ ರಾಜಧಾನಿಯಾಗಿರುವಂತೆಯೇ ಕೆಂಪು ಪಟ್ಟಿಯ ಭದ್ರ ಕೋಟೆಯೂ ಆಗಿದೆ. ಇದೇ ಒಂದು ಆದರ್ಶ ಆಡಳಿತ ವ್ಯವಸ್ಥೆಯೆಂದು ಬಹಳಷ್ಟು ಮಂದಿ ರಾಜಕಾರಣಿಗಳೂ, ಉಚ್ಚ ಅಧಿಕಾರಿಗಳೂ ತಿಳಿದಿದ್ದಾರೆ. ಆದರೆ ಇದರ ವಿಷಮ ಪರಿಣಾಮಗಳನ್ನು ಅನುಭವಿಸುವವರು ದೇಶದ ಬಡಪಾಯಿ ನಾಗರಿಕರು. ದೆಹಲಿಯ ನಾಗರಿಕರಿಗೆ, ಅದರಲ್ಲೂ ಸರ್ಕಾರಿ ನೌಕರರಿಗೆ ಈ ಕೆಂಪು ಪಟ್ಟಿ ವ್ಯವಸ್ಥೆಯ ಅನುಭವ ಬಹಳ ನಿಕಟ, ಗಹನ. ನೀವು ದೆಹಲಿಗೆ ಬಂದು ನಿಮ್ಮ ಕಛೇರಿಯಲ್ಲಿ ಕಾರ್ಯಭಾರ ವಹಿಸಿಕೊಂಡ ಮೇಲೆ, ಮೊದಲು ನಿಮ್ಮ ವಾಸಕ್ಕೆ ಬೇಕಾದ ಸವಲತ್ತುಗಳನ್ನು ಪಡೆಯಲು ಯುದ್ಧಸ್ತರದಲ್ಲಿ ಒಂದು ಕಾರ್ಯಕ್ರಮವನ್ನು ರೂಪಿಸಿಕೊಳ್ಳಬೇಕು. ಮನೆ (Quarter) ಪಡೆಯಲು ಒಂದು ಮಹಾ ಯಜ್ಞವನ್ನೇ ನಡೆಸಬೇಕಾಗುತ್ತದೆ. ನಿರ್ಮಾಣಭವನಕ್ಕೆ ಹೋಗಿ ಸಂಬಂಧಪಟ್ಟ ಅಧಿಕಾರಿಯನ್ನು ಸಂದರ್ಶಿಸಬೇಕು. ಅವರು ಕೇಳಿದಷ್ಟು ನಮೂನೆ (Form)ಗಳನ್ನು ಸವಿವರವಾಗಿ ತುಂಬಿಸಿ ಸಲ್ಲಿಸಬೇಕು. ಆ ನಮೂನೆಗಳಲ್ಲಿ ಇಡೀ ನಿಮ್ಮ ಸರ್ಕಾರಿ ಜಾತಕವೇ ಮೂಡಿರಬೇಕು. ಮೇಲಾಗಿ ಏನಾದರೂ ತಪ್ಪು ವಿವರ ಕೊಟ್ಟಿದ್ದರೆ ಮನೆಯೇ ಸಿಗದಿರುವ ಬೆದರಿಕೆಯೂ ಸ್ಪಷ್ಟವಾಗಿರುತ್ತದೆ. ಮನೆ ಸಿಗುವ ತನಕ ಪದೇ ಪದೇ ನಿರ್ಮಾಣ ಭವನದ ಯಾತ್ರೆಗಳನ್ನು ಮಾಡುತ್ತಿರಬೇಕು; ನಿಮ್ಮ ಇಷ್ಟ ದೇವತೆಯ ದರ್ಶನಕ್ಕೆ ಹೋಗುತ್ತಿರುವಂತೆ. ಅಬ್ಬಾ! ಕೊನೆಗೊಂದು ದಿನ ಮನೆ ಸಿಕ್ಕಾಗ ನೀವು ನಿಶ್ಚಿಂತೆಯಿಂದ ಉಸಿರಾಡುವಷ್ಟರಲ್ಲೇ, ಮತ್ತಷ್ಟು ಸಮಸ್ಯೆಗಳು ಎದುರಾಗುತ್ತವೆ. ಮನೆಗೆ ರಿಪೇರಿ ಮಾಡಿಸುವ (ಅದು ಅಷ್ಟು ದುಃಸ್ಥಿತಿಯಲ್ಲಿರುತ್ತೆ), ನಲ್ಲಿಯ ಮತ್ತು ದೀಪದ ಕನೆಕ್ಷನ್ ಪಡೆಯುವ, ಇಂತಹ ಇನ್ನೆಷ್ಟೋ ಸಮಸ್ಯೆಗಳು. ಪ್ರತಿಯೊಂದು ಬಾಬಿಗೂ ಒಂದೊಂದು ಕಛೇರಿ; ಅಲ್ಲಿ ಅರ್ಜಿ, ಠೇವಣಿ ಇತ್ಯಾದಿಗಳ ಪುನರಾವೃತ್ತಿ. ನೀವು ಭಗೀರಥನನ್ನು ನೆನೆಸಿ ಕಾರ್ಯೋನ್ಮುಖರಾಗುತ್ತೀರಿ. ಈ ಮಧ್ಯೆ ನೀವು ನಿಮ್ಮ ಕಛೇರಿಯಲ್ಲಿ ಮಾಡುವ ಕೆಲಸವೆಂದರೆ ಕೇವಲ ಹಾಜರಿ ಹಾಕುವುದು. ನಿಮ್ಮ ಸಹೋದ್ಯೋಗಿಗಳೆಲ್ಲರೂ ಈ ಸಮಯದಲ್ಲಿ ನಿಮಗೆ ಹೆಚ್ಚಿನ ಸಹಕಾರ ನೀಡುತ್ತಾರೆ. ಏಕೆಂದರೆ, ಎಲ್ಲರೂ ಸಹತಾಪಿಗಳೇ, ಈ ಬವಣೆಗಳನ್ನು ಅನುಭವಿಸಿದವರೇ. ಕೊನೆಗೊಂದು ದಿನ ನಿಮಗೆ ವಾಸಕ್ಕೆ ಯೋಗ್ಯವಾದ ಮನೆ ದೊರಕಿ, ನೀವು ಆ

ಸುಖವನ್ನು ಸವಿಯುವಷ್ಟರಲ್ಲೇ ಮತ್ತೊಂದು ಸಮಸ್ಯೆ ಎದುರಾಗುತ್ತದೆ. ಅಲ್ಲಿ ನಿಮ್ಮ ಕಾರು ನಿಲ್ಲಿಸಲು ಗೆರೇಜೇ ಇಲ್ಲ. ಈ ಕೆಂಪು ಪಟ್ಟಿಯ ಸಾಮ್ರಾಜ್ಯದಲ್ಲಿ ಮನೆಗೊಂದು ಗೆರೇಜ್ ಎನ್ನುವ ಸೂತ್ರ ಸಲ್ಲದು. ಒಂದು ಕಾಲೋನಿಯಲ್ಲಿ ನೂರು ಮನೆಗಳಿದ್ದರೆ, ಗೆರೇಜುಗಳಿರುವುದು ಅರವತ್ತೆ. ನೀವು ಆ ಅರವತ್ತು ಜನ ಅದೃಷ್ಟವಂತರ ಗುಂಪಿನಲ್ಲಿಲ್ಲ ಎಂದು ಹೇಳಬೇಕಿಲ್ಲ. ಕಾರನ್ನು ರಸ್ತೆಯಲ್ಲಿ ನಿಲ್ಲಿಸುವಂತಿಲ್ಲ. ಬಿಸಿಲು ಮಳೆಗಳ ಹೊಡೆತದಿಂದಾಗುವ ಹಾನಿಯಲ್ಲದೆ, ಕಾರು ಕಳುವಾಗುವ ಸಂಭವವೂ ಇದೆ. ಗೆರೇಜು ದೊರಕಿಸಿಕೊಳ್ಳಲು ನೀವು ಮತ್ತೊಂದು 'ಮಿನಿ' ಯಜ್ಞವನ್ನೇ ಪ್ರಾರಂಭಿಸಬೇಕು. ಪುನಃ ಅರ್ಜಿ, ನಿರ್ಮಾಣಭವನದ ಯಾತ್ರೆ ಇತ್ಯಾದಿಗಳ ಪುನರಾವರ್ತನೆ. ಮೊದಲು ಮನೆಗೆ ಒಂದು ಕ್ಯೂ; ಮನೆ ಸಿಕ್ಕ ನಂತರ ಗೆರೇಜಿಗೆ ಮತ್ತೊಂದು ಕ್ಯೂ, ಇದು ನಿಯಮ. ನಿಮಗೆ ಜರೂರಾಗಿ ಗೆರೇಜು ಬೇಕಿದ್ದರೆ, ಮಂತ್ರಿಗಳಿಂದ Out of turn ಸ್ಯಾಂಕ್ಷನ್ ಮಾಡಿಸಬೇಕು, ಇದು ಮತ್ತೊಂದು ನಿಯಮ. ಮಂತ್ರಿಗಳ ಆದೇಶ ಪಡೆಯಲು, ಅರ್ಜಿಯ ಜೊತೆ ಕಾರಿನ ಮೆಡಿಕಲ್ ಸರ್ಟಿಫಿಕೇಟ್ ಕೊಡಬೇಕೇನೋ! ನಮ್ಮ ಮಾನ್ಯ ಮಂತ್ರಿಗಳು ಇಂತಹ ಘನ ಕಾರ್ಯಗಳನ್ನು ನಿರ್ವಹಿಸುತ್ತಿರುವುದರಿಂದಲೇ ನಮ್ಮ ದೇಶ ಇಷ್ಟು ಮುಂದುವರೆದಿರುವುದು! ಕೊನೆಗೆ ಹೇಗೋ ಗೆರೇಜು ಸಿಕ್ಕಿದರೂ ಕಾರಿನ ಬಗ್ಗೆ ನಿಮ್ಮ ಜವಣೆ ಮುಗಿಯುವುದಿಲ್ಲ. ನೀವು ಅದನ್ನು ಬೇರೆ ರಾಜ್ಯದಿಂದ ತಂದಿದ್ದರಿಂದ ಅದಕ್ಕೆ ಸಲ್ಲುವ ವಾಹನ ತೆರಿಗೆಯನ್ನು ಇಲ್ಲಿ ಕಟ್ಟುವಂತಿಲ್ಲ. ಇಲ್ಲಿ ತೆರಿಗೆ ಕೊಡಬೇಕಿದ್ದರೆ (ಕೊಡದಿರಲುಂಟೆ?) ಅದರ ರಿಜಿಸ್ಟ್ರೇಶನ್ ಬದಲಿಸಬೇಕು. ಈ ಕೆಲಸವೇನೂ ಸುಲಭ ಸಾಧ್ಯವಲ್ಲ. ಈ ವಿಷಯದಲ್ಲಿ ನನ್ನ ಸಹೋದ್ಯೋಗಿಯೊಬ್ಬರ ಅನುಭವವನ್ನೇ ನೋಡೋಣ.

ಅವರು ಈ ಕೆಲಸಕ್ಕೆ (ತೆರಿಗೆ ಕಟ್ಟುವುದಕ್ಕೆ) ಒಂದು ದಿನವನ್ನೇ ಮುಡಿಪಾಗಿಟ್ಟು, ಸ್ವತಃ ಬೆಳಿಗ್ಗೆಯೇ ಸಂಬಂಧಪಟ್ಟ RTO ಕಛೇರಿಗೆ ಹೋದರು. ಅಲ್ಲಾಗಲೇ ಒಂದು ದೊಡ್ಡ ಕ್ಯೂ ಬೆಳೆದಿತ್ತು. ಕ್ಯೂನಲ್ಲಿ ನಿಂತು ಸುಮಾರು ಮೂರು ಘಂಟೆಯ ನಂತರ ಸಂಬಂಧಿಸಿದ ಉದ್ಯೋಗಿಯ ಮೇಜನ್ನು ತಲುಪಿದರು. ತಮ್ಮ ಕಾರಿನ ತೆರಿಗೆ ಹಣ ಮತ್ತು ಸಂಬಂಧಿಸಿದ ಕಾಗದಗಳನ್ನು ಅವನ ಮುಂದಿರಿಸಿದರು. ಆ ಕಾರಕೂನ ಅವುಗಳ ಮೇಲೆ ಕಣ್ಣಾಡಿಸಿ, ನೀವು ತೆರಿಗೆ ಸಲ್ಲಿಸಬೇಕಾದರೆ ನಿಮ್ಮ ಟ್ರಾನ್ಸ್‌ಫರ್ ಆದೇಶದ ನಕಲು, ಅಫಿಡವಿಟ್ ಮತ್ತು ನಿಮ್ಮ ರೇಷನ್ ಕಾರ್ಡು ಇವುಗಳನ್ನೂ ಕೊಡಿ ಎಂದ. ಇವರು ಬೇಸರದಿಂದ, ರೇಷನ್ ಕಾರ್ಡಿನಲ್ಲಿ ನನ್ನ ಕಾರನ್ನು ಸೇರಿಸಿಲ್ಲ ಅಲ್ಲದೆ ನನ್ನ ಕಾರಿಗೆ ರೇಷನ್ ಬೇಕಿಲ್ಲ ಎಂದರು. ಸಿಟ್ಟಿಗೆದ್ದ ಕಾರಕೂನ, ''ಗೇಲಿ ಮಾಡಬೇಡಿ, ನಮ್ಮ ನಿಯಮಗಳ ಪ್ರಕಾರ ಆ ದಾಖಲೆಗಳನ್ನು ಕೊಟ್ಟರೆ ಮಾತ್ರ ನಿಮ್ಮ ತೆರಿಗೆ ತೆಗೆದುಕೊಳ್ಳುವುದು, ಇಲ್ಲದಿದ್ದರೆ ಹೊರಡಿ'' ಎಂದ. ಇವರು ಹೇಗೋ ಕಷ್ಟಪಟ್ಟು ಪರಿಸ್ಥಿತಿ ನಿಭಾಯಿಸಿ, ಉಸ್ಸಪ್ಪ ಎನ್ನುತ್ತಾ ಮನೆಗೆ ಬಂದರು. ಬೇರೆ ಪ್ರಾಂತದಿಂದ ಕಾರು ತಂದರೆ ಅಲ್ಲಿಯ RTO ಮತ್ತು ಪೊಲೀಸರಿಂದ ''No objection'' ಸರ್ಟಿಫಿಕೇಟ್ ತರಬೇಕಂತೆ. ಇಲ್ಲದಿದ್ದರೆ ಇಲ್ಲಿ ತೆರಿಗೆ ಕಟ್ಟುವಂತಿಲ್ಲ. ಈ ಸರ್ಕಾರಿ ನೌಕರರೂ ಡಕಾಯಿತರಿರಬಹುದು ಎನ್ನುವ ಅನುಮಾನವಿರಬೇಕು!

ನಿಮ್ಮ ಮಗನನ್ನು ಸ್ಕೂಲಿಗೆ ಸೇರಿಸುವುದೂ ಬಹಳ ತ್ರಾಸದಾಯಕವಾದ ಕೆಲಸ. ಪ್ರವೇಶ ದೊರಕಿಸಲು ಅನೇಕ ಬಾರಿ ಸ್ಕೂಲಿನ ಯಾತ್ರೆ ಮಾಡಿ ಪ್ರಿನ್ಸಿಪಾಲರ ಮನವೊಲಿಸುತ್ತೀರಿ. ನಂತರ, ನಿಗದಿತ ದಿನ ಪ್ರವೇಶಕ್ಕೆ ಬೇಕಾದ, ಅವರು ಕೇಳಬಹುದಾದ ಎಲ್ಲ ದಾಖಲೆಗಳನ್ನೂ ಸರ್ಟಿಫಿಕೇಟುಗಳನ್ನೂ ತೆಗೆದುಕೊಂಡು ಹೋಗುತ್ತೀರಿ. ಸಂಬಂಧಿಸಿದ ಕಾರಕೂನ, ಇವಲ್ಲದೆ ಮತ್ತೊಂದು ಸರ್ಟಿಫಿಕೇಟ್ - ನಿಮ್ಮ ಸಂಬಳದ ಸರ್ಟಿಫಿಕೇಟ್ - ಬೇಕೆನ್ನುತ್ತಾನೆ. ನಿಮ್ಮ ಸಂಬಳ ''ಇಷ್ಟು ಸಾವಿರ'' ಎಂದು ಮೊದಲೇ ಅರ್ಜಿಯಲ್ಲಿ ನಮೂದಿಸಿರುತ್ತೀರಿ.

ಅದು ಸಾಲದು. ಅವನಿಗೆ ನಿಮ್ಮ ಕಛೇರಿಯಿಂದ ಅದು ಅಷ್ಟೇ ಎಂದು ಸರ್ಟಿಫಿಕೇಟ್ ಬೇಕು. ಅದೇಕೆ ಎಂದು ವಿಚಾರಿಸಲಾಗಿ ಆತ ಹೇಳುತ್ತಾನೆ, ''ನೋಡಿ, ಮೂರೂವರೆ ಸಾವಿರಕ್ಕೆ ಕಡಿಮೆ ಸಂಬಳವಿದ್ದವರ ಮಕ್ಕಳಿಗೆ ಶುಲ್ಕದಲ್ಲಿ ರಿಯಾಯಿತಿಯಿದೆ. ಆದ್ದರಿಂದ ಯಾರೂ ಸುಳ್ಳು ಮಾಹಿತಿ ಕೊಡದಿರಲಿ ಎಂದು ಈ ವ್ಯವಸ್ಥೆ'' ಇದನ್ನು ಕೇಳಿ ನೀವು ಒಂದು ಕ್ಷಣ ಸ್ತಂಬೀಭೂತರಾಗುತ್ತೀರಿ. ಒಡನೆ ನಿಮಗೆ ಕೋಪವೂ ಬರುತ್ತೆ. ನಿಮ್ಮ ಅರ್ಜಿಯಲ್ಲಿ ನಮೂದಿಸಿದಂತೆ ನಿಮ್ಮ ಸಂಬಳ ಮೂರುವರೆ ಸಾವಿರಕ್ಕಿಂತ ಹೆಚ್ಚು; ಹಾಗೆಂದ ಮೇಲೆ ಈ ಸರ್ಟಿಫಿಕೇಟಿನ ಅವಶ್ಯಕತೆಯೇನು? ಪ್ರೈಮರಿ ಶಾಲೆಯ ವಿದ್ಯಾರ್ಥಿಯೂ ಇದನ್ನು ಅರ್ಥ ಮಾಡಿಕೊಳ್ಳಬಲ್ಲ. ಆದರೆ, ಕಾರಕೂನ ಅಚಲ. ''ನಾವೇನೂ ಮಾಡುವಂತಿಲ್ಲ. ಇದು ನಿಯಮ'' ಅವನು ಹೇಳಿದ ಧೋರಣೆಯಲ್ಲಿ ಇದೇನೋ ಬ್ರಹ್ಮ ಲಿಖಿತವಿರಬೇಕು. ಆ ಶಾಲೆಯ ಪ್ರಿನ್ಸಿಪಾಲರು, ಮೇಲಿನ ಅಧಿಕಾರಿಗಳು, ವಿದ್ಯಾಮಂತ್ರಿಗಳು ಕೊನೆಗೆ ಪ್ರಧಾನಮಂತ್ರಿಗಳೂ ಸಹ ಈ ನಿಯಮವನ್ನು ಬದಲಿಸಲಾರರು ಎನ್ನುವ ಸೂಚನೆ. ಈ ಕೆಂಪು ಪಟ್ಟಿಯ ತಾಂಡವಕ್ಕೆ ನಿಮ್ಮಲ್ಲಿ ಬೇರಾವ ಉತ್ತರವೂ ಇಲ್ಲ. ಕಾರಕೂನ ಕೇಳಿದ ಸರ್ಟಿಫಿಕೇಟನ್ನು ತರದಿದ್ದರೆ ನಿಮ್ಮ ಮಗನಿಗೆ ಶಾಲೆಯಲ್ಲಿ ಪ್ರವೇಶವಿಲ್ಲ.

ಹೀಗೆಯೇ ಎಲ್ಲ ಕ್ಷೇತ್ರಗಳಲ್ಲೂ ಕೆಂಪು ಪಟ್ಟಿಯ ಪ್ರತಾಪವನ್ನು ನೋಡಬಹುದು. ಈ ಕೆಂಪು ಪಟ್ಟಿ ಪುರಾಣ ಬಹಳ ಪುರಾತನವಾದದ್ದು, ಎಣೆಯಿಲ್ಲದ್ದು, ಕೊನೆಯಿಲ್ಲದ್ದು. ನಮ್ಮ ದೇಶದಲ್ಲಿ ಎಲ್ಲ ರೀತಿಯ ಕೆಲಸ ಕಾರ್ಯಗಳಿಗೂ ಭಗೀರಥ ಪ್ರಯತ್ನವನ್ನೇ ಮಾಡಬೇಕಾಗುತ್ತದೆ. ಒಂದು ಟೆಲಿಫೋನ್ ಹಾಕಿಸಿಕೊಳ್ಳಬೇಕಾಗಲಿ ಅಥವಾ ಒಂದು ದೊಡ್ಡ ಕೈಗಾರಿಕೆ ಸ್ಥಾಪಿಸಲು ಬೇಕಾಗುವ ಲೈಸೆನ್ಸ್ ಪಡೆಯಬೇಕಾಗಲಿ, ಮೊದಲು ಈ ಕೆಂಪು ಪಟ್ಟಿಯ ಚಕ್ರವ್ಯೂಹವನ್ನು ಭೇದಿಸಬೇಕು. ಹತ್ತಾರು, ಕೆಲವು ಬಾರಿ ನೂರಾರು ನಮೂನೆಗಳನ್ನು ತುಂಬಿ, ಲೆಕ್ಕವಿಲ್ಲ



''ಹುಡುಗಿ ಕಪ್ಪಾದ್ರೆ ಏನಾಯ್ತು ಬಿಡಿ! ನೀವು ಒಪ್ಪಿಕೊಂಡ್ರೆ, ಇನ್ನೂ ಮೂವತ್ತು ಸಾವಿರ ಹೆಚ್ಚಿಗೆ ಸಿಕ್ಕುತ್ತೆ''

ದಷ್ಟು ಸರ್ಟಿಫಿಕೇಟುಗಳನ್ನು ಲಗತ್ತಿಸಿ, ಅಷ್ಟೇ ಸಂಖ್ಯೆಯ ಅಫಿಡವಿಟ್ಟುಗಳನ್ನು ಅರ್ಪಿಸಿ, ಠೇವಣಿಗಳೆಂಬ ಕಾಣಿಕೆಗಳನ್ನು ಕೊಟ್ಟು, ಸಂಬಂಧಿಸಿದ ಇಲಾಖೆಯ/ಸಂಸ್ಥೆಯ ದೇವಾಧಿದೇವತೆಗಳನ್ನು (ಅಧಿಕಾರಿ/ಮಂತ್ರಿ) ಸಂದರ್ಶಿಸಿ, ಪೂಜಿಸಿ ಒಲಿಸಬೇಕು. ಈ ಎಲ್ಲ ಕೆಲಸಗಳಿಗೆ ಕೆಲವು ತಿಂಗಳುಗಳಿಂದ ಹಿಡಿದು ಕೆಲವು ವರ್ಷಗಳೇ ಬೇಕಾಗುತ್ತವೆ. ನಮ್ಮ ದೇಶದಲ್ಲಿ ಜಾರಿಯಲ್ಲಿರುವ ಪರ್ಮಿಟ್, ಲೈಸೆನ್ಸ್, ಕೋಟಾ ವ್ಯವಸ್ಥೆ ಕೆಂಪು ಪಟ್ಟಿ ಶಾಹಿಯ ಬೆಳವಣಿಗೆಗೆ ಬಹಳ ಪ್ರಶಸ್ತವಾದ ಭೂಮಿಕೆಯಾಗಿದೆ. ಒಂದು ಇನ್ನೊಂದಕ್ಕೆ ಪೂರಕವಾಗಿದೆಯೆನ್ನಬಹುದು. ಕೆಂಪು ಪಟ್ಟಿಯ ಪ್ರಭಾವವನ್ನು ಕೇವಲ ಸಾಮಾನ್ಯ ನಾಗರಿಕರೇ ಅಲ್ಲದೆ, ಉದ್ಯಮಿಗಳು, ವ್ಯಾಪಾರಿಗಳು, ನೌಕರರು, ವಿದ್ಯಾರ್ಥಿಗಳು, ವಿದೇಶಿ ಪರ್ಯಟಕರು ಇವರೆಲ್ಲರೂ ಅನುಭವಿಸಿ ಚೆನ್ನಾಗಿ ತಿಳಿದಿದ್ದಾರೆ. ಬೇರೇನೂ ಮಾರ್ಗವಿಲ್ಲದೆ ಅದರೊಡನೆ ಸಹಬಾಳ್ವೆ ನಡೆಸುತ್ತಿದ್ದಾರೆ.

ಆಗೊಮ್ಮೆ ಈಗೊಮ್ಮೆ ಕೆಲವರು ಈ ಕೆಂಪು

ಪಟ್ಟಿಯ ಪ್ರಭಾವವನ್ನು ಕುಗ್ಗಿಸಲು ಪ್ರಯತ್ನಿಸುತ್ತಿದ್ದಾರೆ; ಆದರೆ ಹೆಚ್ಚು ಸಫಲತೆಯನ್ನೇನೂ ಗಳಿಸಿಲ್ಲ. ಹೋದ ವರ್ಷ ವಾಣಿಜ್ಯ ಮಂತ್ರಿಗಳಾಗಿದ್ದ ಅರುಣ್ ನೆಹರು ಒಂದು ಚಕಿತಗೊಳಿಸುವ ಸಂಗತಿಯನ್ನು ಹೊರಗೆಡವಿದರು. ಯಾವುದೋ ಒಂದು ಮಾಲನ್ನು ರಫ್ತು ಮಾಡಲು ಬೇಕಾದ ಪರ್ಮಿಟ್ಟಿಗೆ ಅರ್ಜಿ ಸಲ್ಲಿಸುವಾಗ ಅದರೊಡನೆ ಇಪ್ಪತ್ತಾರು ನಮೂನೆ (Form)ಗಳನ್ನು ಲಗತ್ತಿಸಬೇಕಾಗಿತ್ತಂತೆ. ನೆಹರು ಸಂಬಂಧಿಸಿದ ಅಧಿಕಾರಿಗಳನ್ನು ಕರೆದು ಪ್ರಣಾಲಿಯನ್ನು ಸರಳೀಕರಿಸಿ ಎಂದಾಗ ಮೊದಲು ಯಾರು ಇಪ್ಪತ್ತಾರು ನಮೂನೆಗಳನ್ನು ನಿಗದಿ ಮಾಡಿದ್ದರೋ ಅವರೇ ಅವಶ್ಯಕತೆಯನ್ನು ಕೇವಲ ಎರಡಕ್ಕೆ ಸೀಮಿತಗೊಳಿಸಿದರಂತೆ! ಅರುಣ್ ನೆಹರು ಮಂತ್ರಿಮಂಡಲದಿಂದ ಹೊರಗಾದ ಮೇಲೆ ಪುನಃ ಇಪ್ಪತ್ತಾರು ನಮೂನೆಗಳ ನಿಯಮ ವಾಪಸು ಬಂದಿದ್ದರೆ ಆಶ್ಚರ್ಯವೇನಿಲ್ಲ.

ಕಾಂಗ್ರೆಸ್ ನಾಯಕ, ಪೂರ್ವ ಮಂತ್ರಿ ವಿ.ಎನ್.ಗಾಡ್ಗಿಲ್‌ರವರು ಹೇಳಿದ ಒಂದು ಸಂಗತಿ ಬಹಳ ರೋಚಕವಾಗಿದೆ. ಅದು ನಡೆದದ್ದು ಬಹಳ ಹಿಂದೆ ಅವರ ತಂದೆ ಎನ್.ವಿ.ಗಾಡ್ಗಿಲರು ಪಂಜಾಬಿನ ರಾಜ್ಯಪಾಲರಾಗಿದ್ದ ಸಮಯದಲ್ಲಿ. ಮಗ ಗಾಡ್ಗಿಲರು ಇಂಗ್ಲೆಂಡಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಒಮ್ಮೆ ರಾಜಭವನದಲ್ಲಿ ತಂದೆಯೊಡನೆ ಕೆಲ ಸಮಯ ಕಳೆದರು. ಆಗ ಪ್ರತಿದಿನ ಬೆಳಿಗ್ಗೆ ಮುಖ್ಯ ಅಡುಗೆಯವನು ಬಂದು ಇವರನ್ನು ಆ ದಿನದ ''ಮೆನು'' ಏನಿರಬೇಕು ಎಂದು ಕೇಳಿ ಬರೆದುಕೊಂಡು ಅದರಂತೆ ಅಡುಗೆ ಮಾಡುತ್ತಿದ್ದನಂತೆ. ಗಾಡ್ಗಿಲರಿಗೆ ಏನೋ ಸಂದೇಹ ಬಂದು ಪ್ರತಿದಿನ ನನ್ನನ್ನೇ ಏಕೆ ಕೇಳುತ್ತೀ ಎಂದು ಅವನನ್ನು ಪ್ರಶ್ನಿಸಿದರಂತೆ. ಅದಕ್ಕೆ ಅವನ ಉತ್ತರ ಹೀಗಿತ್ತು. ''ಸರ್, ಗೌರ್ನರರ ಹಿರಿಯ ಮಗನನ್ನು ಕೇಳಿ ಅವರ ಇಷ್ಟಾನುಸಾರ ಮೆನು ತಯಾರಿಸಬೇಕು ಎನ್ನುವ ಒಂದು ನಿಯಮವಿದೆ. ಅದಕ್ಕೋಸ್ಕರವೇ ನಾನು ತಮ್ಮನ್ನು ಕೇಳುವುದು'' ಇದನ್ನು ಕೇಳಿ ಗಾಡ್ಗಿಲರಿಗೆ ಬಹಳ ಆಶ್ಚರ್ಯವಾಯಿತು. ಈ ಕಾನೂನಿನ ಆಧಾರವೇನು ಎಂದು ತಿಳಿಯಲು ರಾಜಭವನದ ರೆಕಾರ್ಡುಗಳನ್ನು ತಿರುವಿ ಹಾಕಿದಾಗ ಅವರಿಗೆ ತಿಳಿದು ಬಂದ ಸಂಗತಿ ಹೀಗಿತ್ತು. ಹಿಂದೆ ಒಬ್ಬ ಬ್ರಿಟಿಷ್ ಗೌರ್ನರರ ಕಾಲದಲ್ಲಿ ಅವರ ಹಿರಿಯ ಮಗ ಅಲ್ಲಿ ತಯಾರಾಗುತ್ತಿದ್ದ ಅಡುಗೆಯ ಬಗ್ಗೆ ಅಸಮಾಧಾನ ಸೂಚಿಸಿದ್ದನಂತೆ. ಇದಕ್ಕೆ ಪರಿಹಾರವಾಗಿ ಪ್ರತಿದಿನವೂ ಬಟ್ಲರನು ತಮ್ಮ ಹಿರಿಯ ಮಗನ ಸಲಹೆಯನ್ನು ಪಡೆದ ನಂತರವೇ ಆ ದಿನದ ಭೋಜನ ತಯಾರಿಸಬೇಕು ಎಂದು ಗೌರ್ನರರು ಆದೇಶವಿತ್ತಿದ್ದರು. ಬ್ರಿಟಿಷರು ಭಾರತವನ್ನು ಬಿಟ್ಟ ಮೇಲೂ ಪಂಜಾಬಿನ ರಾಜಭವನ ಆ ಆದೇಶದ ಕುರುಡುಪಾಲನೆ ನಡೆಸುತ್ತಿತ್ತು.

ಇಂತಹ ಎಷ್ಟೋ ನಿದರ್ಶನಗಳನ್ನು ಎಲ್ಲ ಕ್ಷೇತ್ರಗಳಲ್ಲೂ, ಎಲ್ಲ ಹಂತಗಳಲ್ಲೂ ನೋಡಬಹುದು. ಸೀಮಿತ ಕಾಲಕ್ಕೆ, ಸೀಮಿತ ಉದ್ದೇಶಗಳಿಗೆ ಅನ್ವಯಿಸುವ ಎಷ್ಟೋ ಕಾನೂನು ಕಟ್ಟಲೆಗಳು ಶಾಶ್ವತವಾಗಿ ಉಳಿದು ಬಿಡುತ್ತವೆ. ಯಾರೂ ಅವುಗಳನ್ನು ಕಾಲಕಾಲಕ್ಕೆ ಪರಾಮರ್ಶಿಸುವ ಗೋಜಿಗೆ ಹೋಗುವುದಿಲ್ಲ. ಅಲ್ಲದೆ ನಮ್ಮ ದೇಶದಲ್ಲಿರುವಷ್ಟು ಕಾನೂನುಗಳು ಇನ್ನಾವ ದೇಶದಲ್ಲೂ ಇಲ್ಲವೆನ್ನಬಹುದು. ನಮ್ಮ ಸಂವಿಧಾನವು ಪ್ರಪಂಚದಲ್ಲೇ ಅತ್ಯಂತ ಬೃಹತ್ ಗಾತ್ರದ ಸಂವಿಧಾನವಾಗಿದೆಯೆನ್ನುವುದನ್ನು ಇಲ್ಲಿ ನೆನೆಸಬಹುದು. ಎಷ್ಟೋ ಕಾನೂನುಗಳಲ್ಲಿ ವಿರೋಧಾಭಾಸಗಳಿದ್ದರೂ, ಆ ಕಾನೂನುಗಳ ಅವಶ್ಯಕತೆಯಿಲ್ಲದಿದ್ದರೂ ಒಂದು ರೀತಿಯ ವಿಲಕ್ಷಣ ಅಭಿಮಾನದಿಂದ ಅವನ್ನು ಉಳಿಸಿಕೊಳ್ಳುತ್ತೇವೆ. ನಾವೆಷ್ಟು ಕಾನೂನು ಪ್ರಿಯರೆಂದರೆ, ನಮ್ಮ ದೇಶದಲ್ಲಿ ಕಾನೂನು, ನಿಯಮಗಳ ವಿಶಾಲ ಅರಣ್ಯಗಳನ್ನೇ ನಿರ್ಮಿಸಿದ್ದೇವೆ. ಅನವಶ್ಯಕ, ಅವ್ಯವಹಾರಿಕ ನಿಯಮ ಕಾನೂನುಗಳಿಂದಾಗುವ ಬವಣೆ, ಹಿಂಜರಿಕೆ, ಹಾನಿ ಇವೆಲ್ಲವೂ ನಮ್ಮ ಕರ್ಮಫಲವೋ, ಬ್ರಹ್ಮ ಬರೆಹವೋ ಎಂಬಂತೆ ಅನುಭವಿಸುತ್ತೇವೆ.

ಸರಕಾರಿ ನೌಕರ ಶಾಹಿಯೊಳಗಿರುವ ತನ್ನದೇ

ಆದ ಜಾತಿ ಪದ್ಧತಿ, ಕಾನೂನು ಕಟ್ಟಳೆಗಳು ಕೆಂಪು ಪಟ್ಟಿಯ ಇನ್ನೊಂದು ಮುಖ. ನಮ್ಮ ಸಮಾಜದಲ್ಲಿರುವಂತೆಯೇ ಆಡಳಿತರಂಗದಲ್ಲೂ ವರ್ಣಾಶ್ರಮ ಧರ್ಮಕ್ಕನುಗುಣವಾಗಿ ಜಾತಿ ಭೇದ, ಪ್ರಭೇದಗಳಿವೆ. ಒಂದೇ ಸಿವಿಲ್ ಸೇವಾ ಚಯನ ಪರೀಕ್ಷೆಯ ಮೂಲಕ ಎಲ್ಲ ಇಲಾಖೆಯ ಉಚ್ಚ ಅಧಿಕಾರಿಗಳು ನಿಯಮಿಸಲ್ಪಡುತ್ತಾರಾದರೂ ಒಂದು ವಿಶಿಷ್ಟ ವರ್ಗದ ಅಧಿಕಾರಿಗಳು ಇತರ ಎಲ್ಲ ವರ್ಗದವರಿಗಿಂತ ಸರ್ವೋತ್ತಮರೆಂದೂ, ಉಚ್ಚ ಕುಲದವರೆಂದೂ ಪರಿಗಣಿಸಲ್ಪಟ್ಟಿದ್ದಾರೆ. ಅವರ ಸಂಬಳ ಸಾರಿಗೆಗಳು, ವ್ಯವಹಾರ, ನೀತಿ ನಿಯಮಗಳೂ ಹಾಗೆಯೇ ಭಿನ್ನ. ಅವರು ಮಾಡಿದ್ದೇ ಕಾನೂನು, ನುಡಿದದ್ದೇ ವೇದವಾಕ್ಯ. ಮಂತ್ರಿಗಳೂ ಕೂಡ ಈ ವರ್ಗಕ್ಕೆ ಸೂಕ್ತ ಗೌರವ, ಕಾಣಿಕೆಗಳನ್ನು ಸಲ್ಲಿಸಬೇಕು. ಇದೇ ರೀತಿ ಪ್ರತ್ಯೇಕ ವರ್ಗಕ್ಕೂ ತನ್ನದೇ ಆದ ನಿರ್ದಿಷ್ಟ ಸ್ಥಾನ ಮಾನಗಳಿವೆ. ಅದಕ್ಕಿಂತ ಕೆಳವರ್ಗಕ್ಕೆ ಸೇರಿದ ಅಧಿಕಾರಿಗಳು ಆ ವರ್ಗದವರಿಗೆ ತಲೆ ಬಾಗಬೇಕು. ಒಂದು ವರ್ಗಕ್ಕೆ ಸೇರಿದ ಅಧಿಕಾರಿಗಳು ಇತರ ''ಕೆಳ ವರ್ಗದ'' ಅಧಿಕಾರಿಗಳ ಕಛೇರಿಗಳನ್ನು ಯಾವ ಕಾರಣಕ್ಕೂ ಸಂದರ್ಶಿಸುವುದಿಲ್ಲ. ಆ 'ಕೆಳವರ್ಗದ' ಅಧಿಕಾರಿಗಳು ಎಷ್ಟೇ ವರಿಷ್ಠರಾಗಿದ್ದರೂ ಸಂದರ್ಭ ಎಷ್ಟೇ ಜರೂರಾಗಿದ್ದರೂ ಅವರೊಡನೆ ಪತ್ರವ್ಯವಹಾರವೊಂದನ್ನುಳಿದು ನೇರ ಸಂಪರ್ಕ ಸಲ್ಲದು. ಕೆಲವು ಬಾರಿ ಪತ್ರವ್ಯವಹಾರವೂ ನಿಷಿದ್ಧ. ಈ ಕಟ್ಟಳೆಗೆ ನನ್ನ ಸಹೋದ್ಯೋಗಿಯೊಬ್ಬರ ಅನುಭವ ಒಳ್ಳೆಯ ಉದಾಹರಣೆ. ಅವರು ಒಂದು ರಾಜ್ಯದ ರಾಜಧಾನಿಯಲ್ಲಿ ಕೇಂದ್ರಸರ್ಕಾರದ ಒಂದು ಇಲಾಖೆಯ ಪ್ರಮುಖರಾಗಿ ಕೆಲಸ ಮಾಡುತ್ತಿದ್ದಾಗ ನಡೆದ ಸಂಗತಿ. ಒಂದು ದಿನ ಅಕಸ್ಮಾತ್, ಅಪವಾದವಾಗಿ ಎನ್ನಬಹುದು, ''ಮೇಲು ವರ್ಗದ'' ಒಬ್ಬ ಅಧಿಕಾರಿ ಅವರನ್ನು ನೋಡಲು ಬಂದ. ಅವನು ಸೇವಾ ವರಿಷ್ಠತೆಯಲ್ಲಿ ಇವರಿಗಿಂತ ಕಿರಿಯ (Junior). ತನ್ನ ಇಲಾಖೆಗೆ ಸಂಬಂಧಿಸಿದ ಯಾವುದೋ ಒಂದು ವಿಷಯವನ್ನು ಚರ್ಚಿಸಲು ಬಂದಿದ್ದ. ಮಾತಿನ ಮಧ್ಯೆ ನನ್ನ ಸಹೋದ್ಯೋಗಿ ಹೇಳಿದರು. ''ನೋಡಿ, ನಾನು ಒಂದು ಮುಖ್ಯವಾದ ವಿಷಯದಲ್ಲಿ ನಿಮಗೆ 2-3 ಡಿ.ಒ. (Demi-Official) ಪತ್ರಗಳನ್ನು ಬರೆದಿದ್ದೆ. ನಿಮ್ಮಿಂದ ಅವಕ್ಕೆ



ಜವಾಬು ಬಂದಿಲ್ಲ'' ಆತ ನಿರ್ದಾಕ್ಷಿಣ್ಯವಾಗಿ, ನನಗೆ ಅಂತಹ ಪತ್ರಗಳಿಗೆ ಜವಾಬು ಕೊಡಲು ಸಮಯವಿಲ್ಲ ಎಂದ. ಇವರು ಪ್ರಶ್ನಿಸಿದರು. ''ನಾನು ಕೇಂದ್ರ ಸರ್ಕಾರದ ಒಂದು ಇಲಾಖೆಯ ಮುಖ್ಯಸ್ಥ. ನಿಮಗೆ ನನ್ನಂತಹವರಿಂದ ದಿನಕ್ಕೆ ಎಷ್ಟು ಡಿ.ಓ. ಪತ್ರಗಳು ಬರಬಹುದು? ನೀವು ಜವಾಬು ಕೊಡಲಾಗದಷ್ಟೆ?'' ಆತ ನಿರ್ಲಿಪ್ತನಾಗಿ ಉತ್ತರಿಸಿದ; ''ನೋಡಿ, ಶ್ರೀ ....... ರವರೆ. ನಾನು ಕೇವಲ ಮುಖ್ಯ ಮಂತ್ರಿಗಳ ಮತ್ತು ಮುಖ್ಯ ಸಚಿವರ ಪತ್ರಗಳಿಗೆ ಮಾತ್ರ ಜವಾಬು ಕೊಡುತ್ತೇನೆ''.

ಇಂತಹ ಪರಿವೇಶದಲ್ಲಿ ವಿವಿಧ ಇಲಾಖೆಗಳ ಪರಸ್ಪರ ಸಹಕಾರ, ಸುಗಮ ಆಡಳಿತ, ಜನ ಕಲ್ಯಾಣ, ದೇಶದ ಪ್ರಗತಿ ಇವೆಲ್ಲಾ ಗೌಣ. ''ಮೇಲು ವರ್ಗದ'' ಅಧಿಕಾರಿಗಳ ಸ್ಥಾನ, ಮಾನ, ಮರ್ಯಾದೆಗಳನ್ನು ಕಾಯ್ದಿಡುವುದು ಆಡಳಿತ ಯಂತ್ರದ ಒಂದು ಮುಖ್ಯ ಉದ್ದೇಶವೆನಿಸಿದೆ. ಅಲ್ಲದೆ ವಿಳಂಬ ನೀತಿ, ಜವಾಬುದಾರಿಯನ್ನು ಇತರರ ಮೇಲೆ ಹೊರಿಸುವುದು, ಎಲ್ಲ ತಪ್ಪಿಗೂ ಬೇರೊಬ್ಬರ ಕಡೆ ಬೆರಳು ಮಾಡುವುದು ಈ ಪ್ರವೃತ್ತಿಗಳು ಬೇರೂರುವುದು ಸಹಜ.

ಕೆಲವು ವಿದೇಶಿ ಸರ್ಕಾರಗಳು ಮತ್ತು ಜನತೆ ಕೆಂಪು ಪಟ್ಟಿಯ ಕಟ್ಟಾ ವಿರೋಧಿಗಳು. ಆ ದೇಶಗಳಲ್ಲಿ ಕೆಂಪು ಪಟ್ಟಿಯನ್ನು ಕುಂಠಿತಗೊಳಿಸುವ, ನಾಶಪಡಿಸುವ ಪ್ರಯತ್ನಗಳು ನಡೆಯುತ್ತಲೇ ಇರುತ್ತವೆ. ಅಂತಹ ಸಮಾಚಾರಗಳನ್ನು ಓದಿದ ಮತ್ತು ಆ ದೇಶಗಳನ್ನು ಸಂದರ್ಶಿಸಿದ ಕೆಲವು ಮಂದಿ ಭಾರತೀಯರೂ ಕೆಂಪು ಪಟ್ಟಿಯ ಬಗೆಗೆ ದ್ವೇಷ ಭಾವನೆ ತಳೆಯುತ್ತಿದ್ದಾರೆ. ಅಂತಹವರ ಅಭಿಪ್ರಾಯಗಳ ಬಗ್ಗೆ ನನ್ನ ಸಹೋದ್ಯೋಗಿಯೊಬ್ಬರೊಡನೆ ಒಮ್ಮೆ ಮಾತನಾಡುತ್ತಿದ್ದೆ. ನಾನೆಂದೆ ''ಅಮೆರಿಕ, ಜಪಾನ್, ಜರ್ಮನಿ, ಸ್ವಿಟ್ಸರ್‌ಲೆಂಡ್ ಮುಂತಾದ ದೇಶಗಳಲ್ಲಿ ಕೆಂಪು ಪಟ್ಟಿಯ ಹಾವಳಿಯಿಲ್ಲದೆ ಅಲ್ಲಿನ ನಾಗರಿಕರು ಬಹಳ ಸುಖಿ ಜೀವನ ನಡೆಸುತ್ತಿದ್ದಾರಂತೆ. ಮನೆಗೆ ಟೆಲಿಫೋನ್ ಬೇಕಾದರೆ, ಸಂಬಂಧಪಟ್ಟ ಕಂಪೆನಿಗೆ ಫೋನ್ ಮಾಡಿದರೆ 2 ಘಂಟೆಯೊಳಗೆ ಹಾಕುತ್ತಾರಂತೆ. ಏನು ಸೌಕರ್ಯ ಬೇಕಾದರೂ ಮನೆಯಲ್ಲಿ ಕುಳಿತೇ ಟೆಲಿಫೋನಿನ ಮೂಲಕ ಒದಗಿಸಿಕೊಳ್ಳಬಹುದಂತೆ. ನೀರಿನ ಅಭಾವ, ವಿದ್ಯುತ್ ಕಡಿತ, ಎಲ್ಲಕ್ಕೂ 'ಫಾರಂ' ಭರಿಸುವ, ಕ್ಯೂ ನಿಲ್ಲುವ ಬವಣೆ, ಇವು ಯಾವುದೂ ಇಲ್ಲವಂತೆ'' ಇದಕ್ಕೆ ನನ್ನ ಸಹೋದ್ಯೋಗಿಯ ಪ್ರತಿಕ್ರಿಯೆ ಬಹಳ ಮಾರ್ಮಿಕವಾಗಿತ್ತು; ಕಣ್ಣು ತೆರೆಸುವಂತಿತ್ತು. ''ನೋಡಿ ಸರ್, ನಮಗೆ ಬೇಕಾದ ಎಲ್ಲ ಸವಲತ್ತುಗಳೂ ಯಾವ ಜಂಜಾಟ, ಬವಣೆಯೂ ಇಲ್ಲದೆ ತಕ್ಷಣ ದೊರಕುವಂತಿದ್ದರೆ ಅಂತಹ ಜೀವನದಲ್ಲಿ ಸ್ವಾರಸ್ಯವೇ ಇಲ್ಲ. ಆ ವಿದೇಶಗಳ ಜನರಿಗೆ ನಿಜವಾದ ಸುಖದ ಅರಿವೇ ಇಲ್ಲ'' ಎಂದರು. ನಾನು ಗೊಂದಲಕ್ಕೀಡಾಗಿ ಅದು ಹೇಗೆ ಎಂದೆ. ಅವರು ತಮ್ಮ ವ್ಯಾಖ್ಯಾನವನ್ನು ಮುಂದುವರಿಸಿದರು. ''ನಮಗೆ ಎಲ್ಲ ಅನುಕೂಲತೆಗಳೂ ಕೂತಲ್ಲಿ ಸಿಕ್ಕಿದರೆ, ನಾವು ಏನೂ ಕಷ್ಟಪಡದೆ ಎಲ್ಲ ಸೌಲಭ್ಯಗಳೂ ದೊರಕುವಂತಿದ್ದರೆ ನಾವು ಕಾಲ ಕಳೆಯುವುದು ಹೇಗೆ? ನಮ್ಮ ನೌಕರಶಾಹಿಗೆ ಹೆಚ್ಚು ಕೆಲಸವಿಲ್ಲದೆ ಅದು ಕ್ರಮೇಣ ನಶಿಸಬಹುದು. ಪಾರ್ಕಿನ್ಸನ್ನನ ಸೂತ್ರವೇ ತಲೆ ಕೆಳಗಾಗುವುದಿಲ್ಲವೇ? ಅಲ್ಲದೆ, ಅಂತಹ ಸನ್ನಿವೇಶದಲ್ಲಿ ಜನತೆಗೆ ನಮ್ಮ ರಾಜಕಾರಣಿಗಳೇನು ಆಶ್ವಾಸನೆಗಳನ್ನು ಕೊಡಬಲ್ಲರು! ಈಗ ನೋಡಿ, ನಮ್ಮ ದೇಶದಲ್ಲಿ ಪ್ರತಿದಿನ, ಪ್ರತಿಯೊಂದು ಕ್ಷೇತ್ರದಲ್ಲೂ, ಪ್ರತಿಯೊಂದು ಬಾಬಿನಲ್ಲೂ ನಾವು ಕಷ್ಟಪಟ್ಟು, ಹೆಣಗಿ, ಹೋರಾಡಿ ನಮ್ಮ ಇಷ್ಟಾರ್ಥಗಳನ್ನು ಸಾಧಿಸಿಕೊಳ್ಳುತ್ತೇವೆ. ಇದರಲ್ಲೇ ಇರುವುದು ನಮ್ಮ ನಿಜವಾದ ಆತ್ಮ ತೃಪ್ತಿ, ಸುಖ, ಆನಂದ'' ಎಂದರು. ಆ ಕ್ಷಣ ನನಗೆ ನಮ್ಮ ದೇಶದಲ್ಲಿ ಕೆಂಪು ಪಟ್ಟಿಯ ಪ್ರಾಬಲ್ಯಕ್ಕೆ ಮತ್ತು ಅದರ ಜನಪ್ರಿಯತೆಗೆ ನಿಜವಾದ ಕಾರಣದ ಅರಿವಾಯಿತು! ನಮ್ರತೆಯಿಂದ ನನ್ನ ಸಹೋದ್ಯೋಗಿಗೆ ವಂದಿಸಿದೆ. ನಿಜವಾಗಿಯೂ ಕೆಂಪು ಪಟ್ಟಿಯು ನಮ್ಮ ಪುರಾತನ ಸಂಸ್ಕೃತಿಯ ಅವಿಭಾಜ್ಯ ಅಂಗವಲ್ಲವೆ?

# ಬಹು ಉಪಯೋಗಿ ಲವಂಗ !

—ಶ್ರೀ ಹರ್ಷ—

ಪ್ರಾಚೀನ ಕಾಲದಿಂದಲೂ ಸಾಂಬಾರ ಪದಾರ್ಥವಾಗಿ ಲವಂಗಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇದೆ. ಇಂದು ಔಷಧಿಯಾಗಿಯೂ ಇದು ಅತ್ಯಮೂಲ್ಯವಾಗಿವೆ. ಟೂತ್‌ಪೇಸ್ಟ್, ವಾತರೋಗದ ಔಷಧ ತಯಾರಿಕೆಯಲ್ಲಿ ಲವಂಗದ ಎಣ್ಣೆನ್ನು ಬಳಸಲಾಗುತ್ತಿದೆ.

ಲವಂಗ ಬೆಳೆಯ ಮೂಲಸ್ಥಾನ ಮೊಲಕ್ಕಸ್. ಇದರ ಪ್ರಾಮುಖ್ಯತೆಯನ್ನು ಮೊಟ್ಟ ಮೊದಲಿಗೆ ಕಂಡು ಹಿಡಿದ ಖ್ಯಾತಿ ಚೀನಿಯರದ್ದು. ಲವಂಗದ ಬಳಕೆ, ಉಪಯೋಗ ಹೆಚ್ಚಿದಂತೆ ಈ ಬೆಳೆ ಮೊಲಕ್ಕಸ್ ದ್ವೀಪಗಳಿಂದ ಹೊರಕ್ಕೆ ಹೆಜ್ಜೆ ಇಕ್ಕಿತು.

1498ರಲ್ಲಿ ವಾಸ್ಕೋ-ಡಿ-ಗಾಮ ಕ್ಯಾಲಿಕಟ್ ಸೇರಿದ ನಂತರ ಲಿಸ್‌ಬನ್ ನಗರ ಲವಂಗ ವ್ಯಾಪಾರದ ಪ್ರಮುಖ ವಾಣಿಜ್ಯ ಕೇಂದ್ರವಾಯಿತು. 1602ರಲ್ಲಿ ಡಚ್ಚರು ತಮ್ಮ ಸಾಮ್ರಾಜ್ಯವನ್ನು ಲವಂಗ ಬೆಳೆಯುವ ದ್ವೀಪಗಳ ಮೇಲೆ ಸ್ಥಾಪಿಸಿದ ನಂತರ ತಮ್ಮ ವಶದಲ್ಲಿರುವ ಅಂಬೋಯಾನಾವನ್ನು ಬಿಟ್ಟು ಬೇರೆ ಯಾವ ಪ್ರದೇಶದಲ್ಲೂ ಲವಂಗ ಬೆಳೆಯದಂತೆ ಸುಗ್ರೀವಾಜ್ಞೆ ಹೊರಡಿಸಿದರು.

ಮುಂದೆ 1818ರಲ್ಲಿ ಹರಮೆಲಿಬಸ್ ಸಲಾಎಂಬಾತ ಜಾಂಜಿಬಾರ್‌ಗೆ ಲವಂಗದ ಸಸಿಗಳನ್ನು ತಂದು ಬೆಳೆಸಿದ. ಅಲ್ಲಿಂದ ಮುಂದೆ ಲವಂಗ ಆ ದೇಶದ ಪ್ರಮುಖ ವಾಣಿಜ್ಯ ಬೆಳೆಯಾಯಿತು. ಈಗಲೂ ಕೂಡಾ ಪ್ರಪಂಚದ ಒಟ್ಟು ಲವಂಗ ಉತ್ಪಾದನೆಯಲ್ಲಿ ಶೇಕಡಾ 90ರಷ್ಟು ಪಾಲು ಈ ದೇಶದ್ದೇ.

ಭಾರತಕ್ಕೆ ಲವಂಗವನ್ನು ತಂದು ಬೆಳೆಸಿದವರು ಈಸ್ಟ್ ಇಂಡಿಯಾ ಕಂಪೆನಿಯವರು. ತಮಿಳುನಾಡಿನ ಕೋರ್ಟ್ ಅಲ್ಲಾಮಾನ್ ಸಾಂಬಾರ ಪದಾರ್ಥಗಳ ತೋಟದಲ್ಲಿ ಮೊದಲ ಬಾರಿಗೆ ಈ ಬೆಳೆಯನ್ನು ಬೆಳೆಸಲಾಯಿತು.

ಇಂದು ಅತಿ ಹೆಚ್ಚು ಲವಂಗ ಉತ್ಪಾದಿಸುವ ಪ್ರದೇಶಗಳೆಂದರೆ ಜಾಂಜಿಬಾರ್ ದ್ವೀಪ ಸಮೂಗಳು. ಎರಡನೇಯ ಸ್ಥಾನ ಮಡಗಾಸ್ಕರ್ ದ್ವೀಪದ್ದು.

ಲವಂಗದ ಮರ ನಿತ್ಯ ಹರಿದ್ವರ್ಣದ ಸಸ್ಯ. 12 ಮೀ. ಎತ್ತರದವರೆಗೂ ಬೆಳೆಯಬಲ್ಲದು. ಬೆಳವಣಿಗೆ ನೇರ. ತೊಗಟೆ ಬೂದಿ ಬಣ್ಣದ್ದು. ಎಲೆಗಳಿಗೂ ಸುವಾಸನೆ ಇರುತ್ತದೆ. ಲವಂಗದ ಮರಗಳಲ್ಲಿ ಹಾವುಗಳಿರುವುದು ಸಾಮಾನ್ಯ.

ದೇಶದ ಹವಾಗುಣಕ್ಕೆ ತಕ್ಕಂತೆ ಲವಂಗವೂ

ಬೇರೆ ಬೇರೆ ಗುಣಧರ್ಮಗಳನ್ನು ಹೊಂದಿರುತ್ತದೆ. ಎಲ್ಲ ಬೆಳೆಗಳಿಗೂ ಬರುವಂತೆ ಲವಂಗ ಗಿಡಗಳಿಗೂ ರೋಗಗಳು ಬರುತ್ತವೆ. ಮರಗಳ ಶೀಘ್ರ ಕ್ಷೀಣಿಸುವಿಕೆ ಜಾಂಜಿಬಾರ್ ಮತ್ತು ಇತರ ಲವಂಗ ಬೆಳೆ ಪ್ರದೇಶಗಳಲ್ಲಿ ಕಂಡು ಬರುವ ಸಾಮಾನ್ಯ ರೋಗ. ಈ ರೋಗ ತಗಲಿದ ಗಿಡಗಳಲ್ಲಿ ಎಲೆಗಳು ಉದುರುತ್ತವೆ. ಡೈಬ್ಯಾಕ್ ಮತ್ತು ಸಪುಲ ರಾಸ್ ಮೈಕಾಡಿಯಾ ಲವಂಗದ ಗಿಡಗಳನ್ನು ಕಾಡುವ ಇನ್ನೆರಡು ರೋಗಗಳು.

ಲವಂಗವನ್ನು ನಾಟಿ ಮಾಡಿದ 7ನೇ ವರ್ಷದಲ್ಲಿ ಫಸಲು ಬರಲು ಆರಂಭವಾಗುತ್ತದೆ. ಆದರೆ 15ನೇ ವರ್ಷದಲ್ಲಿ ಪೂರ್ಣ ಪ್ರಮಾಣದ ಫಸಲನ್ನು ನಿರೀಕ್ಷಿಸಬಹುದು. ಇದರ ವಿಶೇಷವೆಂದರೆ ಲವಂಗದ ಗಿಡಗಳು ಫಲ ನೀಡುವುದು ಎರಡು ವರ್ಷಕ್ಕೊಮ್ಮೆ. (ಇದಕ್ಕೆ ಅಪವಾದವೂ ಇಲ್ಲವೆಂದಲ್ಲ) ಮೈದಾನ ಪ್ರದೇಶದಲ್ಲಿಯ ಗಿಡಗಳು ಸೆಪ್ಟೆಂಬರ್-ಅಕ್ಟೋಬರ್ ತಿಂಗಳಲ್ಲಿ ಹೂ ಬಿಟ್ಟರೆ ಮಲೆನಾಡು ಪ್ರದೇಶದಲ್ಲಿ ಡಿಸೆಂಬರ್-ಜನವರಿಯಲ್ಲಿ ಹೂ ಬಿಡುತ್ತವೆ. ಲವಂಗದ ಮರಗಳ ಆಯುಷ್ಯ 75 ರಿಂದ 100 ವರ್ಷ. ಪೇಟೆಯಲ್ಲಿ ದೊರೆಯುವ ಲವಂಗ ಒಣಗಿದ ಮೊಗ್ಗು.

ಸಾಮಾನ್ಯವಾಗಿ ಲವಂಗವನ್ನು ಮೂರು ದರ್ಜೆಗಳಾಗಿ ವಿಂಗಡಿಸುತ್ತಾರೆ. ಪೆನಾಂಗ್ ಲವಂಗ, ಅಂಬೋಯಾನ ಲವಂಗ ಮತ್ತು ಜಾಂಜಿಬಾರ್ ಲವಂಗ.

**ಉಪಯೋಗ :**

ಲವಂಗ ಬಹುಪಯೋಗಿ. ಅಡಿಗೆಯಿಂದ ಹಿಡಿದು ಔಷಧಿ ತಯಾರಿಕೆಯವರೆಗೂ ಇದರ ಬಳಕೆ ಇದೆ. ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ಇದರ ಬಳಕೆ ಹೆಚ್ಚು. ಜಾವ ಮತ್ತು ಚೀನಾ ದೇಶಗಳಲ್ಲಿ ಸಿಗರೇಟು ತಯಾರಿಕೆಯಲ್ಲೂ ಇದು ಬಳಕೆಯಾಗುತ್ತಿದೆ.

**ತೈಲ :**

ಲವಂಗದ ತೈಲ ತಿಳಿ ಹಳದಿ ಬಣ್ಣದ್ದು. ಗಾಳಿಯ ಸಂಪರ್ಕಕ್ಕೆ ಬಂದಾಗ ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಇದರಲ್ಲಿ 85-90 ಶೇಕಡಾರಷ್ಟು ಯುಜಿನಾಲ್ ಇರುತ್ತದೆ. ಇದು ಸುಗಂಧ ದ್ರವ್ಯ ತಯಾರಿಕೆಗೆ ಅತಿ ಅಗತ್ಯ.

ಚಾಕೋಲೇಟ್ ಮತ್ತು ಕೋಕೋ ಮೊದಲಾದವುಗಳಿಗೆ ರುಚಿ ಹಾಗೂ ಸುವಾಸನೆ ಬರುವಂತೆ ಮಾಡಲು ಯುಜಿನಾಲ್ ಮತ್ತು ಆಲ್ಕೋಹಾಲ್ ಸೇರಿಸಿ ಕುದಿಸಿ ಅದಕ್ಕೆ ಕಾಸ್ಟಿಕ್ ಪೊಟ್ಯಾಷ್ ಹಾಕಿ ವೆನಿಲಿನ್ ತಯಾರಿಸಿ ಅದನ್ನು ಉಪಯೋಗಿಸುತ್ತಾರೆ. ●

## ಸಪ್ತ ಸಾಮಾಜಿಕ ಸೂತ್ರಗಳು

1. ಹಟವಾದಿಯೊಡನೆ ಹೆಚ್ಚು ಚರ್ಚಿಸಿ ಉಪಯೋಗವಿಲ್ಲ. ಅದಕ್ಕಿಂತ ಮಾತಿನ ವಿಷಯ ಬದಲಾಯಿಸುವುದೊಳ್ಳೆಯದು.
2. ಬೇರೆ ಬೇರೆ ಜನರ ವಿಚಾರಗಳು ಬೇರೆ ಬೇರೆಯಾಗಿರುತ್ತವೆಂದು ನಾವು ಸದಾ ನೆನಪಿನಲ್ಲಿಡಬೇಕು.
3. ನಾವು ತಪ್ಪು ಮಾಡಿದಾಗ ನಮ್ಮ ತಪ್ಪನ್ನು ಒಪ್ಪಲು ಹಿಂಜರಿಯಬಾರದು.
4. ಸ್ವಂತ ವಿಷಯುಗಳನ್ನು ವಿನೋದ ದೃಷ್ಟಿಯಿಂದ ನೋಡುವ ಮನೋಭಾವ ಬೇಕು.
5. ಚಿಂತೆಯುಲ್ಲಿದ್ದಾಗ, ಅಸ್ವಸ್ಥರಿದ್ದಾಗ ಭಾವನೆಯ ಒತ್ತಡವನ್ನು ಸಾಧ್ಯವಾದಷ್ಟು ನಿಗ್ರಹಿಸಬೇಕು.
6. ಬೇರೆಯುವರು ಸಿಟ್ಟಿಗೆದ್ದಾಗ ನಾವು ಕ್ಷಮಿಸಲು ತಯಾರಾಗಬೇಕು. ಸಿಟ್ಟು ಮಾಡುವವನು ಸಿಟ್ಟಿಗೆ ಪಾತ್ರನಾಗಿರದೆ ಕರುಣೆಗೆ ಪಾತ್ರನಿರುವನು.
7. ಎಲ್ಲರನ್ನೂ ಪ್ರೀತಿಸಲು ಸಾಧ್ಯವಾಗದಿದ್ದರೂ ಅವರ ಬಗ್ಗೆ ಆಸ್ಥೆ ವಹಿಸಲು ಪ್ರಯತ್ನಿಸಬೇಕು.

(ಸಂಗ್ರಹ) **ಚಂದ್ರಶೇಖರ ಜೋಯ್ಸ**

# ಪಕ್ಷಿ ವಿಜ್ಞಾನಿ ಡಾ। ಹ್ಯೂಮ್

ಮುರಲೀಧರ ಕುಲಕರ್ಣಿ

ಭಾರತದ ಸುಪ್ರಸಿದ್ಧ ಪಕ್ಷಿ ವಿಜ್ಞಾನಿ ಸಲೀಂ ಅಲಿ ಹೆಸರನ್ನು ಅರಿಯದವರಾರು? ಪಕ್ಷಿಪ್ರಪಂಚದ ಅರಿವನ್ನು ಜನತೆಗೆ ಮಾಡಿಕೊಟ್ಟು ಅವರಲ್ಲಿ ಪ್ರಕೃತಿ ಪ್ರೇಮವನ್ನು ಬೆಳೆಸುವಲ್ಲಿ ಸಲೀಂ ಅಲಿಯವರ ಕೊಡುಗೆ ಅಪಾರ. ಆದರೆ ಸಲೀಂ ಅಲಿಯವರು ಪಕ್ಷಿಪ್ರಪಂಚವನ್ನು ಪ್ರವೇಶಿಸುವುದಕ್ಕೆ ಎಷ್ಟೋ ವರ್ಷಗಳ ಪೂರ್ವದಲ್ಲೇ ಭಾರತದ ಪಕ್ಷಿಸಂಕುಲವನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ ಪಕ್ಷಿವಿಜ್ಞಾನಕ್ಕಾಗಿಯೇ ಮೀಸಲಾದ ನಿಯತಕಾಲಿಕವೊಂದನ್ನು ಹೊರಡಿಸುತ್ತಿದ್ದ ವ್ಯಕ್ತಿಯ ಹೆಸರನ್ನು ಬಹುಶಃ ಅನೇಕ ಪ್ರಕೃತಿ ಪ್ರೇಮಿಗಳು ಅರಿತಿರಲಾರರು. ಆ ವ್ಯಕ್ತಿಯೇ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪಕರೆಂದು ಪ್ರಖ್ಯಾತರಾದ ಅಲೆನ್ ಆಕ್ಟೇವಿಯನ್ ಹ್ಯೂಮ್. ಹ್ಯೂಮ್‌ರ ಜೀವನದ ಈ ಇನ್ನೊಂದು ಮುಖ ಜನಸಾಮಾನ್ಯರಿಗೆ ಅಗೋಚರವಾಗಿಯೇ ಉಳಿದಿದೆ.

ತನ್ನ ತಾಯ್ನಾಡಿನಲ್ಲಿ ಐ.ಸಿ.ಎಸ್. ಪದವಿಯನ್ನು ಪಡೆದುಕೊಂಡ ಹ್ಯೂಮ್ 1849ರಲ್ಲಿ ಭಾರತಕ್ಕೆ ಬಂದರು. ಆಗ ಅವರಿಗಿನ್ನೂ ಕೇವಲ 21 ವರ್ಷ. ಅವರನ್ನು ಬ್ರಿಟಿಷ್ ಸರ್ಕಾರ ಉಪ್ಪಿನ ಆಯುಕ್ತರನ್ನಾಗಿ ('Commissioner of Salt') ನೇಮಿಸಿತು. ಈ ಹುದ್ದೆ ಹ್ಯೂಮರಿಗೆ ವ್ಯಾಪಕವಾದ ಪ್ರವಾಸ ಕೈಕೊಳ್ಳಲು ಅನುವು ನೀಡಿತು. ಈ ಅವಧಿಯಲ್ಲಿ ಅವರು ಕನ್ಯಾಕುಮಾರಿಯಿಂದ ಪೇಶಾವರದವರೆಗೆ ವ್ಯಾಪಕವಾದ ಪ್ರವಾಸ ಕೈಕೊಂಡು ಭಾರತದ ಅಪೂರ್ವ ಪಕ್ಷಿಸಂಕುಲದ ಬಗ್ಗೆ ಅಧ್ಯಯನ ನಡೆಸಿದರು. ತಮ್ಮ ಈ ಹವ್ಯಾಸವನ್ನು ಕೇವಲ ಪಕ್ಷಿವೀಕ್ಷಣೆಗಷ್ಟೇ ಸೀಮಿತಗೊಳಿಸದೆ ಪಕ್ಷಿಗಳ ಬಗ್ಗೆ ಮಾಹಿತಿ ಸಂಗ್ರಹಿಸಲು 50 ಜನ ಸ್ವಯಂಸೇವಕರನ್ನು ನಿಯಮಿಸಿದರು.

ತಾವು ಕಲೆ ಹಾಕಿದ ಮಾಹಿತಿ ಮತ್ತು ಸ್ವಯಂಸೇವಕರು ನೀಡಿದ ಮಾಹಿತಿಗಳ ಆಧಾರದ ಮೇಲೆ 'The birds of the empire' ಎಂಬ ಹೆಸರಿನ ಹಲವು ಸಂಪುಟಗಳನ್ನು ಪ್ರಕಟಿಸಿದರು. ಪಕ್ಷಿಗಳ ಬಗ್ಗೆ ತಾವು ನಡೆಸಿದ ಅಧ್ಯಯನದ ವಿವರಗಳನ್ನು ಪ್ರಕಟಿಸಲು ಮತ್ತು ಭಾರತದಲ್ಲಿರುವ ಇತರ ಪಕ್ಷಿಪ್ರೇಮಿಗಳೊಂದಿಗೆ ಸಂಪರ್ಕ ಬೆಳೆಸಲು 'Stray feathers' ಎಂಬ ಹೆಸರಿನ ನಿಯತಕಾಲಿಕವೊಂದನ್ನು 1872ರಲ್ಲಿ ಆರಂಭಿಸಿದರು. ಕಲಕತ್ತೆಯಿಂದ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಅವರು

ಭಾರತವನ್ನು ಬಿಟ್ಟು ಹೋದ ನಂತರವೂ ಪ್ರಕಟ ವಾಗುತ್ತಿತ್ತು. ಇದು ಭಾರತದಲ್ಲಿ ಹೊರಡಿಸ ಲಾದ ಪ್ರಪ್ರಥಮ ಪ್ರಕೃತಿ ವಿಜ್ಞಾನದ ಪತ್ರಿಕೆ ಯಾಗಿತ್ತು. ಈ ನಿಯತಕಾಲಿಕವೇ ಈಗ ಮುಂಬೈ ಯಿಂದ ಹೊರಡುವ Journal of the natural history society ಎಂಬ ಪತ್ರಿಕೆಗೆ ನಾಂದಿಯಾ ಯಿತು. ವಿಶೇಷವಾಗಿ ಈಶಾನ್ಯ ಭಾರತದಲ್ಲಿ ಕಂಡ ಅನೇಕ ಹೊಸ ಹೊಸ ಪಕ್ಷಿಗಳ ಬಗ್ಗೆ ಅವರು ತಮ್ಮ Stray feathers ಎಂಬ ನಿಯತಕಾಲಿಕ ದಲ್ಲಿ ವರದಿ ಮಾಡಿದರು.

ತಮ್ಮ ಬಿಡುವಿನ ವೇಳೆಯನ್ನು ಅವರು ಪಕ್ಷಿ ವೀಕ್ಷಣೆ ಮಾಡುವುದರಲ್ಲಿಯೂ ಅವುಗಳ ಮೊಟ್ಟೆ ಹಾಗೂ ಗೂಡುಗಳನ್ನು ಸಂಗ್ರಹಿಸುವುದ ರಲ್ಲಿಯೂ ಕಳೆಯುತ್ತಿದ್ದರು. ಭಾರತದಲ್ಲಿ ಅವರು ವಾಸಿಸಿದ 25 ವರ್ಷಗಳಲ್ಲಿ ಅವರು 63000 ಪಕ್ಷಿಗಳ ಗರಿಗಳನ್ನು 19000 ಬಗೆಯ ಮೊಟ್ಟೆಗಳನ್ನು ಸಂಗ್ರಹಿಸಿದರು. ಇದಕ್ಕಾಗಿ ಅವರು ವೆಚ್ಚ ಮಾಡಿದ ಹಣ 20 ಸಾವಿರ ಪೌಂಡು. ಈ ಎಲ್ಲಾ ವಸ್ತುಗಳನ್ನು ಅವರು ಸಿಮ್ಲಾದಲ್ಲಿರುವ ತಮ್ಮ ಸರ್ಕಾರಿ ನಿವಾಸದಲ್ಲಿ ಸಂಗ್ರಹಿಸಿಟ್ಟಿದ್ದರು. ಆಗಿನ ಕಾಲದಲ್ಲಿ ಅವರ ಈ ವೈಯಕ್ತಿಕ ಸಂಗ್ರಹ ಇಡೀ ವಿಶ್ವಾಖಂಡದಲ್ಲೇ ಅಪೂರ್ವವೆನಿಸಿತ್ತು. ತಮ್ಮ ಸಂಗ್ರಹ ಹಾಗೂ ಅಧ್ಯಯನದ ಆಧಾರದ ಮೇಲೆ ಅವರು 1873 ರಲ್ಲಿ 'Nests and eggs of Indian birds' ಎಂಬ ಹೊತ್ತಿಗೆಯನ್ನು ಪ್ರಕಟಿಸಿದರು. ಆರು ವರ್ಷಗಳ ತರುವಾಯ The Game birds of India ಎಂಬ ಹೊತ್ತಿಗೆಯನ್ನು ಮೂರು ಸಂಪುಟಗಳಲ್ಲಿ ಪ್ರಕಟಿ ಸಿದರು.

ತಮ್ಮ ಹವ್ಯಾಸಕ್ಕೆ ಹೆಚ್ಚಿನ ಸಮಯವನ್ನು ನೀಡುವ ಉದ್ದೇಶದಿಂದ ಹ್ಯೂಮ್‌ರವರು 1882 ರಲ್ಲಿ ಸ್ವಇಚ್ಛೆಯಿಂದ ನಿವೃತ್ತಿ ಹೊಂದಿದರು. ಆಗಿನ ಗವರ್ನರ್ ಜನರಲ್ಲರಾಗಿದ್ದ ಲಾರ್ಡ್ ಲಿಟ್ಟನ್‌ರವರು ಅವರಿಗೆ ಪಂಜಾಬದ ಗವರ್ನರ ಹುದ್ದೆಯನ್ನು ನೀಡಲು ಬಯಸಿದರು. ಆದರೆ ಹ್ಯೂಮರು ಅದನ್ನು ನಿರಾಕರಿಸಿದರು. ಏಕೆಂದರೆ ಆಗ ಅವರು ಝೂರಖಂಡ ಪ್ರದೇಶದ ಪಕ್ಷಿಗಳ ಬಗ್ಗೆ ಅಧ್ಯಯನ ನಡೆಸಿದ್ದರು. ಪಕ್ಷಿಗಳ ಅಭ್ಯಾಸ ಕ್ಕಾಗಿ ಪ್ರಾಕೃತ ಹುದ್ದೆಯನ್ನು ಸಹ ನಿರಾಕರಿಸಿದ ಅವರ ಪ್ರಕೃತಿ ಪ್ರೇಮ ಅಸಾಧಾರಣವಾದದ್ದು.

1884ರಲ್ಲಿ ಅವರ ಜೀವನದಲ್ಲಿ ಘಟಿಸಿದ ಒಂದು ಘಟನೆ ಅವರಿಗೆ ತುಂಬ ಆಘಾತವ ನ್ನುಂಟು ಮಾಡಿತು. ಆ ಆಘಾತದಿಂದ ಅವರು ಚೇತರಿಸಿಕೊಳ್ಳಲೇ ಇಲ್ಲ. ಪಕ್ಷಿ ವೀಕ್ಷಣೆಗಾಗಿ ಸಿಮ್ಲಾದಲ್ಲಿರುವ ತಮ್ಮ ಅಧಿಕೃತ ನಿವಾಸದಿಂದ ಅವರು ಕೆಲವು ಕಾಲ ಹೊರಗುಳಿಯಬೇಕಾ ಯಿತು. ಆ ಸಮಯದಲ್ಲಿ ಅವರ ನಿವಾಸದಲ್ಲಿ ದರೋಡೆಯಾಯಿತು. ತಮ್ಮ ಬೆಲೆಬಾಳುವ ವಸ್ತುಗಳು ಕಳುವಾದುದಕ್ಕೆ ಅವರಿಗೆ ದುಃಖವಾಗ ಲಿಲ್ಲ. ಆದರೆ ತುಂಬ ಪರಿಶ್ರಮದಿಂದ ತಾವು ಸಂಗ್ರಹಿಸಿಟ್ಟಿದ್ದ ಮೊಟ್ಟೆಗಳು, ಗೂಡುಗಳು, ಗರಿ ಗಳು ಈ ದರೋಡೆಯಲ್ಲಿ ನಾಶಹೊಂದಿದ್ದರಿಂದ ಅವರಿಗೆ ತುಂಬ ದುಃಖವಾಯಿತು. ಅವರ ಜೀವನ ಚರಿತ್ರೆಯನ್ನು ಬರೆದವನ ಅಭಿಪ್ರಾಯ ದಂತೆ ''ಇದೊಂದು ನಿಯೋಜಿತ ದರೋಡೆಯಾ ಗಿತ್ತು, ಮತ್ಸರದ ಪ್ರತಿಕ್ರಿಯೆಯಾಗಿತ್ತು'' ಈ ಘಟನೆಯಿಂದ ತುಂಬ ವಿಹ್ವಲರಾದ ಹ್ಯೂಮ್‌ರು ತಮ್ಮ ಅಳಿದುಳಿದ ಸಂಗ್ರಹವನ್ನು British museum of natural historyಗೆ ದಾನ ಮಾಡಿದರು.

ಭಾರತದಲ್ಲಿ ಪ್ರಕೃತಿ ವಿಜ್ಞಾನದ ಶಾಸ್ತ್ರೀಯ ಅಧ್ಯಯನಕ್ಕೆ ತಳಹದಿ ಹಾಕಿದ ಕೀರ್ತಿ ಹ್ಯೂಮ್‌ರ ವರಿಗೆ ಸಲ್ಲುತ್ತದೆ.

(ಸಾಧಾರ)



ಲಘು ಲೇಖನ :

# ಚಹವೇ, ಹೇಗೆ ಬಣ್ಣಿಸಲಿ ನಿನ್ನ ಮಹದಾನಂದವ?

ಎ. ಗುರುಪ್ರಸಾದ್

**ಚ**ಹದಾನಂದವೇ ನೈಜ ಮಹದಾನಂದ. ಇದು ಚಹಾಪ್ರಿಯರೆಲ್ಲರ ಮೆಚ್ಚಿನ ಮಾತೇ ಸೈ. ಬಲವಂತಕ್ಕೇ ಕುಡಿದರೂ, ಚಹ ಒಳಗಿಳಿದಂತೆ, ಅದರ ಬಗೆಗಿನ ಪೂರ್ವಾಗ್ರಹವೆಲ್ಲ ಹೊರಗೋಡಿ ಅಸಲಿ ಹದಿನಾರಾಣೆ ಪಕ್ಷಪಾತಿಗನೂ ನಿಷ್ಪಕ್ಷಪಾತದ ನೆರಳಿಗಾಗಮಿಸಿ ನಿಷ್ಪಾಪಿಯಾಗುಳಿದಾನು. ಚಹದಾನಂದವು ಮನೆಯಿಂದ ಮನೆಗೆ, ಹೋಟೇಲಿಂದ ಮೋಟೇಲಿಗೆ ಭಿನ್ನವಾಗುತ್ತದೆ; ಕಾರಣ ಅದು ನೀಡಿಕೆಯ ಗತ್ತು, ಮಾತು ಬೆರೆಸುವ ಮತ್ತು, ಗತ್ತಿನ ಬೆರಿಕೆ ಸೇರದ ಮೆಲ್ನುಡಿ, ನಲ್ನುಡಿ, ನಲ್ಲೆ ನುಡಿ ...... ಇತ್ಯಾದಿ ಇತ್ಯಾದಿ ಕಾರಣಗಳು ನೂರೆಂಟಾದರೂ ಇರಬಹುದೇನೋ ಪರಂತು ಚಹದ ಬ್ರಾಂಡ್-ಗ್ರಾಂಡ್ ..... ಇತ್ಯಾದಿ ಭಿನ್ನತೆಯಂತೂ ಅಲ್ಲ. ಉತ್ಕೃಷ್ಟ ಚಾಪುಡಿ ಬಗ್ಗಿಸಿಯೂ, ನಿಜವಾದ ಸಕ್ಕರೆ ಹಾಲನ್ನು ಹಾಕಿಯೂ, ತದನಂತರವೂ ಉತ್ತಮವಾಗಿ ತೊಳೆದ, ಥಳಗುಟ್ಟುವ ಪಿಂಗಾಣಿ ಕಪ್ಪು-ಬಸಿಗಳಲ್ಲಿ ಹಬೆಯಾಡುವ ಚಹವನ್ನು ಸಿಡುಕು ಮೋರೆಯೊಂದಿಗೆ ನೀಡಿದರೆ, 'ಪಂಚತಾರಾ'



ಹೊಟೇಲಿನ ತಿಂಡಿಯ ತಟ್ಟೆಯಲ್ಲಿ ನೊಣ ಕಂಡಂತಾಗುವುದು. ಪಂಚತಾರಾ ಹೊಟೇಲೆಂದರೆ, ನಾನು ಬೆಂಗಳೂರು, ಮದ್ರಾಸು, ಕಲ್ಕತ್ತ ನಗರಗಳ ನೆನಪಿನ ಕಲ್ಪನಾ ಲೋಕಕ್ಕೆ ನೆಗೆದವನಲ್ಲ. ನನ್ನ ಹುಟ್ಟಿದೂರು, ಮತ್ತು ಅದೊಂದೇ ಮುಖ್ಯ ಕಾರಣಕ್ಕಾಗಿ ಮೆಚ್ಚಿ ದೂರಾಗಿರುವ ತರ್ಲೆ ಕುಂಟ್ನಳ್ಳಿಯಲ್ಲಿ ಶೀನಪ್ಪನ 'ಪಂಚತಾರಾ' ಹೊಟೇಲೊಂದಿದೆ. ಬೇವು, ಹಲಸಿನ ಮರಗಳ ಕಿಗ್ಗಲಸಾಮ ಸಂವತ್ಸರದ ಫರ್ನೀಚರ್‌ಗಳು, 'ಕಪ್ಪು' ಮರದ ಷೋಕೇಸು, ಬಣ್ಣಗೆಟ್ಟ ಗಾಜು, ಛತ್ತಿಗೆ ಸೋಗೇ ಗರಿ. ಅದಾವ ಕಲಾವಿದನ ಮಾಂತ್ರಿಕತೆಯೋ, ಛತ್ತಿನಲ್ಲಿ ಅಲ್ಲಲ್ಲಿ ಅಂಗೈಯಗಲದ ಕಿಂಡಿಗಳಿದ್ದು ಪರಿಶುಭ್ರ, ನೀಲಾಕಾಶದ ಕೃಷ್ಣಪಕ್ಷದ ರಾತ್ರಿಗಳಲ್ಲಿ ನೀವು ತಲೆ ಎತ್ತಿ ವೀಕ್ಷಿಸಿದಾದರೆ ಐದು ನಕ್ಷತ್ರಗಳು ಒಂದು ಸಮಾನಾಂತರದ ಕಿಂಡಿಗಳಿಂದ ಫಳಗುಟ್ಟುತ್ತವೆ. ಅಂದ ಮೇಲೆ ಇದು ಪಂಚತಾರಾ ಹೊಟೇಲೆ ಅಲ್ಲವೆ? ಇನ್ನೂ ಛತ್ತಿನಲ್ಲಿ (ಮೂಲೆನಲ್ಲಿ) ಕಿಂಡಿಗಳಾಗಿ, ಹೊಟೇಲ್ ಇನ್ನೂ ಹಚ್ಚಿನ 'ಸ್ಟಾರ್ ವಾಲ್ಯು'ಗೆ ಏರಲು ಶೀನಪ್ಪನಿಗೆ ಆ ಬಗ್ಗೆ ಹುಚ್ಚಿನ ಹವ್ಯಾಸವೇನೂ ಬರಬಾರದು. ಹೀಗೆ ಬೆಳಕಿನ ಮಿಂಚುಗಳಂತೆ ಮೇಲೆ ಫಳಗುಟ್ಟುವ ನಕ್ಷತ್ರಗಳು, ಕೈಯಲ್ಲಿ ಶೀನಪ್ಪ ಅಕ್ಕರೆಯಿಂದ ಕೊಟ್ಟ ಹಬೆಯಾಡುವ ಚಹಾ (ಅದರಲ್ಲಿ ಒಂದು ಭಾಗ ಆಗಲೇ ಗಂಟಲಿನಿಂದ ಹೊಟ್ಟೆಗೆ ಇಳಿಯುತ್ತಾ, ಬೇಸರ ದುಗುಡಗಳನ್ನೆಲ್ಲ ಆಚೆಗಟ್ಟುತ್ತಿದೆ. ಈ ಘಳಿಗೆಯನ್ನೇ ಕವಿಪುಂಗವರು 'ಅಮೃತ ಘಳಿಗೆ' ಎಂದಿರಬೇಕು.) ಕಾಣದ ಲೋಕದ ಕಲ್ಪನೆಯ ಅಮೃತಕ್ಕಿಂತ ನಮ್ಮ ಶೀನಣ್ಣನ ಚಹವೇ ವಾಸಿ; ಅದೂ ಅಲ್ಲದೆ ಬ್ರಹ್ಮನಿಗಾದರೂ 'ಅಮೃತ' ಸೃಷ್ಟಿಗಾಗಿ ಚಹದ 'ಕಿಕ್' ದೊರೆತಿಲ್ಲ ಎಂದು ಹೇಳುವುದಾದರೂ ಹೇಗೆ. ಚೆನ್ನಾಗಿ 'ಗುಂಡು ಹಾಕಿ' ಆ ಸ್ಫೂರ್ತಿಯಲ್ಲಿ ಗುಂಡಿನಿಂದ ಆಗುವ ದುಷ್ಪರಿಣಾಮಗಳ ಮೇಲೆ ಸೊಗಸಾದ ಲೇಖನ ಬರೆಯುವ ಮಾದರಿಯಲ್ಲೂ 'ಚಹ' ಅಮೃತದ ಒಂದೆ ಇತ್ತ? ಇರಬಹುದೇನೋ. ಅದೇನೇ ಇದ್ದರೂ ಇವುಗಳೆಲ್ಲ ಚಹದ ಕಿಮ್ಮತ್ತನ್ನು ಇನ್ನಷ್ಟು ಹೆಚ್ಚಿಸುವುದಂತೂ ಹೌದು.



ಚಹದಾನಂದವು ಕುಡಿಯುವಾತನ 'ಮೂಡ್'ಗೆ ಹೊಂದಿಕೊಳ್ಳಬಲ್ಲ ನೈಜಾನಂದ. ಗಾದೆಯೇ ಇಲ್ಲವೆ ..... ''ಬೀಸುವ ದೊಣ್ಣೆ .....'' ಹೀಗೆ, ಸಮಸ್ಯೆಯ ನಡುವೆ ಅರ್ಧ ನಿಮಿಷವನ್ನು ಚಹಕ್ಕಾಗಿ ವೆಚ್ಚ ಮಾಡುವುದಾದರೆ, ಆ ಅರ್ಧ ನಿಮಿಷದಲ್ಲಿ ಯಾವುದೋ ಒಂದು ಅಪಾಕಾರಿ ತಿರುವು ಬರಬಹುದು. ಸಾಲ ಕೊಡಬಲ್ಲ ಸ್ನೇಹಿತರೂ ಅದೇ ಸ್ಥಳಕ್ಕೆ ಬರಬಹುದು ...... ಇತ್ಯಾದಿ.

ಇಷ್ಟೆಲ್ಲ ಹೇಳಿದ ಮೇಲೂ ಇನ್ನೊಂದು ಬಗೆಯ ಚಹದಾನಂದವು ಉಳಿದೇ ಉಳಿಯುತ್ತದೆ. ಇಂಥ ಚಹದಾನಂದವನ್ನಂತೂ, ಚಹಾಪ್ರಿಯರೆಲ್ಲರೂ ಒಂದಲ್ಲ ಒಂದು ಊರಿನಲ್ಲಿ, ಒಂದಲ್ಲ ಒಂದು ಹೊಟೇಲಿನಲ್ಲಿ ಅನುಭವಿಸಿಯೇ ಇರುತ್ತಾರೆ. ಇಂಥ ಆನಂದವೂ ಚಹದಾನಂದದ ಕಿಮ್ಮತ್ತನ್ನು ಪರೋಕ್ಷವಾಗಿ ಹೆಚ್ಚಿಸುವುದೇ ಆದ್ದರಿಂದ ಇದನ್ನು ಉಲ್ಲೇಖಿಸದಿದ್ದಲ್ಲಿ ಚಹಾಪ್ರಿಯರು ಸಿಟ್ಟಿಗೆದ್ದಾರು.

ಬೇಸರ ಓಡಿಸಲು ಒಂದು ಚಹಕ್ಕಾಗಿ ಆರ್ಡರಿಸಿ, ಮತ್ತೆ ಬೇಸರದ ಬಸಿರಲ್ಲಿ ಮುಳುಗುವಿರಿ.

ಮಾಣಿಯೋ: ಮನೆಯಾಕೆಯೋ (ಚಹ ನೀಡು ವವರು ಇವರಿಬ್ಬರೇ ಅಧಿಕೃತ ಮಂದಿ; ಅನಧಿಕೃತ ಮೂಲಗಳನ್ನು ದಾಖಲಿಸಿಲ್ಲ. ಮಹಿಳಾಮಣಿಗಳು 'ಮಾಣಿಯೋ, ಮನೆಯಾತನೋ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು). ಅಂತೂ ಚಹ ಬರುತ್ತದೆ. ಚಹ ಎಷ್ಟು ಕೆಟ್ಟದಾಗಿರುತ್ತದೆಂದರೆ ..... ಕುಡಿಯುತ್ತ, ಕುಡಿಯುತ್ತ ..... ''ಮುಗಿಯಿತು ..... ಇನ್ನೊಂದೆರಡೇ ಗುಟುಕು ...... 'ಅಬ್ಬಾ' ಅಂತೂ ಮುಗಿಯಿತು .....'' ಎಂದು ಲೋಟವನ್ನು ಕೆಳಗಿಡುವಾಗ ಎಂಥ ಸಂಕಟಾನಂದ. ಹಿಮಾಲಯ ಹತ್ತಿ ಇಳಿದವನ ಸಂತೋಷ, ಈ ಸಂತೋಷದ ಮುಂದೆ ಏನೇನೂ ಅಲ್ಲ. ಮೋಡ ಚದುರಿ ಸಂಜೆಯ ಬೆಚ್ಚನೆ ಬಿಸಿಲು ಮತ್ತೆ ಮೈ ಮುತ್ತಿಕ್ಕಿದಂಥಾ ಪರಮಾನಂದ. ಜೊತೆಗೆ ಮುಂದಿನ ಚಹಾ ಒಳ್ಳೆಯದಾಗಿರಬೇಕು ಎಂದು ಮನಸ್ಸೂ ಸಾಂದರ್ಭಿಕವಾಗಿ ಮಿದುಳಿಗೆ ಸಂದೇಶ ಕಳಿಸಿರುತ್ತದೆ. ಹಾಗಾಗಿ ಮುಂದಿನ ಚಹಕ್ಕಾಗಿ ಕಾಯುವವರೆಗೂ 'ತಾತ್ಕಾಲಿಕ'ವಾಗಿಯಾದರೂ ಆಶಾವಾದಿಯಾಗುಳಿಯಬಲ್ಲ ಅವಕಾಶವಾಗುತ್ತದೆ. ಅಲ್ಲದೆ ಸಾಕಷ್ಟು ವಿರಾಮವಿದ್ದಲ್ಲಿ, ಬಸ್ಸಿಗಾಗಿ ಕಾಯುತ್ತ, ವಿಶಾಲ ಮರದ ನೆರಳಿನಲ್ಲಿ ಜೊಂಪಿನಿಂದ ಅರೆ ಮಲಗುವುದೂ ಜೀವಕ್ಕೆ ಪ್ರಿಯವಾಗುವ ವಿಚಾರವೇ. ಆದರೆ ನಿದ್ದೆಯಂತೂ ಆಳಕ್ಕಿಳಿಯದೇ ಬಸ್ಸಿನ ಶಬ್ದಕ್ಕೆ ಎಚ್ಚರವಾಗುವ ವ್ಯಾಪ್ತಿಯಲ್ಲಂತೂ ಇರಬೇಕು.

ಚಹದಾನಂದವೇ ಮಹದಾನಂದ. ಬಡಭಾರತ ..... ಅಲ್ಲಲ್ಲ .... ಭಾರತದ ಬಡ ಮಂದಿಗರಿಗೂ, ನಿಜವಾಗಿ ಹಿಂದುಳಿದವರಿಗೂ, ಕೆಲವೇ ಪೈಸೆಗಳ ಝಣತ್ಕಾರದ ವಾಸ್ತವತೆಗೆ ಚಹಾ ಪ್ರತ್ಯಕ್ಷ. ಶ್ರೀಮಂತಿಕೆಯ ಗತ್ತೇನಿದ್ದರೂ, ಅದು ಕೇವಲ ಕಪ್ಪು-ಬಸಿಗಳ ಹೆಚ್ಚುವರಿಯಲ್ಲಷ್ಟೆ. ಹಿಂದುಳಿದವನು, ಸಾದಾ ಚೇರಿನಲ್ಲಿ ಕುಳಿದು ಸಾದಾ ಗ್ಲಾಸಿನಲ್ಲಿ ಚಹ ಹೀರಿದರೆ, ಮುಂದುವರಿದವನು ಸೋಫಾದ ಮೇಲೆ ವಿರಾಜಮಾನವಾಗಿ ಉತ್ಕೃಷ್ಟ ಪಿಂಗಾಣಿ ಸೆಟ್ಟಿನಲ್ಲಿ ಚಹಾ ಹೀರುತ್ತಿರುತ್ತಾನೆ. ಹೀಗಾಗಿ ಚಹದ ಸ್ಥಾನ-ಮಾನ ಬದಲಾದರೂ, ಚಹದ 'ಕಿಕ್' ಅಂತೂ ಒಂದೇ. ಹಣವಿದ್ದರೂ ಚಹ ಕುಡಿಯದ ಮಂದಿಗಳೇ ನಿಜಾರ್ಥದಲ್ಲಿ ದಟ್ಟದರಿದ್ರರು. ಕೆಲವೊಮ್ಮೆ ವೈದ್ಯರು ಚಹ ಕಾಫಿಗಳ ಮೇಲೆ ನಿಷೇಧವನ್ನು ಹೇರುವರು. ಈ ನಿಷೇಧದೊಂದಿಗೆ, ದೀರ್ಘಾಯುಷ್ಯದ ಗ್ಯಾರಂಟಿ ಕಾರ್ಡನ್ನೇನೂ ಲಗತ್ತಿಸಿರುವುದಿಲ್ಲ. ಆದ್ದರಿಂದ ಚಹ ಕುಡಿಯಲಾರದೇ ದಿನವೊಂದು ಯುಗವಾಗಿ, ದೀರ್ಘಾಯುಷ್ಯದ ಶಾಪಕ್ಕೆ ಗುರಿಯಾಗುವುದಕ್ಕಿಂತ, ಇದ್ದಷ್ಟು ದಿನ ಇದ್ದು ಚಹ ಕುಡಿದೇ ಮಂದಸ್ಮಿತವದನನಾಗಿ ಉಳಿಯುತ್ತೇನೆ ಎನ್ನುವುದು ಧೀರರ ಮಾತು.



ಚಹಕ್ಕೆ ಗೌರವ ಸಲ್ಲಿಸದವರಾರು? ಎಂಥ ಸ್ಟ್ರಿಕ್ಟ್ ಅಧಿಕಾರಿಯೇ ಇರಲಿ, ಸೀಟಿನಿಂದ ತಾತ್ಕಾಲಿಕವಾಗಿ ಮಾಯವಾದ ಗುಮಾಸ್ತನ ಬಗ್ಗೆ, ಆತನ ಪಕ್ಕಿಗನೋ: ಪಕ್ಕಿಗಳೋ, ಎದುರಿಗನೋ(ಳೋ) ..... 'ಚಹಕ್ಕೆ ಹೋಗಿದ್ದಾರೆ ಸಾರ್' ಎಂದಾಗ ಬಾಲ ಮುದುರಿದ ಬೆಕ್ಕಿನಂತಾಗುವನು. ಈ ಒಂದು ನೆಪದ ಹೊರತಾಗಿ ಬೇರಾವ ನೆಪವೂ ಇಂಥ 'ಕುರ್ಸಿಗಳ್ಳ'ರನ್ನು ಉಳಿಸದು. ಹೀಗಾಗಿ ಎಲ್ಲಿ ಕಾರಣಕ್ಕೂ ಈ 'ಚಹ'ದ ನೆಪ ಒತ್ತಿ, ಇದರ ಕಿಮ್ಮತ್ತು ಕಳೆವಡೆ ಉಳಿದೇ ಇಲ್ಲ ಎನ್ನುವುದೂ ನಿಜವಿರಬಹುದು. ಹೇಗಾದರೂ, 'ಹೂವಿನೊಡನೆ ನಾರೂ ಸ್ವರ್ಗ' ಎನ್ನುವಂತ

ಚಹಕ್ಕಾಗಿ ಅಧಿಕಾರಿಯ ಮನಸ್ಸಿನಲ್ಲಿ ಮೂಡುವ ಪ್ರೀತಿಯೊಂದಿಗೆ, ಗುಮಾಸ್ತನ ಕೆಲಸ ಚೋರತನವೂ ಬೆರೆತು ಹೋಗುವುದು. ಆದರೆ ಕೆಲವು ಸಿ.ಐ.ಡಿ.ಗಳನ್ನು ಮೀರಿಸೋಪಾದಿಯ ಅಧಿಕಾರಿಗಳೂ ಇರುತ್ತಾರೆ. ಪಕ್ಕಗರ-ಎದುರಿಗರ ಮಾತನ್ನು ನಂಬದೆ ಸ್ವತಃ 'ಸ್ಪಾಟ್ ಇನ್ಸ್‌ಪೆಕ್ಷನ್'ಗೆ ತೆರಳುತ್ತಾರೆ. ಆಗ ಇನ್ನೊಂದು ವಾಮ ಮಾರ್ಗದಿಂದ ಆ 'ಮಾಯಾವಿ'ಯ ಓತ್ತೈಹೀಯು ಹೆಚ್ಚಿನ ವೇಗದಿಂದ ತೆರಳಿ ಅದೇ ಹೋಟೇಲಿನಲ್ಲಿ ಚಹಾ ಕಪ್ಪಿನೊಂದಿಗೆ 'ಮಾಯಾವಿ'ಯೊಡನೆ ಆಸೀನನಾಗಿ ಸದ್ಯಕ್ಕಂತೂ ಬಚಾವ್ ಆಗು




ವ ಸಾಧ್ಯತೆಯು ಪರಿಮಿತಿಗಳಲ್ಲೊಂದು. ಇದರಿಂದ ಚಹದ ಮಹತ್ತ್ವಂತೂ ಗೌಣವಾಗದು. ಏಕೆಂದರೆ 'Bee' ಎಂದು ಕರೆಸಿಕೊಳ್ಳುವ ನೌಕರನಿಗೂ ಚಹ ಬೇಕೇಬೇಕಲ್ಲ; ಬದಲಾವಣೆ ಎಂದರೆ, ಚಹವೇ ಆತನ ಸೀಟಿಗೆ ಆಗಮಿಸುತ್ತದೆ.

ಇನ್ನು ಊಟಕ್ಕೆ-ತಿಂಡಿಗೆ ಬೇರೆಯುವವರನ್ನು ನಿಂದಿಸಿ ತಡೆಹಿಡಿದರೂ ಅವರು ಆಯಿತು ಎಂದು ಸುಮ್ಮನಾಗಿಬಿಡುತ್ತಾರೆ. ಆದರೆ ಚಹಕ್ಕೂ ಅದೇ ಉತ್ತರವನ್ನು ನೀಡಿ ಪಾರಾಗುವಂತಿಲ್ಲ. ''ಪರವಾಗಿಲ್ಲ, ಇನ್ನೊಮ್ಮೆ ಆಗಲೇಳಿ, ಬನ್ನಿ' ಎಂದು ಬಲವಂತದಿಂದ ಎಬ್ಬಿಸಿಕೊಂಡು (ಕರೆಯುವ ಮಂದಿ ಐದಾರಿದ್ದಾಗ-ಬೇಡೆಂಬಾತನನ್ನು ಅಕ್ಷರಶಃ ದಬ್ಬಿಕೊಂಡೇ) ಸೆಳೆದೊಯ್ಯಲೂಬಹುದು. ಹೀಗೆ ನೀವು ಯಾರಿಂದ ಬೇಕಾದರೂ ಪಾರಾಗಬಹುದು. ಚಹದಿಂದ ಪಾರಾಗುವುದು ಅಸಾಧ್ಯ ಕೋಟಿಯ ಮಾತು. ಚಹದಿಂದ ಒಲಿಸಿಕೊಂಡು, ಮೈಮನವನ್ನು ಮೆತ್ತಗಾಗಿಸಿ, ಅಲ್ಲಿ ನಮ್ಮ ಕಾರ್ಯಸಾಧನೆಯ ಬೀಜವನ್ನು ಬಿತ್ತಿಕೊಳ್ಳಬಹುದು. ಬೇಸಿಗೆಯಲ್ಲಿ ಚಹದ ಸ್ಥಾನವನ್ನು ತಂಪುಪಾನೀಯಗಳು ಆವರಿಸುವವಾದರೂ ಅದರ ಪ್ರಭಾವ ತೀರ ಹಂಗಾಮಿ. ಎಂಥ ಬಿರುಬೇಸಿಗೆಯಲ್ಲೂ ನಿಗದಿತ ಸಮಯಕ್ಕೆ 'ಚಹ' ಆಗದಿದ್ದರೆ ಮಿದುಳು ತನ್ನ ಕೆಲಸವನ್ನು ನಿಲ್ಲಿಸುವುದು. ಹಾಗಾಗಿ ತಣ್ಣೀರಿನಲ್ಲಿ ಮುಖ ತೊಳೆದು ಸಿದ್ಧರಾಗಿ, ಚಹಾ ಸೇವಿಸುವವರಿದ್ದಾರೆ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುವಂತೆ, ಬಿಸಿಯನ್ನು ಬಿಸಿಯಿಂದಲೇ ತೆಗೆಯುವುದು ಲೇಸೆಂಬ ತತ್ತ್ವಪ್ರತಿಪಾದಿಗರಿವರು. 'ಸರ್ವ ಚಹಮಯಂ ಜಗತ್' ಎಂಬ ಚಹೋಕ್ತಿಯಂತೂ ಲೋಕವಿದಿತ. 'ಒಂದು ಕಪ್ ಉತ್ತಮ ಚಹಾದೊಂದಿಗೆ ಎಂಥ ಕೆಟ್ಟ ಲೇಖನವನ್ನಾದರೂ ಸಹಿಸಬಲ್ಲೆ' ಎಂದೊಬ್ಬ ಕಡಕ್ ವಿಮರ್ಶಕರು ಮನಃಪೂರ್ತಿಯಾಗಿ ಹೇಳಿರುವರು. ಹೀಗೆ ಚಹವಿಲ್ಲದೆ ಸೃಜನಶೀಲತೆಯಿಲ್ಲ; ಸೃಜನಶೀಲತೆಯಿಲ್ಲದೆ ಅರ್ಥ ಜೀವವೇ ಇಲ್ಲ; ಅರ್ಥ ಜೀವವೇ ಇಲ್ಲವಾದಾಗ ಉಳಿದರ್ಥಕ್ಕೂ ನೈಜ ಕಿಮ್ಮತ್ತಿಲ್ಲ ...... ಎಂಬಂಥ ಕಠೋರ ಸ್ಥಿತಿ. ಹೀಗೆ ತಲೆಯಲ್ಲಿ ಅಷ್ಟಿಷ್ಟು ಇರಬಹುದಾದ ಸರಕನ್ನು ಅಗೆಯುವ ಪಿಕಾಸಿಯೇ ಲೇಖನಿ ಎಂದಾದರೆ, ಅದರ ನಿಜವಾದ 'ಶಾಯಿ' ಏನಿದ್ದರೂ ಚಹವೇ. ಲೇಖನಿ ಏನಿದ್ದರೂ ಮೂಲದೇವರಂತೆ. ಉತ್ಸವ ಮೂರ್ತಿಯಂತೂ ದಿಟಕ್ಕೂ ಚಹವೇ. ಹೊಟ್ಟೆಯಲ್ಲಷ್ಟು ಚಹ, ಲೇಖನಿಯಲ್ಲಷ್ಟು ಶಾಯಿ, ಯಾರ ಕಾಟ ಹಂಗೂ ಇಲ್ಲದ ಸ್ಥಿತಿಯಲ್ಲಿ ಎದುರಿನಲ್ಲಷ್ಟು ಬಿಳಿ ಕಾಗದಗಳು ...... ಇಂಥ ಘಳಿಗೆಗಳಲ್ಲಿ ಅಷ್ಟೋ ಇಷ್ಟೋ ಬರಹವಂತೂ ಜನ್ಮ

ತಾಳುವುದು. ತಿಂಡಿ-ಊಟಗಳಿಂದ ಸ್ಫೂರ್ತಿ ಬಾರದು. ಬದಲಿಗೆ ಇದ್ದ-ಬದ್ದ ಸ್ಫೂರ್ತಿಯೂ ಮಾಯವಾಗಿ ನಿದ್ರೆ ಬರುವುದು. ದೀರ್ಘಾವಧಿ ಓದಿನಲ್ಲೂ ಮಧ್ಯೆ-ಮಧ್ಯೆ ಚಹಾಬೇಕು. ಇಲ್ಲವಾದಲ್ಲಿ ಪುಸ್ತಕವೇ ತಲೆದಿಂಬಾಗುವ ಅಪಾಯವಿದೆ. ''ಎರಡಧ್ಯಾಯಗಳ ನಡುವೆ ಒಂದು ದರಾಂ ಚಹಾ, ಎರಡು ದರಾಂಗಳ ನಡುವೆ ಒಂದು ಅಧ್ಯಾಯ'' ಎಂಬ ಸೂತ್ರದಲ್ಲಿ ಯಾವುದೇ ಗ್ರಂಥವನ್ನು ಓದಿದರೂ ಅದರ ನೆನಪೇ ಚಿರಕಾಲ. ಪುಸ್ತಕದ ಹೂರಣ ಮಸಕಾದರೂ ಚಹದ ಪರಮಾನಂದವು ಪರ್ಮನೆಂಟ್. ಪುಸ್ತಕ ಒಂದು ವೇಳೆ ತಲೆನೋವು ತಂದರೆ, ಆಗಲೂ ಚಹದ ನೆರವು ಅತ್ಯಗತ್ಯ. ಹೀಗಾಗಿ ಚಹವು ಸರ್ವರಿಗೂ ಒಂದಲ್ಲ ಒಂದು ಬಗೆಯ ಆನಂದ ನೀಡುವ 'ಮಲ್ಟಿ ಪರ್ಪಸ್ ಮಹತ್ತನ್ನು' ಹೊಂದಿದೆ. ಪರಮಾತ್ಮನೂ ಅಮೃತ ಸೃಷ್ಟಿಸುವ ಮುನ್ನ ಚಹದ ಒಂದು ಪೆಗ್ ಹಾಕಿರಲಿಕ್ಕೇ ಬೇಕು. ●

## ''ಯುವರ್ ಸಿನ್ಸಿಯರ್ ಫ್ರೆಂಡ್''

**ಎ**ರಡನೆಯ ಪ್ರಪಂಚ ಯುದ್ಧ ನಡೆಯುತ್ತಿದ್ದ ಕಾಲ. 1940ರಲ್ಲಿ ಜರ್ಮನಿಯಿಂದ ಹಿಟ್ಲರ್ ಗಾಂಧೀಜಿಯವರಿಗೆ ಒಂದು ಪತ್ರ ಬರೆದಿದ್ದರಂತೆ. ''ನಾವು (ಜರ್ಮನ್‌ರು) ಬ್ರಿಟನ್ನಿನ ಮೇಲೆ ದಾಳಿ ಮಾಡಬೇಕೆಂದು ಇದ್ದೇವೆ. ನಿಮ್ಮ ದೇಶದಿಂದ ಆಂಗ್ಲರನ್ನು ಓಡಿಸಲು ನೀವು ಮಾಡುತ್ತಿರುವ ಕೃಷಿ ಪ್ರಂಶಸನೀಯವಾದದ್ದು. ಆದರೆ, ನಿಮ್ಮ ಅಹಿಂಸಾ ಸಿದ್ಧಾಂತದಿಂದ ನಿಮ್ಮ ದೇಶ ಸ್ವಾತಂತ್ರ್ಯವನ್ನು ಪಡೆಯುತ್ತದೆಯೆಂಬ ನಂಬಿಕೆ ನನಗಿಲ್ಲ. ನೀವು ಸಹಕರಿಸಿದರೆ ತುಪಾಕಿನಿಂದ ನಿಮ್ಮ ದೇಶಕ್ಕೆ ಸ್ವಾತಂತ್ರ್ಯವನ್ನು ಕೊಡಿಸುತ್ತೇವೆ. ಆಂಗ್ಲರನ್ನು ಓಡಿಸಿ. ನಮ್ಮ ಸಹಾಯ, ಸಂಪತ್ತು ನಿಮಗೆ ಕೊಡುತ್ತೇವೆ. ನಿಮ್ಮ ಮಿತ್ರ ಹಿಟ್ಲರ್.''

ಇದಕ್ಕೆ ಗಾಂಧೀಜಿಯವರ ಉತ್ತರ-

ಮಿತ್ರರೇ!

ನನಗೆ ಶತ್ರುಗಳು ಇಲ್ಲ. ಆದುದರಿಂದ ನಿಮ್ಮನ್ನು ಈ ರೀತಿ ಸಂಬೋಧಿಸಬೇಕಾಗಿ ಬಂತು. ನೀವು ಯುರೋಪ್‌ಖಂಡದಲ್ಲಿ ನಿಮ್ಮ ಫ್ಯಾಸಿಸ್ಟ್ ವಿಧಾನಗಳಿಂದ ಚಿಕ್ಕ ಚಿಕ್ಕ ದೇಶಗಳನ್ನು ಕಬಳಿಸುತ್ತಿದ್ದೀರಿ. ಇದು ಬಹಳ ನಾಚಿಕೆಯ ವಿಚಾರ. ಎಷ್ಟು ಚಿಕ್ಕ ದೇಶವಾದರೂ ಅದರ ಸ್ವೇಚ್ಛೆ, ಸ್ವಾತಂತ್ರ್ಯಗಳಿಗೆ ಅಡ್ಡಿಪಡಿಸುವುದು ಮಾನವತೆ ಅನ್ನಿಸಿಕೊಳ್ಳುವುದಿಲ್ಲ. ನಿಮ್ಮ ಸಹಕಾರದಿಂದ ಆಂಗ್ಲರನ್ನು ನಮ್ಮ ದೇಶದಿಂದ ಓಡಿಸುವುದು ನಮಗೆ ತಲೆ ತಗ್ಗಿಸುವಂತಹುದು. ನಮ್ಮ ದೇಶ ಯಾವ ಸಹಕಾರ, ಸಹಾಯವೂ ಇಲ್ಲದೇನೆ ಆಂಗ್ಲ ಪಾಲನೆಯಿಂದ ವಿಮುಕ್ತಿ ಹೊಂದುತ್ತೆ ಎಂದು ನಾನು ಭಾವಿಸುತ್ತಿದ್ದೇನೆ.

ಇಂತಿ

Your Sincere friend

ಇದರಲ್ಲಿನ ತಮಾಷೆ ಏನೆಂದರೆ ಈ ಉತ್ತರ ಹಿಟ್ಲರ್‌ಗೆ ತಲುಪಲಿಲ್ಲವಂತೆ. ಆ ದಿನಗಳಲ್ಲಿ 'ಸೆನ್ಸಾರಿಂಗ್' ಇರುತ್ತಿತ್ತು. ಹಡಗಿನ ಮೂಲಕ ಉತ್ತರಗಳನ್ನು ರವಾನೆ ಮಾಡುತ್ತಿದ್ದರು. ಮದರಾಸು ರೇವಿನಲ್ಲಿ ಗಾಂಧೀಜಿಯವರ ಪತ್ರ ಸೆನ್ಸಾರ್ ಅಧಿಕಾರಿಗಳ ಕೈಯಲ್ಲಿ ಬಿತ್ತು. ಆ ಪತ್ರದಲ್ಲಿ ಬ್ರಿಟೀಷ್‌ರ ಮೇಲೆ ವ್ಯತಿರೇಕವಾಗಲಿ, ಬೇರೆ ವಿಧವಾದ ಅಭ್ಯಂತರಕರವಾದ ವಿಷಯವಾಗಲಿ ಇರದಿದ್ದರೂ ''ಯುವರ್ ಸಿನ್ಸಿಯರ್ ಫ್ರೆಂಡ್'' ಎಂಬ ಪದದಿಂದ ಆ ಉತ್ತರವನ್ನು ಜರ್ಮನಿಗೆ Post ಮಾಡಲಿಲ್ಲವಂತೆ!

(ಸಂಗ್ರಹ) ಪಿ. ಎಚ್. ಸ್ವಾಮಿ

# ಇದಮ್ಮ ಜೀವ ಇದು ಜೀವನ

ನಾನು ನನ್ನ ಉದ್ಯೋಗ ನಿಮಿತ್ತ ಶಿವಮೊಗ್ಗ ದಿಂದ ಭದ್ರಾವತಿಗೆ ಪ್ರತಿದಿನ ರೈಲಿನಲ್ಲಿ ಪ್ರಯಾಣಿಸುತ್ತಿದ್ದೆ. ಆ ದಿನ ನನಗೆ ರೈಲು ತಪ್ಪಿದ್ದರಿಂದ ಬಸ್ಸಿನಲ್ಲಿಯೇ ಹೋಗೋಣವೆಂದು ಶಿವಮೊಗ್ಗದ ತುಂಗಾ ನದಿಯ ದಡದಲ್ಲಿರುವ ಬಸ್ಸು ನಿಲ್ದಾಣಕ್ಕೆ ಹೋದೆ. ಆ ಸಮಯದಲ್ಲಿ ನಿಲ್ದಾಣದ ಸಿಮೆಂಟ್ ಬೆಂಚಿನ ಮೇಲೆ ತುಂಬಾ ಚಿಂದಿ ಚಿಂದಿಯಾದ ಉಡುಪು ತೊಟ್ಟು, ನೋಡಿದರೆ ಅಸಹ್ಯ ಬರುವ ರೀತಿಯಲ್ಲಿ ಹುಚ್ಚನಂತಿಪ್ಪ ಗಡ್ಡಧಾರಿ ವ್ಯಕ್ತಿಯೊಬ್ಬ ಕಾಲು ಚಾಚಿ ಮಲಗಿದ್ದ. ಸಮೀಪದಲ್ಲಿ ಯುವತಿಯೊಬ್ಬಳು ಭದ್ರಾವತಿಯ ಕಡೆ ಪ್ರಯಾಣಿಸಲು ಬಸ್ಸು ಕಾಯುತ್ತಿದ್ದಳು. ಸ್ವಲ್ಪ ಹೊತ್ತಿನಲ್ಲಿ ಬಸ್ಸು ದೂರದಿಂದ ಬರುವುದು ಕಾಣಿಸಿ, ಯುವತಿ ಹೊರಡಲು ಹೆಜ್ಜೆ ಮುಂದಿಟ್ಟಳು. ತಕ್ಷಣ ಬೆಂಚಿನ ಮೇಲೆ ಮಲಗಿದ್ದ ವ್ಯಕ್ತಿ ಆ ಯುವತಿಯನ್ನು ಕುರಿತು, ''ಎಲ್ಲಿಗೆ ಸಾಯಲಿಕ್ಕೆ ಹೋಗುತ್ತಿದ್ದೀಯ'' ಎಂದು ಒಂದೇ ಸಾರಿ ಅಬ್ಬರಿಸಿ ನಂತರ ಏನೂ ನಡೆಯದವನಂತೆ ಕಣ್ಣು ಮುಚ್ಚಿ ಮಲಗಿದ. ಆ ಅಬ್ಬರಕ್ಕೆ ಬೆಚ್ಚಿ ಯುವತಿಯು ನನ್ನ ಕಡೆ ತಿರುಗಿ ನೋಡಣ್ಣ ಇವನು ಹಿಂಗ್ಯಾಕೆ ಅಂತಾನೆ ಎಂದು ಗಾಬರಿಯಿಂದಲೇ ಪ್ರಶ್ನಿಸಿದಳು. ನಾನು ಕೂಡ ಆ ವ್ಯಕ್ತಿಯ ವಿಚಿತ್ರ, ನಡವಳಿಕೆಯಿಂದ ಬೆಚ್ಚಿಬೀಳುವಂತಾಯ್ತು. ನನ್ನಿಂದ ಏನೂ ಪ್ರತಿಕ್ರಿಯೆ ಬಾರದಾಗ ಯುವತಿಯು ನಾನು ಬಸ್ಸಿಗೆ ಹೋಗುವುದಿಲ್ಲ, ಮನೆಗೆ ಹೋಗುತ್ತೇನೆಂದು ಚಿಕ್ಕಳಿಸುತ್ತಾ ಹೊರಟುಹೋದಳು. ಇಷ್ಟು ನಡೆಯುವಾಗ ಬಸ್ಸು ಹೊರಟುಹೋಗಿತ್ತು. ನಾನು ಸಹ ಅರ್ಧ ಗಂಟೆಯ ನಂತರ ಬಂದ ಇನ್ನೊಂದು ಬಸ್ಸಿನಲ್ಲಿ ಹೊರಟೆ. ಹಾಗೆ ನಾನು ಸುಮಾರು 3-4 ಮೈಲಿ ದೂರ ಸಾಗಿರಬಹುದು, ಅಲ್ಲಿ ಮೊದಲು ಹೋಗಿದ್ದ ಬಸ್ಸು ಅಪಘಾತಕ್ಕೆ ಈಡಾಗಿ ಉರುಳಿ ಬಿದ್ದಿದ್ದು ಕಂಡು ಆಶ್ಚರ್ಯಪಟ್ಟೆ. ಅದರಲ್ಲಿದ್ದ ಕೆಲವು ಜನರಿಗೆ ತೀವ್ರ ಪೆಟ್ಟಾಗಿದ್ದಾಗಿ ತಿಳಿಯಿತು.

ಹುಚ್ಚನಂತಿದ್ದ ವ್ಯಕ್ತಿಯ ಎಚ್ಚರಿಕೆ ಮೀರಿ ಯುವತಿ ಬಸ್ಸಿನಲ್ಲಿ ಪಯಣಿಸಿದ್ದರೆ ಖಂಡಿತವಾಗಿಯೂ ಸಾಯುತ್ತಿದ್ದಳೇನೋ! ಆತನ ಎಚ್ಚರಿಕೆಗೆ ಭಯಪಟ್ಟು ನಾನು ಕೂಡ ಬಸ್ಸನ್ನು ಹತ್ತದಂತೆ ಪ್ರೇರೇಪಣೆಯಾದದ್ದು ಸಹ ಯಾವುದೋ ಅದೃಶ್ಯ ಶಕ್ತಿಯ ಕೈವಾಡವೇ ಸರಿ. ಆ ವ್ಯಕ್ತಿ ಮತ್ತು ವ್ಯಕ್ತಿಯ ಮೂಲಕ ನುಡಿಸಿದ ಎಚ್ಚರಿಕೆಯ ಮಾತುಗಳು ಇನ್ನೂ ನಿಗೂಢವೇ!!

● *ಎಂ.ಎಸ್.ಚಂದ್ರು*

ನನ್ನ ವಿದ್ಯಾರ್ಥಿಯೊಬ್ಬ ಕಳೆದ ವರ್ಷ ಪದವೀಧರನಾಗಿ ಉದ್ಯೋಗಾರ್ಥಿಯಾಗಿ ಬೆಂಗಳೂರಿಗೆ ತೆರಳಿದ. ಪ್ರತಿಭೆ ಹಾಗೂ ವಿದ್ಯಾರ್ಹತೆ ಇದ್ದರೂ ಪೈಪೋಟಿಯ ಇಂದಿನ ದಿನಗಳಲ್ಲಿ ಪ್ರಭಾವಕ್ಕೆ ಹೆಚ್ಚು ಪ್ರಾಮುಖ್ಯತೆ ಇರುವಂಥ ಸಂದರ್ಭದಲ್ಲಿ ಇಲ್ಲಿಯೂ ತಕ್ಕುದಾದ ಹುದ್ದೆ ಆತನಿಗೆ ದೊರೆಯಲಿಲ್ಲ. ತನ್ನ ಈ ಕೊರಗನ್ನು ಆಗಾಗ ಪತ್ರಮುಖೇನ ನನಗೆ ತಿಳಿಸುತ್ತಿದ್ದ. ಕಳೆದ ವಾರ ಊರಿಗೆ ಬಂದಿದ್ದಾಗ ನನ್ನನ್ನು ಭೇಟಿ ಮಾಡಿ ಖಾಸಗಿ ಕಂಪನಿಯೊಂದರಲ್ಲಿ ಕೆಲಸ ಸಿಕ್ಕಿದ ವಿಷಯ ಹೇಳಿದಾಗ ಅಭಿನಂದಿಸಿದೆ. ಆದರೆ ಆತ ಮುಂದುವರಿದು ಹೇಳಿದ - ''ನಾನು ಈಗ ಕೆಲಸದಲ್ಲಿರುವ ಕಂಪನಿ ತಮಿಳುನಾಡಿನವರದ್ದು. ಅಲ್ಲಿ ತಮಿಳಿನವರಿಗೇ ಆದ್ಯತೆ. ಚೆನ್ನಾಗಿ ತಮಿಳು ಮಾತನಾಡಲು

ಅಲ್ಲಿ ನಾನು ಗೆಳೆಯನೊಬ್ಬನ ಮೂಲಕ 'ನಾನೂ ತಮಿಳಿನವನೇ' ಎಂದು ಹೇಳಿ ಕೆಲಸ ಗಿಟ್ಟಿಸಿಕೊಂಡೆ; ಬೇರೆ ದಾರಿಯಿರಲಿಲ್ಲ'' ಆತ ಕನ್ನಡಿಗನಾಗಿ, ಕನ್ನಡನಾಡಿನಲ್ಲೇ ತಾನು ಕನ್ನಡದವನಲ್ಲವೆಂದು ಹೇಳಿಕೊಳ್ಳುವ ಪರಿಸ್ಥಿತಿ ಬಂದಿತ್ತು! ಕನ್ನಡನಾಡಿನ ರಾಜಧಾನಿಯಲ್ಲಿ ಕನ್ನಡಕ್ಕೆ, ಕನ್ನಡಿಗರಿಗೆ ಉಂಟಾಗುತ್ತಿರುವ ಅನ್ಯಾಯ, ಒದಗಿಬರುತ್ತಿರುವ ಹೀನಾಯ ಪರಿಸ್ಥಿತಿಗೆ ಇದೊಂದು ನಿದರ್ಶನ ಮಾತ್ರವೇನೋ!

● ***ಡಿ. ಅರವಿಂದ ಭದ್ರಾವತಿ***

**ನಾ**ನು ದ್ವಿತೀಯ ಬಿ.ಎಸ್ಸಿಯಲ್ಲಿ ಓದುತ್ತಿದ್ದ ಸಮಯ. ಆಗ ನಮ್ಮ ಥಿಯರಿ ಪರೀಕ್ಷೆಗಳೆಲ್ಲ ಮುಗಿದು ಪ್ರಾಕ್ಟಿಕಲ್ ಪರೀಕ್ಷೆ ನಡೆಯುತ್ತಿತ್ತು.

ಅಂದು ಭಾನುವಾರವಾದ ಕಾರಣ ನಾನು ಸ್ನಾನ ಮಾಡಲು ತಲೆ ತುಂಬಾ ಎಣ್ಣೆ ಮೆತ್ತಿಕೊಂಡು ಬಿಚ್ಚೋಲೆ ಗೌರಮ್ಮಳ ಹಾಗೆ ಕುಳಿತಿದ್ದೆ. ನನ್ನ ರೂಮ್‌ಮೇಟ್ ಬೇರೆ ಬ್ಯಾಚಿನಲ್ಲಿದ್ದ ಕಾರಣ ಅವಳ ಪರೀಕ್ಷೆಗಳೆಲ್ಲ ಮುಗಿದು ಊರಿಗೆ ಹೊರಡುವ ತಯಾರಿನಲ್ಲಿದ್ದಳು. ಅವಳನ್ನು ಕರೆದುಕೊಂಡು ಹೋಗಲು ಅವಳ ತಂದೆಯವರು ಹಾಸ್ಟೆಲ್ ಗೇಟಿನ ಬಳಿ ಕಾಯುತ್ತಿದ್ದರು. ನಾನು ಅವಳೊಂದಿಗೆ ಅವಳ ಭಾರವಾದ ಪೆಟ್ಟಿಗೆಯನ್ನು ಹಿಡಿದುಕೊಂಡು, ಅವಳನ್ನು ಬೀಳ್ಕೊಡಲು ಹೊರಟೆ. ಗೇಟಿನ ಬಳಿ ಸಾಮಾನನ್ನು ಇಳಿಸಿ, ಅವಳು ವಾರ್ಡನ್‌ರವರ ಅಪ್ಪಣೆ ಪಡೆಯಲು ಅವರ ರೂಮಿಗೆ ಹೋದಳು. ನಾನು ಗೇಟಿನ ಬಳಿ ಪೆಟ್ಟಿಗೆಯನ್ನು ಇಳಿಸಿ ನಿಂತೆ. ಅಲ್ಲೇ ನಿಂತಿದ್ದ ಅವಳ ತಂದೆಯವರು ಜೇಬಿನಿಂದ ಎರಡು ರೂಪಾಯಿಯ ನೋಟನ್ನು ತೆಗೆದು ನನ್ನ ಮುಂದೆ ಹಿಡಿದರು. ಪರಿಸ್ಥಿತಿಯ ಅರಿವಾಗಿ ನನ್ನ ಮುಖ ಅಪಮಾನದಿಂದ ಕೆಂಪಾಯಿತು. ಅವರು ನನ್ನನ್ನು ಕೆಲಸದವಳೆಂದು ಭಾವಿಸಿದ್ದರು. ನನ್ನ ಮುಖ ನೋಡಿ ಅವರಿಗೂ ತಮ್ಮ ತಪ್ಪಿನ ಅರಿವಾಗಿರಬೇಕು. ಪೆಚ್ಚಾಗಿ ನಗುತ್ತಾ ನೋಟನ್ನು ಜೇಬಿನೊಳಗಿಳಿಸಿದರು. ನಾನು ಗೆಳತಿಯ ಬರುವನ್ನು ಕಾಯದೇ ರೂಮಿಗೆ ವಾಪಸಾದೆ.

ನಾಲ್ಕು ದಿನ ಕಳೆದು ನಾನು ಊರಿಗೆ ಹೋದಾಗ, ನನ್ನ ಗೆಳತಿ ಕ್ಷಮೆಯಾಚಿಸಿ ಬರೆದ ಪತ್ರ ನನ್ನ ದಾರಿ ಕಾಯುತ್ತಿತ್ತು.

● ***ತಾರ ಸುಂಟಿಕೊಪ್ಪ***

**ಸ**ದಾಕಾಲ ಸಮಯ ಪ್ರಜ್ಞೆಯ ಅಭಾವದಿಂದ ನರಳುವ ಸರಕಾರಿ ಬಸ್ಸುಗಳಿಗಾಗಿ ನಿಲ್ದಾಣದಲ್ಲಿ 'ಕಾಯು'ವ ಅನುಭವ ಸಾಮಾನ್ಯವಾಗಿ ಎಲ್ಲರಿಗೂ ಆಗಿರುತ್ತದೆ. 'ವಿಚಾರಣೆ' ಫಲಕದ ಹಿಂದೆ ಮುಖ ಸಿಂಡರಿಸಿಕೊಂಡು ಕುಳಿತ ವ್ಯಕ್ತಿಯನ್ನು ಬಸ್ಸಿನ ಬಗ್ಗೆ ವಿಚಾರಿಸಿ ಅಸಡ್ಡೆಯ ಉತ್ತರ ಪಡೆಯುವುದು ಸಹ ಅತಿ ಸಾಮಾನ್ಯ. ಆದರೆ ಹಾವೇರಿ ಬಸ್ ನಿಲ್ದಾಣದಿಂದ ಪಯಣ ಹೊರಟವರಿಗೆ ಮಾತ್ರ ಹೊಸದೊಂದೇ ಆದ ಅನುಭವ ಕಾದಿರುತ್ತದೆ.

ನಿಲ್ದಾಣಕ್ಕೆ ಬಸ್ಸು ಬಂದ ತಕ್ಷಣವೇ ಅಂಗವಿಕಲ ವ್ಯಕ್ತಿಯೊಬ್ಬ ಅದು ಹೋಗುವ ಊರುಗಳ ಹೆಸರುಗಳನ್ನು ಜೋರು ದನಿಯಲ್ಲಿ ಕೂಗಿ ಪ್ರಯಾಣಿಕರನ್ನು ಎಚ್ಚರಿಸುತ್ತಾನೆ. ಅಡಿಯಿಂದ ಮುಡಿಯವರೆಗೆ ಹೇಗೆ ಅಳೆದರೂ ಎರಡು ಅಡಿ ಮೀರದ ಈ ವ್ಯಕ್ತಿಯ ಹೆಸರು ರಜಾಕಮಿಯ ಸವಣೂರು. ಈತನಿಗೆ ಎರಡೂ ಕಾಲುಗಳಿಲ್ಲ. ಬರಿ 'ಕೈಚಳಕ'ದಿಂದಲೇ ಕಾಲುಳ್ಳವರು ನಾಚುವಂತೆ ಚಕಚಕನೆ ಓಡಾಡುತ್ತ ಪ್ರಯಾಣಿಕರಿಗೆ ಅನುಕೂಲ ಮಾಡುತ್ತಾನೆ. ಸಾರಿಗೆ ಸಂಸ್ಥೆಯವರೇ ಧ್ವನಿವರ್ಧಕದಲ್ಲಿ ನೀಡಬೇಕಾದ ವಿವರಗಳನ್ನು ಈ ಅಂಗವಿಕಲ ವ್ಯಕ್ತಿ ಒಂದಿನಿತೂ ಬೇಸರಿಸದೆ ಶ್ರದ್ಧೆಯಿಂದ ನೀಡುತ್ತಾನೆ.

ಭಿಕ್ಷೆ ಬೇಡಿ ಉದರ ನಿರ್ವಹಿಸುವಷ್ಟು ಸ್ವಾಭಿಮಾನಹೀನನಲ್ಲದ ರಜಾಕಮಿಯ ಸ್ವತಃ ಕಾಲಿಲ್ಲದಿದ್ದರೂ ನಡೆದಾಡುವ ಜನರಿಗೆ 'ಮಾರ್ಗದರ್ಶನ' ನೀಡುವುದರಲ್ಲೇ ಸಂತೃಪ್ತಿ ಕಂಡುಕೊಳ್ಳುವ ಅಪರೂಪದ ಹೃದಯವಂತ. ಇಂಥವರು ಎಷ್ಟು ಜನ ಸಿಕ್ಕಾರು?

● ***ರಾಮು ಅನೂರ***

ಮೂಲ : ಶ್ರೀ ಜಗನ್ನಾಥ ಶರ್ಮಾ
ಕನ್ನಡಕ್ಕೆ : 'ರಂಗನಾಥ'




ಅಪ್ಪ ಎಂದರೆ ಮುತ್ತು! ಅಪ್ಪ ಎಂದರೆ ಮಿಂಚು! ಅಪ್ಪ ಎಂದರೆ ಸ್ಪರ್ಶ! ಅಪ್ಪ ಎಂದರೆ ಸುವಾಸನೆ!

ಅಪ್ಪನನ್ನು ಕುರಿತು ನನಗಿಷ್ಟೇ ಗೊತ್ತು! ನನಗೆ ಏಳೆಂಟು ವರ್ಷವಿದ್ದಾಗ, ಅಪ್ಪ ಗಿಡ್ಡವಾಗಿದ್ದರು. ಕುಂಬಳಕಾಯಿಯ ಬೀಜದಂತೆ ಪಳದಿಯಿದ್ದರು. ಮಡಿ ಪಂಚೆಯನ್ನುಟ್ಟು, ಮೇಲೆ ಜುಬ್ಬಾ ಧರಿಸುತ್ತಿದ್ದರು.

ಉಷ್ಣ ಶರೀರವಂತೆ, ಯೌವ್ವನದ ವೇಳೆಗೇ ಅಪ್ಪನ ತಲೆ ನರೆತಿತ್ತಂತೆ! ಅಮ್ಮ ಹೇಳಿದಳು. ಆದ್ದರಿಂದ ತಲೆಯ ಮೇಲೆ ಮೇಘ ಶಕಲವನ್ನು ಇರಿಸಿಕೊಂಡಿರುವಂತೆ ಬೆಳ್ಳ ಬೆಳ್ಳನೆಯ ಉದ್ದವಾದ ಕೂದಲಿನಿಂದ ನೋಟಕ್ಕೆ ಮೋಹಕವಾಗಿ ಕಾಣುತ್ತಿದ್ದರವರು.

ಅಪ್ಪ ಹುಟ್ಟಿ, ಕಣ್ಣು ಬಿಚ್ಚಿ, ಅಜ್ಜಿಯನ್ನು ನೋಡಿಯೇ ಇಲ್ಲವಂತೆ! ಅಜ್ಜಿ ಕಣ್ಮುಚ್ಚಿದ್ದಳಂತೆ! ಅಜ್ಜನೇ ಅಪ್ಪನನ್ನು ಬೆಳೆಸಿ, ದೊಡ್ಡವನನ್ನಾಗಿ ಮಾಡಿದರೆಂದು ಅಮ್ಮ ಹೇಳುತ್ತಾಳೆ. ಅಮ್ಮನನ್ನು ಅಪ್ಪನಿಗೆ ಗಂಟು ಹಾಕಿ, ಅಜ್ಜ ಸ್ವರ್ಗ ಸೇರಿದರೆಂದು ಕೂಡಾ ಹೇಳಿದಳು.

ಮದುವೆಯಾದ ಮೂರು ವರ್ಷಕ್ಕೆ ಅಕ್ಕ ಹುಟ್ಟಿದಳು. ನಂತರ ನಾನು ಹುಟ್ಟಿದೆ. ನಾನು ಹುಟ್ಟಿದ ಮೂರು ವರ್ಷದವರೆಗೆ ಅಪ್ಪ ನಮ್ಮೊಂದಿಗೇ ಇದ್ದರಂತೆ. ಎದುರಿಗಿದ್ದು ಬೇಕಾದುದನು ನೋಡಿಕೊಳ್ಳುತ್ತಿದ್ದರಂತೆ! ಮನೆಯಲ್ಲಿಯೇ ಇರುತ್ತಿದ್ದರಂತೆ! ಮನೆಯ ಹಿಂದಿನ ಸ್ಥಳದಲ್ಲಿ ಪಡುವಲಕಾಯಿಯ ಬಳ್ಳಿಯನ್ನು ಬೆಳೆಸುತ್ತಿದ್ದರಂತೆ, ಮಲ್ಲಿಗೆಯ ಸಸಿಗಳನ್ನು ನಾಟುತ್ತಿದ್ದರಂ ಚೆಂಡು ಹೂವುಗಳ 'ನಡುವೆ' ಚೆಲುವಾಗಿ ನಿಲ ತ್ತಿದ್ದರಂತೆ!

ಆಮೇಲೆ ಏನಾಯಿತೆಂದರೆ ಅಮ್ಮ ಬಿಕ್ಕಿ ಬಿ ಅಳುತ್ತಿದ್ದಳೇ ಹೊರತು ಏನೂ ಹೇಳುತ್ತಿರಲಿಲ್ಲ ಮತ್ತಷ್ಟು ಕೇಳಿದರೆ 'ಅದೇನು ಕಥೆಯೋ' ಎಂದು ಬೇಸರ ಪಡುತ್ತಿದ್ದಳು.

ಅಪ್ಪ ಎಂದರೆ ಕಥೆಯೆಂದು ಅಮ್ಮನಿಗೆ ತಿ ಯದು ಪಾಪ!

ಬೇಸಾಯದೊಂದಿಗೆ ಹಿಂದುಳಿದ ಪ್ರಾಂತಗಳಲ್ಲಿ ಅಪ್ಪ ವ್ಯಾಪಾರ ಮಾಡುತ್ತಿದ್ದರಂತೆ! ಗುಡ್ಡ ಬೆಟ್ಟಗಳಲ್ಲಿ ವಾಸ ಮಾಡುವ ಬೆಟ್ಟದ ದೊರೆಗಳಿಂದ ಅಳಲೇಕಾಯಿ, ಕತಕ ಬೀಜಗಳು, ಮೂಲಿಕೆಗಳು, ಜೇನುಗಳನ್ನು ಕೊಂಡು ಇಲ್ಲಿ ನಮ್ಮ ಊರಿನಲ್ಲಿ ಅವುಗಳನ್ನು ಮಾರಬೇಕೆಂದು ಮಾಡಿದ್ದರಂತೆ! ಲಾಭದ ಮಾತು ಹಾಗೆ ಬಿಟ್ಟು, ಆ ವ್ಯಾಪಾರ ವ್ಯವಹಾರದಲ್ಲಿ ಅಮ್ಮ ಅಪ್ಪನನ್ನೇ ಕಳೆದುಕೊಳ್ಳಬೇಕಾಗಿ ಬಂತು ಎಂದಳು.

ನನಗೆ ನಾಲ್ಕು ವರ್ಷ ವಯಸ್ಸಿದ್ದಾಗ, ನಮ್ಮ ಮನೆಯ ಮೇಲೆ ಖಾಕೀ ಕಾಗೆಗಳು ದಾಳಿ ಮಾಡಿದವು. ಅಪ್ಪನನ್ನು ಪ್ರಶ್ನೆಗಳಿಂದ ಕೊಂದು ಕೊಂದು ತಿಂದವಂತೆ. ಅಪ್ಪನ ಪುಸ್ತಕಗಳನ್ನು ಕೊಕ್ಕಿನಿಂದ ಹಿಡಿದುಕೊಂಡು ಹೋದದ್ದಲ್ಲದೇ, ಅಪ್ಪನನ್ನು ಸುತ್ತುವರಿದು ಎಳೆದುಕೊಂಡು ಹೋದವಂತೆ!

''ಯಾಕೆ ಎಳೆದುಕೊಂಡು ಹೋದವೆಂದು'' ಕೇಳಿದರೆ ಅಮ್ಮ ಕಾರಣಗಳನ್ನು ಹೇಳುತ್ತಿರಲಿಲ್ಲ ಕಣ್ಣೀರನ್ನು ಸುರಿಸುತ್ತಿದ್ದಳು.

''ಪುರಾಣವೇನು?'' ಎನ್ನುತ್ತಿದ್ದಳು.

ಅಪ್ಪ ಎಂದರೆ ಪುರಾಣವೆಂದು ಹುಚ್ಚು ತಾಯಿಗೆ ತಿಳಿಯದು.

ಆಸ್ತಿ ಎಲ್ಲವನ್ನೂ ಮಾರಿ, ಕಾಗೆಗಳಿಂದ ಅಪ್ಪನನ್ನು ರಕ್ಷಿಸಿಕೊಳ್ಳಬೇಕೆಂದುಕೊಂಡಿದ್ದಳಂತೆ ಅಮ್ಮ - ಆಪ್ತರೊಡನೆ ಮಾತುಕತೆ ಕೂಡ ನಡೆಸಿದ್ದಳಂತೆ. ಆದರೆ ಅವಕಾಶ ಕೊಡದೆ, ಕಾಗೆಯ ಗೂಡಿನಿಂದ ತಪ್ಪಿಸಿಕೊಂಡು ಗುಡ್ಡಗಾಡಿಗೆ ಅಪ್ಪ ಓಡಿಹೋದರಂತೆ! ಒಂದು ವರ್ಷದವರೆಗೆ ಕಾಣಿಕೆಯೇ ಇಲ್ಲವಂತೆ! ಆಗ ನನಗೆ ಐದು ವರ್ಷದ ವಯಸ್ಸಂತೆ!

ನನ್ನನ್ನು ಶಾಲೆಗೆ ಸೇರಿಸಿದರು. 'ಅ' ಬರೆದು, 'ಪ' ಕೆಳಗೆ 'ಪ' ಬರೆದರೆ 'ಪ್ಪ-ಅಪ್ಪ' ಎಂದು ರಾತ್ರಿಯ ವೇಳೆಯಲ್ಲಿ ಅಕ್ಕ ನನಗೆ ಪಾಠ ಹೇಳುತ್ತಿದ್ದರೆ, ಮೂಗು ಎಳೆದುಕೊಳ್ಳುತ್ತಾ ಮೂಕಳಂತೆ ಅಮ್ಮ ಕರಗಿ ಹೋಗುತ್ತಿದ್ದಳು.

'ಅದೆಂಥಾ ಪಾಠ!' ಎನ್ನುತ್ತಿದ್ದಳು.

ಅಪ್ಪ ಎಂದರೆ ಪಾಠವೆಂದು ತಿಳಿದುಕೊಳ್ಳಲಾರದ ಬೆಪ್ಪಿ ಅಮ್ಮ.

ಒಂದಾನೊಂದು ರಾತ್ರಿ, ನನ್ನ ಕೆನ್ನೆಗಳ ಮೇಲೆ ತುಟಿಯೂರಿದ ಸ್ಪರ್ಶ ಆಯಿತು. ಮರುಘಳಿಗೆಯಲ್ಲಿ ಬಿರುಸಾದ ಸ್ಪರ್ಶ ತಗಲಿ ಕಚಗುಳಿಯಿಟ್ಟಂತಾಯಿತು. ಕಣ್ಣು ತೆರೆದು ನೋಡಿದರೆ! ಲಾಟೀನನ್ನು ಎತ್ತಿ ಹಿಡಿದು ನಿಂತ ಅಮ್ಮ ಕಾಣಿಸಿದಳು. ಒಂದೆಡೆಗೆ ಅಮ್ಮ ಹಾಗೆ ನಿಂತಿದ್ದರೆ, ಇನ್ನೊಂದೆಡೆ ಗಡ್ಡದಾಗಿ, ಕುಂಬಳ ಬೀಜದಂತೆ ಹಳದಿಯಾಗಿ, ಮಡಿಪಂಚೆಯನ್ನು ಸುತ್ತಿಕೊಂಡಿರುವ ಬೇರೆಯಾರೋ ನಿಂತಿದ್ದರು. ನಿದ್ದೆ ಚೆದುರಿ ಹೋಯಿತು. ಎದ್ದು ಮಂಚದ ಮೇಲೆ ಕುಳಿತುಕೊಂಡೆ.

''ಯಾರಮ್ಮಾ?'' ಕೇಳಿದೆ. ಅಮ್ಮ ಉತ್ತರ ಕೊಡಲಿಲ್ಲ. ಕಿರುನಗೆ ನಕ್ಕಳು. ನನ್ನನ್ನು ತಮ್ಮ ಉಡಿಯಲ್ಲಿ ಕೂರಿಸಿಕೊಂಡರವರು.

''ಏನು ಓದುತ್ತಿದ್ದೀಯಾ?'' ಎಂದು ಕೇಳಿದರು.

''ಒಂದನೇ ತರಗತಿ'' ಎಂದು ಹೇಳಿದೆ.

'ಅವನಿಗೆ ವಾರದ ಹೆಸರುಗಳೆಲ್ಲಾ ಬರುತ್ತವೆ' ಎಂದಳು ಅಕ್ಕ. 'ನಿಜವೇನು?' ಅವರು ಅಚ್ಚರಿ ಹೊಂದಿದರು. ಕಣ್ಣು ದೊಡ್ಡವು ಮಾಡಿ ನನ್ನನ್ನು ಮೆಚ್ಚುಗೆಯಿಂದ ನೋಡಿದರು.

''ಹೇಳಲೇನು?'' ಎಂದೆ. ಅವರು ಹೇಳೆನ್ನುವಂತೆ ತಲೆಯಾಡಿಸಿದರು.

ಆದಿವಾರ ಒಂದು, ಸೋಮವಾರ ಎರಡು, ಮಂಗಳವಾರ ಮೂರು. ಬುಧವಾರ ನಾಲ್ಕು, ಗುರುವಾರ ಐದು, ಶುಕ್ರವಾರ ಆರು, ಶನಿವಾರ ಏಳು ಈ ಏಳೂ ವಾರಗಳ ಹೆಸರುಗಳು! ಎಂದು ಒಪ್ಪಿಸಿದೆ. ಖುಷಿಯಾದರವರು. ಇನ್ನೂ ಬಿಗಿಯಾಗಿ ಅಪ್ಪಿಕೊಂಡರು. ಮುದ್ದುಗರೆದರು ಅವರ ತುಟಿಗಳು ಗಮ್ಮತ್ತಾದ ವಾಸನೆಯನ್ನು ಬೀರಿದವು. ಮತ್ತೇ ಮತ್ತೇ ಕೆನ್ನೆಯ ಮೇಲೆ ಮುತ್ತಿಟ್ಟರೆ ಚೆನ್ನಾಗಿತ್ತೆಂದೆನಿಸಿತು.

ಅಮ್ಮ ನೆಲಗಡಲೆ ಬೀಜವನ್ನು ಹುರಿದು ತಂದಳು. ಮೊರದಲ್ಲಿರಿಸಿದಳು. ಒಂದಿಷ್ಟು

ಬೆಲ್ಲದ ಚೂರನ್ನು ಕೂಡಾ ಹತ್ತಿರ ಇರಿಸಿದಳು. 'ತಿನ್ನುತ್ತೀಯಾ?' ಕೇಳಿದರವರು.

''ಅರ್ಧ ರಾತ್ರಿಯಲ್ಲಿ ತಿಂದರೆ ಅರಗಿಸಿಕೊಳ್ಳಲಾರ! ಅವನಿಗೆ ಬೇಡ ಬಿಡಿ'' ಎಂದಳಮ್ಮ. ಸುಲಿದು ಬೀಜಗಳನ್ನು ಮುಷ್ಟಿಯಲ್ಲಿ ಅವರಿಗೆ ಕೊಡಹತ್ತಿದಳು. ಒಂದು ಕೈಯಿಂದ ಅವುಗಳನ್ನು ತೆಗೆದುಕೊಂಡು ತಿನ್ನುತ್ತಾ ಮತ್ತೊಂದು ಕೈಯಿಂದ ನನ್ನ ತಲೆ ನೇವರಿಸುತ್ತಾ ಕೂತಿದ್ದರವರು. ನಿದ್ದೆ ಕವಿದು ಬರುತ್ತಿದ್ದರೆ ಅವರ ಎದೆಯ ಮೇಲೆ ಒರಗಿ ಬೆಚ್ಚಬೆಚ್ಚಗೆ ನಿದ್ದೆ ಮಾಡಿದೆ.

ಬೆಳಗಾಗೆ ಎದ್ದು ನೋಡುವ ವೇಳೆಗೆ ಅವರ ಉಡಿಯಲ್ಲಿರಲಿಲ್ಲ ನಾನು, ಯಥಾಪ್ರಕಾರ ಮಂಚದ ಮೇಲೆ ಇದ್ದೆ.

'ರಾತ್ರಿ ಬಂದದ್ದು ಯಾರೇ?' ನಾನು ಕೇಳಿದೆ.

''ಯಾರು ಬಂದಿದ್ದರು? ಯಾರೂ ಬರಲಿಲ್ಲ'' ಅಮ್ಮ ಎಂದಳು. ಮಜ್ಜಿಗೆ ಕಡೆಯುವ ಕವಗೋಲಿಗಾಗಿ ಹುಡುಕುವುದನ್ನು ಮೊದಲು ಮಾಡಿದಳು.

''ಗಿಡ್ಡಗಿದ್ದರು ನೋಡೂ! ನನ್ನನ್ನು ಮುದ್ದಿಸಿದ್ದರು ನೋಡೂ! ನಾನವರ ಉಡಿಯಲ್ಲಿ ಮಲಗಿದ್ದೆ ನೋಡೂ! ಅವರು ಬಂದಿದ್ದರಲ್ಲವೇ?'' ಎಂದರೆ-

''ಕನಸು ಕಂಡಿರುತ್ತೀ'' ಎಂದಳಮ್ಮ.

''ಥಲೋ ಕನಸು'' ಎಂದೆ ನಾನು.

ಅಪ್ಪ ಎಂದರೆ ಕನಸೆಂದು ಅಮ್ಮನಿಗೆ ತಿಳಿದೇ ತಿಳಿಯದು.

ಆ ದಿನ ನನ್ನನ್ನು ಶಾಲೆಗೆ ಕಳುಹಿಸಲಿಲ್ಲ. ಹೋಗುತ್ತೇನೆಂದರೆ ಬೇಡವೆಂದಳು. ತನ್ನ ಹಿಂದೇ ನನ್ನನ್ನು ಇಟ್ಟುಕೊಂಡಳು.

ಬಹಳ ದಿನಗಳ ನಂತರ ಒಂದು ಮಳೆಯ ರಾತ್ರಿ ನಿದ್ದೆಯಿಂದ ಎಚ್ಚೆತ್ತು ಬಂದು ನೋಡಿದರೆ! ಅವರೇ ನನ್ನನ್ನು ಮುದ್ದಿಸುತ್ತಾ ಮತ್ತೇ ಕಾಣಿಸಿದರು, ತನ್ನ ಬಿರುಸುಗಡ್ಡದ ಕೆನ್ನೆಗಳಿಗೆ ನನ್ನ ಕೆನ್ನೆಗಳನ್ನು ಅದುಮಿಕೊಳ್ಳುತ್ತಾ. ಲಾಟೀನಿನ ಬೆಳಕು ಅವರ ಮೂಗಿನ ಮೇಲೆ ಪ್ರತಿಫಲಿಸುತ್ತಿತ್ತು. ನೋಟ ಹರಿಸಿ ನೋಡಿದೆ. ಅಮ್ಮ



''ನಿಮ್ಮ ಮನವಿ ಪತ್ರಗಳನ್ನು ಇನ್ನೊಮ್ಮೆ ಬಂದಾಗ ತೆಗೆದುಕೊಂಡು ಹೋಗ್ತೀನಿ ಆಗಬಹುದೇ? ಕಾರಿನ ಡಿಕ್ಕೀಲಿ ಜಾಗ ಇಲ್ಲ!''

ದೀಪದ ಬತ್ತಿಯನ್ನು ಕಡಿಮೆ ಮಾಡಿದಳೇಕೋ ಬೆಳಕನ್ನು ಕುಗ್ಗಿಸಿ ಕಣ್ಣುಗಳಲ್ಲಿ ಬಚ್ಚಿಟ್ಟುಕೊಂಡಳು.

''ಬುಜ್ಜೀ! ಚೆನ್ನಾಗಿದ್ದೀಯಾ'' ಕೇಳಿದರವರು.

''ಅವನಿಗೇನು? ಚೆನ್ನಾಗಿದ್ದಾನೆ! ನಿದ್ದೆ ಮಾಡು ಕಂದಾ! ನಿದ್ದೆ ಮಾಡು'' ಎಂದಳಮ್ಮ ನನ್ನನ್ನು ಮಲಗಿಸಲು ಶುರು ಮಾಡಿದಳು. ಕಣ್ರೆಪ್ಪೆ ರೆದು ನೋಡುತ್ತಿದ್ದೆ ಎಲ್ಲವನ್ನೂ. ಅವರು ಬೀಡಿ ಹಚ್ಚಿದರು. ಹೊಗೆಯ ವಾಸನೆ, ಅವರ ತುಟಿಗಳ ವಾಸನೆ ಒಂದಾಗಿರುವಂತೆ ನನಗೆ ತೋರಿತು. ಉಸಿರನ್ನು ಗಟ್ಟಿಯಾಗಿ ಎಳೆದು ಆ ವಾಸನೆಯನ್ನು ಎದೆಯಲ್ಲಿ ಹಿಡಿದಿಟ್ಟುಕೊಂಡು ನಿದ್ದೆಯಲ್ಲಿ ಕರಗಿ ಹೋದೆ.

ಬೆಳಗಿನ ಜಾವಕ್ಕೆ ಮಳೆ ನಿಂತಿತ್ತು. ಎಚ್ಚರವಾಗಿತ್ತು. ಅವರು ಇರಲಿಲ್ಲ. ಹಾಲನ್ನು ಹಿಂಡಿಕೊಳ್ಳುವುದಕ್ಕೆ ಕೈಯಲ್ಲಿ ತಂಬಿಗೆಯನ್ನು ಹಿಡಿದು ಮನೆಯ ಹಿಂದಿನ ಭಾಗದಲ್ಲಿಯ ಆಕಳ ದ ಬ ಅಮ್ಮ ಹೋಗುವುದರಲ್ಲಿದ್ದಳು.

''ಅಮ್ಮಾ! ರಾತ್ರಿ ಒಳ್ಳೇ ಕನಸು ಬಂದಿತ್ತು'' ಎಂದೆ.

''ಎಂಥಾ ಕನಸು'' ಕೇಳಿದಳು.

"ಗಿಡ್ಡಗಿದ್ದರು ನೋಡೂ, ನನ್ನನ್ನವರು ಮುದ್ದುಗರೆದರು ನೋಡೂ ....." ಎಂದು ಹೇಳತೊಡಗಿದೆ.

"ಕನಸೂಯಿಲ್ಲ ಏನೂಯಿಲ್ಲ! ಹುಚ್ಚು ಹಾಡೂ, ನೀನೂ" ಎಂದಳಮ್ಮ.

ಅಪ್ಪ ಎಂದರೆ ಹಾಡೆಂದು ಅಮ್ಮನ ಊಹೆಗೆ ನಿಲುಕಲಿಲ್ಲ.

ಚಳಿಗಾಲ!

ದೀಪಾವಳೀ ಹಬ್ಬದೊಂದಿಗೆ ಚಳಿ ದೀಪಗಳ ಹತ್ತಿರ ಬಂದಿತ್ತು. ಆ ದಿನಗಳಲ್ಲಿ ಬಟ್ಟೆಗಳ ಪೆಟ್ಟಿಗೆಯಲ್ಲಿ ಬಚ್ಚಿಟ್ಟಿದ್ದ ಹೊದಿಕೆಯನ್ನು ತೆಗೆದು ಬೆಚ್ಚಗಿರುವುದೆಂದು ಹೇಳಿ ಅಮ್ಮ ಅದನ್ನು ನನಗೆ ಹೊದೆದುಕೊಂಡು ಮಲಗಲು ಕೊಟ್ಟಳು. ಅಂಗಾತ ಮಲಗಿ ಹೊದಿಕೆಯನ್ನು ಮೇಲಕ್ಕೆ ಎಳೆದು ತಲೆ ಮುಚ್ಚುವಂತೆ ಮುಸುಕು ಹಾಕಿಕೊಂಡೆ. ಆಗ ರಾತ್ರಿಯ ಹೊತ್ತಿನಲ್ಲಿ ಬರುವ 'ಅವರೇ' ನನ್ನ ಶರೀರವನ್ನೆಲ್ಲಾ ತಡಪಿದಂತೆ ಅನಿಸಿತು. ಹೊದಿಕೆಯ ನೆರಳು ಅವರ ಗೂಡಿನಂತೆನಿಸಿತು. ಆ ಗೂಡೆಲ್ಲ ಅವರ ಪರಿಮಳದಿಂದ ತುಂಬಿದಂತೆನಿಸಿತು. ಉಚ್ಛ್ವಾಸ ನಿಶ್ವಾಸಗಳನ್ನು ಹೆಚ್ಚು ಮಾಡಿ ಖುಷಿ ಪಟ್ಟೆ. ಅಮ್ಮನನ್ನು ಕರೆದು "ಗಿಡ್ಡಗಿದ್ದರು ನೋಡೂ, ನನ್ನನ್ನವರು ಮುದ್ದುಗರೆದರು ನೋಡೂ ...... ಈ ಹೊದಿಕೆಯೆಲ್ಲಾ ಅವರ ವಾಸನೆಯಿಂದ ತುಂಬಿದೆ" ಎಂದು ಹೇಳಿದೆ. ಆಗ ಅಮ್ಮನ ಹತ್ತಿರ ಅಕ್ಕ ಕೂಡಾ ನಿಂತಿದ್ದಳು.

"ಅವರು ಯಾರೆಂದುಕೊಂಡಿದ್ದೀಯಾ?" ಕೇಳಿದಳಕ್ಕ.

"ಯಾರೇ?" ಕೇಳಿದೆ. ಆತುರದಿಂದ ಎದ್ದು ಕುಳಿತೆ. ಹೇಳಲು ಅಕ್ಕ ಬಾಯಿಬಿಟ್ಟಳೋ ಇಲ್ಲವೋ, ಅಮ್ಮ ಅಕ್ಕನ ಪ್ರಯತ್ನವನ್ನು ತಡೆದಳು.

"ಯಾರಾದರೆ ನಿನಗೇನೋ! ಮಲಗು! ಮಲಗು" ಎಂದಳು. "ಇವನೊಬ್ಬ ತುಂಟ! ಎಲ್ಲಾ ಬೇಕು" ಎಂದಳು. "ಎಲ್ಲವೂ ಬೇಡ! ಅಪ್ಪ [illegible] ಬೇಕು" ಎಂದು ಹೇಳಬೇಕೆನಿಸಿತು ಅಮ್ಮನೊಡನೆ. ಸಿಟ್ಟಾಗುವಳೆಂದು ಸುಮ್ಮನಿದ್ದೆ.

ಮರುದಿನ-

ವರಾಂಡದಲ್ಲಿ ಕುಳಿತು, ಬಿಸಿಲಿನಲ್ಲಿ ಬೇಯುತ್ತಾ ಅಕ್ಕ ಸ್ವೆಟರ್ ಹೆಣೆಯುತ್ತಿದ್ದಳು. ಸೂಜಿಗಳನ್ನು ವಿಚಿತ್ರವಾಗಿ ತಿರುಗಿಸುತ್ತಿದ್ದಳು. ಅದು ಆಟದಂತಿತ್ತು.

"ನನಗೇನಾ?" ಕೇಳಿದೆ ಅಕ್ಕನನ್ನು.

"ಅಲ್ಲ, ಅಪ್ಪನಿಗೆ" ಎಂದಳು.

"ಅಪ್ಪ ಎಲ್ಲಿದ್ದಾರೆ ಹೇಳೋದಿಲ್ವೇ?" ಗೋಗರೆದೆ.

ದೂರದಲ್ಲಿಯ ಬೆಟ್ಟಗಳನ್ನು ತೋರಿಸಿದಳು. ಬೆಟ್ಟಗಳ ಮೇಲೇರಿ ಬರುತ್ತಿದ್ದ ಸೂರ್ಯನನ್ನು ತೋರಿಸಿದಳು. ತೋರಿಸಿ, "ಅಲ್ಲಿ ಇದ್ದಾರೆ" ಎಂದು ನಕ್ಕಳು. ನನ್ನನ್ನು ಆಡಿಸುತ್ತಿದ್ದಾಳೆ ಎಂದುಕೊಂಡೆ. ಸಿಟ್ಟಿನಿಂದ ಅವಳ ಬೆನ್ನಿಗೆ ಪಟಪಟ ಹೊಡೆದು ಕೈಗೆಟುಕದೆ ಬೀದಿಯ ಕಡೆ ಓಡೋಡಿ ಹೋದೆ.

ಆಮೇಲೆ ಅಕ್ಕ ಹೆಣೆಯುತ್ತಿದ್ದ ಸ್ವೆಟರ್ ಮುಗಿದು ಬರುತ್ತಿದ್ದಂತೆ, ಅದು ಅಪ್ಪನಿಗೆಂದು ತಿಳಿದು, ಅದರ ಕೈಗಳನ್ನು ನನ್ನ ಗಂಟಲ ಸುತ್ತಲೂ ಹಾಕಿಕೊಳ್ಳುತ್ತಿದ್ದೆ. ಉದ್ದುದ್ದಾಗಿ ಸ್ವೆಟರ್ ಕೈಗಳು ನನ್ನ ಕುತ್ತಿಗೆಯ ಸುತ್ತಲೂ ಅಂಟಿಕೊಂಡಿದ್ದರೆ ನನ್ನನ್ನು ಯಾರೋ ಬಿಗಿದಪ್ಪಿ ಹಿಡಿದಂತಾಗುತ್ತಿತ್ತು.

ಅಪ್ಪ ಹೀಗೇ ಇರುತ್ತಾರೆಂದು ಭಾವಿಸಲು ಅಪ್ಪನ ಫೋಟೋ ಕೂಡಾ ಮನೆಯಲ್ಲಿಲ್ಲ. ಅವರು ಯಾವತ್ತೂ ಫೋಟೋ ತೆಗೆಸಿಕೊಂಡಿರಲಿಲ್ಲವಂತೆ! ಅಜ್ಜನ ತೈಲವರ್ಣ ಚಿತ್ರವಿದೆ. ಅದನ್ನು ತೋರಿಸಿ "ಹೀಗೆಯೇ ಇರುತ್ತಾರೆ" ಎಂದು ಒಂದು ಸಲ ಅಕ್ಕ ಹೇಳಿದ್ದಳು. ಆ ದಿನದಿಂದ ಅಪ್ಪನನ್ನು ನೋಡಬೇಕೆನಿಸುದಾಗಲೆಲ್ಲ ಅಜ್ಜನ ತೈಲವರ್ಣ ಚಿತ್ರ ನೋಡಿ ಸಂತಸಪಡುತ್ತಿದ್ದೆ!

ಅಕ್ಕ ಅಪ್ಪನಿಗಾಗಿ ಹೆಣೆಯುತ್ತಿರುವ ಸ್ವೆಟರ್ ಪೂರ್ತಿಯಾಯಿತು. ಆದಿನ ಅಕ್ಕನ ಸಂತೋಷ ಅಷ್ಟಿಷ್ಟಲ್ಲ. ಸ್ವೆಟರನ್ನು ಭುಜಗಳ ಹತ್ತಿರವಿಟ್ಟು

ಅದನ್ನು ಕಣ್ತುಂಬಾ ನೋಡಿದಳು. ಅಮ್ಮ ನನ್ನು ಕೂಗಿ ಕರೆದು ತೋರಿಸಿದಳು.

"ತೆಗೆದುಕೊಂಡು ಹೋಗಿ ಅಪ್ಪನಿಗೆ ಯಾವಾಗ ಕೊಡ್ತೀಯಾ?" ಅಕ್ಕನನ್ನು ಕೇಳಿದೆ.

"ಅಪ್ಪಾಜೀ ಬಂದು ತೆಗೆದುಕೊಳ್ಳುತ್ತಾರೆ" ಎಂದಳು.

"ಯಾವಾಗ ಬರುತ್ತಾರೆ?" ಉತ್ಸಾಹದಿಂದ ಕೇಳಿದೆ.

"ಯಾವಾಗಲೋ ಒಮ್ಮೆ ಬರ್ತಾರೆ! ಬಾರದೇ ಇದ್ದರೆ ಇಲ್ಲ, ಅವರೇನು ದೇವರೋ?" ಅಮ್ಮ ಎಂದಳು. ಅಪ್ಪ ಎಂದರೆ ದೇವರೆಂದು ಅಮ್ಮನಿಗೆ ಗುರುತಿಸಲಾಗಲಿಲ್ಲ.

ಒಂದು ಚಳಿಯ ರಾತ್ರಿ ಯಾರೋ ಬಂದ ಸದ್ದು. ಸೋಕಿಯೂ ಸೋಕದ ವಾಸನೆ. ನನ್ನ ಹತ್ತಿರಕ್ಕೆ ನಡೆದು ಬರುತ್ತಿರುವ ಸುಗಂಧವನ್ನು ಅಮ್ಮ ತಡೆಗಟ್ಟಿದಳು.

"ಮಾತಾಡಿಸಿದರೆ ಸಾಕು! ಪತ್ತೆ ಮಾಡಿ ಬಿಡುತ್ತಾನೆ" ಎಂದಳು. ಸ್ಪಷ್ಟಾತಿಸ್ಪಷ್ಟವಾಗಿ ಕೇಳಿ ಬಂದವಾಮಾತುಗಳು. ಆಮೇಲೆ ಮತ್ತೇನೂ ಕೇಳಿಬರಲಿಲ್ಲ. ನಿದ್ದೆಯಲ್ಲಿ ಪೂರ್ತಿಯಾಗಿ ಮುಳುಗಿಹೋದೆ.

ಆದಿನ ಚೆನ್ನಾಗಿ ನೆನಪಿದೆ. ಕತ್ತಲು ದಟ್ಟವಾಗುತ್ತಿದೆ. ಅಮ್ಮ ಲಾಟೀನಿನ ಹರಳನ್ನು ಸ್ವಚ್ಛಗೊಳಿಸುತ್ತಿದ್ದಳು. ಮೂವರು ವ್ಯಕ್ತಿಗಳು ನಮ್ಮ ಬಾಗಿಲಿಗೆ ಬಂದರು. ರಕ್ತಸಿಕ್ತವಾದ ಮಡಿಪಂಚೆಯನ್ನೂ ಜುಬ್ಬಾವನ್ನೂ, ಸ್ವೆಟರನ್ನೂ ಕೊಟ್ಟು, ಹೇಳಬಾರದ ಮಾತನ್ನು ಹೇಳಿದಂತಿದ್ದರು. ಗೋಳೋ ಎಂದತ್ತು ಅಮ್ಮ ಎದೆ ಎದೆ ಬಡಿದುಕೊಂಡಳು. ಅಕ್ಕನನ್ನು ಅಪ್ಪಿಕೊಂಡು ಒಂದೇಸವನೆ ಅತ್ತಳು. ಆ ದೃಶ್ಯವನ್ನು ಕಂಡು ಹೆದರಿ ನಾನೂ ಅತ್ತೆ. ಅಕ್ಕ ನನ್ನನ್ನು ಹತ್ತಿರಕ್ಕೆ ತೆಗೆದುಕೊಂಡಳು, ರಮಿಸಲು ನೋಡಿದಳು.

ಬಂದ ಮೂವರೂ ಹೊರಟುಹೋದರು. ಊರವರು ಒಬ್ಬೊಬ್ಬರಾಗಿ ಬರುತ್ತಿದರು. ಅಮ್ಮನನ್ನು ಸಮಾಧಾನಪಡಿಸಲು ನೋಡಿದರು.

"ಅಂದುಕೊಂಡಿದ್ದೆ! ಅತ್ತು ಪ್ರಯೋಜನವೇನು?" ಎಂದರು.

ಏನಾಯಿತೇನಾಯಿತೆಂದರೆ-

ನಿಮ್ಮ ಅಪ್ಪ ಸತ್ತು ಹೋಗಿದ್ದಾನೆಂದರು. ತುಪಾಕಿಯ ಗುಂಡಿಗೆ ತುತ್ತಾಗಿದ್ದಾನೆಂದರು. ಸ್ವೆಟರ್ ಮಡಿಕೆ ಬಿಚ್ಚಿ ನೋಡಿ. "ಜರಡಿಯಂತಿದೆ! ಎಷ್ಟು ಗುಂಡು ಪಾರಾಗಿವೆಯೋ" ಎಂದು ದುಃಖಿಸಿದರು. ಅಕ್ಕ ಹೆಣೆದ ಸ್ವೆಟರ್ ಅದು! ಕೆಂಪು ಬಣ್ಣದ್ದು ಮತ್ತಷ್ಟು ಕೆಂಪು ಕೆಂಪಾಗೆ ಕಾಣಿಸತೊಡಗಿತ್ತು.

"ಅಪ್ಪ ಯಾರೇ? ಯಾವಾಗ ಬಂದಿದ್ದರೇ?" ಅಕ್ಕನನ್ನು ಕೇಳಿದೆ.

"ಗಿಡ್ಡಗಿಡ್ಡರು ನೋಡೂ, ನಿನ್ನನ್ನವರು ಮುದ್ದುಗರೆದರು ನೋಡೂ, ಅವರೇ! ಅವರೇ ನಮ್ಮಪ್ಪ! ಮೊನ್ನೆ ಬಂದಿದ್ದರು" ಅಕ್ಕ ಎಂದಳು. ನನ್ನನ್ನು ಗಟ್ಟಿಯಾಗಿ ಹಿಡಿದು ಜೋರಾಗಿ ಅತ್ತುಬಿಟ್ಟಳು.

ಅಕ್ಕನ ಅಪ್ಪುಗೆಯಿಂದ ಬಿಡಿಸಿಕೊಂಡು ಅಪ್ಪನ ಸ್ವೆಟರನ್ನು ಕೈಗಳಲ್ಲಿ ತೆಗೆದುಕೊಂಡೆ. ಮುಖವನ್ನು ಅದರಲ್ಲಿಟ್ಟು, ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಉಜ್ಜಿದೆ. ಬಿರುಗಡ್ಡದ ಕೆನ್ನೆಗಳಿಗೆ ನನ್ನ ಕೆನ್ನೆಯಿಂದ ಅದುಮಿದ ಸ್ಪರ್ಶ ಉಂಟಾಯಿತು. ನನಗಿಷ್ಟವಾದ ವಾಸನೆ ಬಂದಿತ್ತು. ಅಪ್ಪನ ವಾಸನೆ, ಅಪ್ಪನ ಸ್ಪರ್ಶ ನನ್ನನ್ನು ಅಂಟಿಕೊಂಡಿದ್ದವೆಂದೆನಿಸಿತು, ಅಳಬೇಕೆನಿಸಲಿಲ್ಲ. ಏಳೇಳು ಲೋಕಗಳಲ್ಲಿದ್ದರೂ ಅಪ್ಪನನ್ನು ಹುಡುಕಿ ಹಿಡಿದುಕೊಳ್ಳಬೇಕೆನಿಸಿತು. ಆ ಮಾತು ಹೇಳಿದರೆ -

"ಬಿಸಾಡಿದ ವಸ್ತುವಾ ಏನು ಹುಡುಕಿದರೆ ಸಿಗುವುದಕ್ಕೆ" ಎಂದು ಅಮ್ಮ ಎನ್ನಬಹುದು, ಅಳಬಹುದು. ಆದರೆ ಅಮ್ಮನಿಗೆ ಈವತ್ತಿಗೂ ತಿಳಿಯದು.

ಅಪ್ಪ ಎಂದರೆ ನಿತ್ಯಾವಶ್ಯಕ ವಸ್ತುವೆಂದು! ●



# ಆತ್ಮದ ವಿವಿಧ ನೆಲೆಗಳು

**ಮಾ**ನವನು ಸಾಮಾಜಿಕ ವಿಕಾಸ, ಬೌದ್ಧಿಕ ವಿಕಾಸಗಳ ವಿವಿಧ ಸ್ತರಗಳಲ್ಲಿ ಮುಂದುವರಿಯುತ್ತಾ ಹೋದಂತೆಲ್ಲಾ, ಅವನು 'ತಾನು' 'ತನ್ನದು' ಎಂತ ಕರೆದುಕೊಳ್ಳುವ, ಭಾವಿಸುವ ಅನೇಕ ಸಂಗತಿಗಳು ಬದಲಾವಣೆ ಹೊಂದುವವು. ಈ ಪ್ರಕ್ರಿಯೆಯನ್ನು ನಾವು ಆತ್ಮದ ವಿವಿಧ ನೆಲೆಗಳು ಎಂದು ಕರೆಯುಬಹುದು. ಒಬ್ಬ ಬಡವನು ತನ್ನ ಗುಡಿಸಲು, ತನ್ನ ಕುಟುಂಬ, ಸಣ್ಣ ಪುಟ್ಟ ವಸ್ತುಗಳು, ಹೆಚ್ಚೆಂದರೆ ತನ್ನ ಜೀವನೋಪಾಯಕ್ಕೆ ನೆರವಾಗುವ ಒಂದೆರಡು ಸಾಮಗ್ರಿಗಳು ಇವುಗಳಲ್ಲಿ 'ತಾನು' ತನ್ನದು' ಎಂಬುದನ್ನು ಕಾಣುತ್ತಾನೆ. ಶ್ರೀಮಂತನೊಬ್ಬನು ತಾನು ಕೂಡಿಟ್ಟ ಹಣ, ಗಳಿಸಿದ ಸಂಪತ್ತು, ತಾನು ಅಲಂಕರಿಸಿದ ಪದವಿ, ಸಾಮಾಜಿಕ ಪ್ರತಿಷ್ಠೆ ಇತ್ಯಾದಿಗಳಲ್ಲಿ 'ತಾನು' 'ತನ್ನದು' ಎಂಬುದನ್ನು ಕಾಣುತ್ತಾನೆ. ನಮಗೆ ಇವರಿಬ್ಬರ ನಡುವೆ ಅಜಗಜಾಂತರ ವ್ಯತ್ಯಾಸ ಕಂಡರೂ, ಸ್ವಲ್ಪ ಆಳವಾಗಿ ಪರಿಶೀಲಿಸಿದರೆ ಇವರಿಬ್ಬರ ಆತ್ಮದ 'ನೆಲೆ' ಅಥವಾ 'ಅವಸ್ಥೆ' ಒಂದೇ ಆಗಿದೆ. ಇಬ್ಬರೂ 'ತಾನು' 'ತನ್ನದು' ಎಂಬುದನ್ನು ಗುರುತಿಸುವುದು ಒಂದೇ ಬಗೆ; ತಾನು ತನ್ನದೆಂಬುದಕ್ಕೆ ಏನಾದರೂ ಧಕ್ಕೆ ಬಂದಾಗ ವರ್ತಿಸುವ ರೀತಿ ಒಂದೇ. ಅಂದ ಮೇಲೆ ಶ್ರೀಮಂತನಲ್ಲಿ ಅಧಿಕ ಸಂಪತ್ತು, ಕಲಿಕೆ, ವಿದ್ಯಾವಿನೋದಾದಿಗಳು ಇದ್ದರೂ ಅವನು 'ತಾನು' 'ತನ್ನದು' ಎಂಬ ಅರಿಯುವಿಕೆಯ ರೀತಿಯು ಬಡವನಿಂದ ಭಿನ್ನವಾಗಿಲ್ಲವೆಂದಾಯಿತು. ಇದನ್ನು ಹೇಳುವ ಅಗತ್ಯ ಇಷ್ಟೇ: ಕೇವಲ ಭೌತಿಕ ಪ್ರಗತಿ, ಆರ್ಥಿಕ ಉನ್ನತಿ ಮಾನವನನ್ನು ಬದಲಿ[illegible]ಲ್ಲ. ಪ್ರಗತಿ ಮತ್ತು ಆರ್ಥಿಕ ಬದಲಾವ[illegible] [illegible] [illegible] [illegible]

ಮೇಲ್ನೋಟಕ್ಕೆ ಕಂಡರೂ, ಅದಕ್ಕಿಂತ ಭಿನ್ನವಾದ ಮಾನಸಿಕ, ಬೌದ್ಧಿಕ, ಆಧ್ಯಾತ್ಮಿಕ ವಿಕಸನಗಳು ಮಾತ್ರ 'ತಾನುತ್ವ' (ನಾನುತ್ವ)ದ ನೈಜ ನೆಲೆಯನ್ನು ಅರಿಯಲು ಅರಸಲು ಆಕರವಾಗುವುದೆಂಬುದು ನಾವು ತಿಳಿಯಬೇಕಾದ ಅತಿ ಮುಖ್ಯ ಸತ್ಯವಾಗಿದೆ.

ಈ 'ತಾನು' 'ತನ್ನದು' ಎನ್ನುವುದರ ನಿಜಸ್ವರೂಪವನ್ನು ಅರಿಯಲು ಎಲ್ಲರೂ ಪ್ರಯತ್ನಿಸುವುದಿಲ್ಲ. ಪ್ರಯತ್ನಿಸಿದವರೆಲ್ಲರೂ ಅರಿಯಬಲ್ಲರು ಎಂತ ಹೇಳಲೂ ಸಾಧ್ಯವಾಗದು. ಏಕೆಂದರೆ

---

**ಪಾಲ್ತೂರು ಶ್ರೀಪತಿರಾವ್**

---

ಅದನ್ನು ಅರಿಯುವುದೇ ಜ್ಞಾನ ಹಾಗೂ ಸಂಸ್ಕೃತಿಯ ಪರಮೋಚ್ಚ ಗುರಿ ಎಂದು ಹೇಳಲಾಗಿದೆ. "Know thyself and you will know ALL" (ಆತ್ಮವನ್ನು ಅರಿ, ಎಲ್ಲವನ್ನು ಅರಿಯುವೆ.) ಈ ದಿಶೆಯಲ್ಲಿ ಧರ್ಮ ಹಾಗೂ ಧರ್ಮ ಗ್ರಂಥಗಳು ಮಾನವನ ಚಿಂತನೆಯ ವಿವಿಧ ಹಂತಗಳ ಕ್ರೋಢೀಕರಣ ಸ್ವರೂಪ ಹೊಂದಿವೆ. ಎಲ್ಲಾ ಧರ್ಮಗಳಲ್ಲೂ ಒಂದಿಷ್ಟು ಕಲ್ಪನೆಗಳು ತುಂಬಿದ್ದರೂ ಅವುಗಳ ಪ್ರಯತ್ನ, ಗುರಿ ಒಂದೇ. ಈ ವಿಶ್ವದ ಬಗ್ಗೆ, ಅದನ್ನು ನಿಯಂತ್ರಿಸುವ ಶಕ್ತಿಯ ಬಗ್ಗೆ, ನಿಯಮಗಳ ನೆಲೆ (Origin of laws of universe) ಯ ಬಗ್ಗೆ, 'ಆತ್ಮ'ವೆಂಬುದೇನೆಂಬುದರ ಬಗ್ಗೆ ಚಿಂತನೆಗಳು ಅವಿರತವಾಗಿ ನಡೆದಂತೆ ಕಾಣುವುದು.

ನಾವು ಸಾಮಾನ್ಯವಾಗಿ 'ನಾನು' ಎಂಬ ಪ್ರಜ್ಞೆ ಹೊಂದಿರುವಿಕೆಯನ್ನು ಸಂಸ್ಕೃತದಲ್ಲಿ 'ಅಹಂ' ಎಂತಲೂ, ಆಂಗ್ಲ ಭಾಷೆಯಲ್ಲಿ 'ಇಗೋ' (ego)

ಎಂದೆಲ್ಲಾ ಕರೆಯುವರು. ಈ ಅರಿವು ಅಥವಾ ಪ್ರಜ್ಞೆ ಸಮಾಜದಲ್ಲಿ ವ್ಯವಹರಿಸುವಾಗ ಅನಿವಾರ್ಯ ಹಾಗೂ ಅಗತ್ಯವಾದ ಅಂಶವಾಗಿದೆ. ನಿಜವಾದ ಆತ್ಮ (True self)ವನ್ನು ಅರಿಯಲು ಈ ಪ್ರಜ್ಞೆಯನ್ನು ಸಂಪೂರ್ಣ ಅಳಿಸಿ ಹಾಕಬೇಕಾದ ಅವಶ್ಯಕತೆಯಾಗಲೀ ಔಚಿತ್ಯವಾಗಲೀ ಇಲ್ಲ. ಆದರೆ ನೈಜ ಆತ್ಮ ಪ್ರಜ್ಞೆ (Self realisation) ನಮ್ಮಲ್ಲಿ ಮೂಡಿದಾಗ ನಾನು (ego), ನನ್ನದು ಗಳ ಪ್ರಜ್ಞೆ ಮೊದಲಿನ ರೀತಿಯಲ್ಲಿರದೇ ಸಮಾಜದಲ್ಲಿ ವ್ಯವಹರಿಸುವಾಗ ಅದೊಂದು ಕೇವಲ ಪರಿಕರವಾಗಿರುವುದಷ್ಟೆ. ಆದ್ದರಿಂದಲೇ ನಿಜವಾದ ಆತ್ಮದಲ್ಲಿ ಸ್ಥಿತರಾದವರಿಗೆ ಸುಖದುಃಖಗಳು, ಲಾಭನಷ್ಟಗಳು, ಮಾನಅಪಮಾನಗಳು ತನ್ನ ಮೊನಚನ್ನು ಕಳೆದುಕೊಂಡು ಹಾನಿರಹಿತವಾಗುವವು. ಆತ್ಮದಲ್ಲಿ ಸ್ಥಿತರಾದವರು ಸಮಾಜದಲ್ಲಿ ವ್ಯವಹರಿಸುವಾಗ ಎಲ್ಲರಂತೆ ಸುಖ-ದುಃಖ, ನೋವು-ನಲಿವು, ಸೋಲು-ಗೆಲುವು, ಸಹನೆ-ಅಸಹನೆಗಳ ಸುಳಿಯಲ್ಲಿ ಬಾಳುತ್ತಿರುವಂತೆ ಹೊರನೋಟಕ್ಕೆ ಕಂಡರೂ, ಇವರಲ್ಲಿ ಸದಾ ಜಾಗೃತವಾಗಿರುವ ಆತ್ಮದ ಅರಿವು (Spiritual consciousness) ಇವರ ಚೇತನಕ್ಕೆ ಹೊಸ ಸ್ಪಂದನವನ್ನು ನೀಡಿ ಇವರನ್ನು ವಿಶೇಷ ವ್ಯಕ್ತಿಗಳನ್ನಾಗಿ ಮಾಡಿರುವುದನ್ನು ನಾವು ಕಾಣಬಹುದು.

ಹಾಗಾದರೆ ಈ 'ಆತ್ಮ' ಯಾವುದು? ಎಲ್ಲಿದೆ? ಅದು ಇದೆ ಎಂಬುದು ಹೇಗೆ ಖಚಿತವಾಗುವುದು?

ಈ ವಿಷಯದಲ್ಲಿ ಹೆಚ್ಚಿನ ಬೆಳಕನ್ನು ಆತ್ಮಸ್ಥಿತರಾದವರು ಮಾತ್ರ ನೀಡಬಲ್ಲರು. ಪ್ರಪಂಚದ ಧರ್ಮ ಗ್ರಂಥಗಳ ಬಾಹ್ಯ ಆಚರಣೆಗಿಂತ ಮಿಗಿಲಾಗಿ ಒಳ ಅರ್ಥ (Esotric meaning)ವನ್ನು ಗ್ರಹಿಸಬಲ್ಲವರಿಗೆ, ಆಧ್ಯಾತ್ಮ ವಿಚಾರಗಳ ಅಭಿರುಚಿ ಬೆಳೆಸಿಕೊಂಡವರಿಗೆ ಆತ್ಮವನ್ನು ಅರಿಯಲು ಉತ್ಕಟ ಇಚ್ಛೆ ಉಂಟಾದ 'ನಚಿಕೇತ'ರಿಗೆ, 'ವಿವೇಕಾನಂದ'ರುಗಳಿಗೆ ಇದು ಸಾಧ್ಯವಾಗುವ ವಿಚಾರ. ಆದರೆ ನಮ್ಮಂತಹ ಸಾಮಾನ್ಯರೂ ಈ ಆತ್ಮದ ಝಲಕನ್ನು ಪಡೆಯಲು ನಮ್ಮದೇ ಆದ ರೀತಿಯಲ್ಲಿ ಪ್ರಯತ್ನಿಸಬಹುದು.

ಸಂಶಯವಾದ (Sceptism), ಶೂನ್ಯವಾದ (Nihilism), ಅಜ್ಞೇಯತಾವಾದ (Agnosticism) ಇನ್ನೂ ಅನೇಕ ವಾದವಿವಾದಗಳ ನಡುವೆ ಬಾಳುತ್ತಿರುವ ನಾವು ಅದೇ ವಾದವಿವಾದ ಸರಣಿಯಿಂದಲೇ ಆತ್ಮವನ್ನು ಅರಿಯಲು ಪ್ರಯತ್ನಿಸಬಹುದೆಂಬುದು ಗಮನಾರ್ಹ ಸಂಗತಿ. ಈ ದಿಶೆಯಲ್ಲಿ ಓರ್ವ ಯೋಗಿ ಮತ್ತು ನನ್ನ ನಡುವೆ ನಡೆದ ಕೆಲವು ನಿಮಿಷಗಳ ಸಂಪರ್ಕದಿಂದ ಸಂಗ್ರಹಿಸಿದ ಮಾಹಿತಿಯ ಕನ್ನಡ ರೂಪಾಂತರವನ್ನು ಇಲ್ಲಿ ಕೊಡುತ್ತಿದ್ದೇನೆ. ವಿಷಯ ಕ್ಲಿಷ್ಟವಾಗಿದ್ದು ಅಪಾರ್ಥಕ್ಕೂ ಎಡೆಮಾಡಬಲ್ಲದು. ಆದರೂ ಪ್ರಯತ್ನಿಸಿದ್ದೇನೆ.

ಸಾಮಾನ್ಯವಾಗಿ 'ನಾನು ಈ ಕಾರ್ಯ ನಡೆಸಿದೆ. ಆ ಕೆಲಸ ಮಾಡಿದೆ. ಅಲ್ಲಿಗೆ ಹೋದೆ. ಇಲ್ಲಿಗೆ ಬಂದೆ' ಈ ರೀತಿಯ ಮಾತುಗಳನ್ನು ನಾವು ಪ್ರತಿದಿನವೂ ಆಡುತ್ತಿರುತ್ತೇವೆ. ಇದರಿಂದ ಗೊತ್ತಾಗುವುದೇನೆಂದರೆ ಈ 'ನಾನು'ವು (ಆತ್ಮ) ಎಲ್ಲಕ್ಕೂ ಕರ್ತೃ ಅಥವಾ ಪ್ರವರ್ತಕವೆಂದು ಹೇಳಿದ ಹಾಗಾಯಿತು. ಹೀಗೆಯೇ ಯೋಚಿಸುತ್ತಾ ಹೋಗೋಣ. ಎಲ್ಲಾ ಪರಿಣಾಮಗಳ ಹಿಂದೆ ಕ್ರಿಯೆ ಮತ್ತು ಕ್ರಿಯೆಯನ್ನುಂಟು ಮಾಡುವ ಸ್ತರ (Function and origin) ವನ್ನು ನಾವು ಗುರುತಿಸಬಲ್ಲೆವಾದರೆ ಅಂತಹ ಸ್ತರವನ್ನು ನಾವು ನಿರ್ಮಾತೃ ಅಥವಾ ಕರ್ತೃ ಎನ್ನಲಡ್ಡಿಯಿಲ್ಲ. ತಾತ್ವಿಕವಾಗಿ ಕರ್ತೃವನ್ನು 'ಆತ್ಮ' ಎನ್ನಬಹುದು. ಕ್ರಿಯೆಯನ್ನು 'ಸೃಜನತೆ' ಎನ್ನಬಹುದು. ಇರಲಿ, ನಾವು ನಿತ್ಯ ಜೀವನದಲ್ಲಿ 'ನಾನು' ಎಂದು ಗುರುತಿಸುವ ಆತ್ಮವು ನಿಜವಾದ ಆತ್ಮ (True self) ಅಲ್ಲ. ಏಕೆಂದರೆ ನಾವು ಚಿಕ್ಕ ಮಗುವಾಗಿದ್ದಾಗ 'ನಾನು' ಎಂಬ ಅನುಭಾವ ಅಲ್ಲಿರಲಿಲ್ಲ. ಶೈಶವಾವಸ್ಥೆಯನ್ನು ದಾಟಿದಂತೆ ಸುತ್ತಮುತ್ತಲಿನ ಜಗತ್ತಿಗೆ ಸ್ಪಂದಿಸಲು ತೊಡಗಿದಾಗ ಈ 'ನಾನು' ಎಂದು ಗುರುತಿಸಿಕೊಳ್ಳುವಿಕೆ ಪ್ರಾರಂಭವಾಯಿತು. ಅದ್ದರಿಂದ ಈ 'ನಾನು'

ಸುತ್ತಮುತ್ತಲಿನ ಜಗತ್ತಿಗೆ ಸ್ಪಂದಿಸುವಷ್ಟು ಮಟ್ಟಿಗೆ ಸೀಮಿತ. ಆದರೆ ಈ 'ನಾನು' ಪ್ರಜ್ಞೆಯೊಂದಿಗೇ ಕೆಲಮಟ್ಟಿಗೆ ಸ್ವಾರ್ಥತೆ-ತ್ಯಾಗಶೀಲತೆ, ಸಂಕುಚಿತತೆ-ವಿಶಾಲತೆ, ಕ್ರೌರ್ಯ-ದಯೆ, ಅನೀತಿ-ನೀತಿ, ಇವೆಲ್ಲಾ ಬೆಳೆಯುವುದೂ ಸಹಜ. ನಿಜವಾದ ನಾನು ( ಆತ್ಮ, real self ) ಈ ಸೀಮಿತ 'ನಾನು'ವನ್ನು ಅದಕ್ಕೊಂದಿಕೊಂಡ ದೇಹವನ್ನೂ, ದೇಹ ಮನಸ್ಸುಗಳ ಅಸಂಖ್ಯ ಕಾರ್ಯಕ್ಷೇತ್ರಗಳನ್ನೂ ನಿರ್ಮಿಸಿದೆ. ಅದು ಎಲ್ಲಕ್ಕೂ ಆಧಾರವಾದ್ದರಿಂದ ಅದರಿಂದಲೇ ಎಲ್ಲವೂ ಅಭಿವ್ಯಕ್ತಿ ಮತ್ತು ಸಾಕಾರತೆ ಪಡೆಯುವುದು; ಸ್ಥಿತಿಗೊಳ್ಳುವುದು; ನಂತರ ನಾಶ (ಪರಿವರ್ತನ)ಗೊಳ್ಳುವುದು ಈ ರೀತಿ ನಡೆಯುತ್ತಾ ಸಾಗಿದೆ. ಈ ನಿಜವಾದ 'ನಾನು' ಅಥವಾ 'ಆತ್ಮ' ಯಾವುದು?

ಈ ಜಗತ್ತು ಮತ್ತು ಜೀವಿಗಳು 'ಏನೂ ಇಲ್ಲದಿರುವಿಕೆ' ಅಥವಾ ಶೂನ್ಯದಿಂದ ಆವಿರ್ಭವಿಸಿತು ಅಥವಾ ಸೃಜನಗೊಂಡಿತು ಎನ್ನುವುದಾದರೆ ಆ ಶೂನ್ಯ (Nothingness) ವನ್ನೇ ನಾವು ಆತ್ಮ ಎನ್ನಬಹುದು. ಏಕೆಂದರೆ ಆ 'ಶೂನ್ಯ'ವು ಆದಿಯಿಲ್ಲದ್ದು ಮತ್ತು ಅವಿನಾಶಿ (Eternal). ಶೂನ್ಯವನ್ನು ನಾಶಮಾಡುವುದು ಹೇಗೆ? ಆದ್ದರಿಂದ ಅವಿನಾಶಿ ಶೂನ್ಯದಿಂದ ಈ ವಿಶ್ವ ಆವಿರ್ಭವಿಸಿತು ಎನ್ನುವುದಾದರೆ ಆ ಶೂನ್ಯವೇ ಈ ವಿಶ್ವದ ಕರ್ತೃ, ಪ್ರವರ್ತಕ ಹಾಗೂ 'ಆತ್ಮ' ಎಂದಾಯಿತು. ಈ ಪರಿವರ್ತನ ಶೀಲ ವಿಶ್ವ ಎಂದಾದರೊಂದು ದಿನ ನಾಶ ಹೊಂದಿದರೆ ಅಥವಾ ಲಯಗೊಂಡರೆ (ಯಾವುದಕ್ಕೆ ಪ್ರಾರಂಭವಿದೆಯೋ ಅದಕ್ಕೆ ಅಂತ್ಯವೂ ಇರುವುದು. ಯಾವುದಕ್ಕೆ ಪ್ರಾರಂಭವಿಲ್ಲವೋ ಅದಕ್ಕೆ ಅಂತ್ಯವೂ ಇಲ್ಲ), ಆಗ ಈ ವಿಶ್ವವನ್ನು ಆವಿರ್ಭವಿಸಿದ, ಪ್ರವರ್ತಿಸಿದ ಆ 'ಶೂನ್ಯ' ಮಾತ್ರ ಉಳಿಯುವುದು! ಆ ಶೂನ್ಯವನ್ನು ಶೂನ್ಯ ಎಂದು ಕರೆದರೂ ಒಂದೆ; ದೇವರೆಂತ ಕರೆದರೂ ಒಂದೇ, ಆತ್ಮವೆಂತ ಕರೆದರೂ ಒಂದೇ; ಪರಬ್ರಹ್ಮವೆಂತ ಕರೆದರೂ ಒಂದೇ; ಅಲ್ಲಾ ಎಂತ ಕರೆದರೂ ಒಂದೇ; 'ಫಾದರ್ ಇನ್ ಹೆವನ್' ಎಂತ ಕರೆದರೂ ಒಂದೇ; ಈಶ್ವರ ಎಂತ ಕರೆದರೂ ಒಂದೇ; ನಿರ್ವಾಣ ಎಂತ ಕರೆದರೂ ಒಂದೇ; ಸಚ್ಚಿದಾನಂದ ಎಂತ ಕರೆದರೂ ಒಂದೇ; ಪರಿಭಾಷೆಗಳು ಬೇರೆ ಬೇರೆ ಆದರೂ ಸತ್ಯ ಒಂದೇ. ●

## ಆಗಲೂ ಹೀಗೇ ಆಗಿತ್ತು! :

1966ರಲ್ಲಿ ಅಲಿಪ್ತ ಕೂಟದ ಮಿನಿ ಅಧಿವೇಶನವೊಂದು ದೆಹಲಿಯಲ್ಲಿ ನಡೆದಿತ್ತು. ಈಜಿಪ್ಟಿನ ಅಧ್ಯಕ್ಷ ಗೆಮಲ್ ಅಬ್ದೆಲ್ ನಾಸೆರ್ ಅದರಲ್ಲಿ ಭಾಗವಹಿಸಲು ಬಂದಿದ್ದರು. ಆಗ ದೆಹಲಿಯ ಮಹಾನಗರ ಪಾಲಿಕೆಯು ಅವರ ಗೌರವಾರ್ಥ ಸತ್ಕಾರ ಕೂಟವೊಂದನ್ನು ಏರ್ಪಡಿಸಿತ್ತು. ಅವರು ಪ್ರಧಾನಿ ಇಂದಿರಾಜಿಯೊಂದಿಗೆ ಸಭಾಂಗಣಕ್ಕೆ ಬಂದಾಗ ನೌಕಾದಳದ ವಾದ್ಯಗೋಷ್ಠಿಯು ಈಜಿಪ್ಟಿನ ರಾಷ್ಟ್ರಗೀತೆಯನ್ನು ನುಡಿಸಿತು. ಆಗ ಎಲ್ಲರೂ ಎದ್ದು ನಿಂತರೂ ನಾಸೆರ್ ನಿಲ್ಲಲಿಲ್ಲ. ಏಕೆಂದರೆ ಆಗ ನುಡಿಸಿದ್ದು ಈಜಿಪ್ಟಿನ ದೊರೆ ಫರೂಕರನ್ನು ಅಭಿನಂದಿಸುವ ಗೀತೆಯನ್ನು.

ಇದನ್ನು ಅರಿತ ಇಂದಿರಾಜಿ ಕೆಂಡದುಂಡೆಯಾದರು. ಆಗ ನಾಸೆರ್ ಇಂದಿರಾಜಿ ಅವರನ್ನು ಕುರಿತು 'ಮೇಡಂ! ಚಿಂತಿಸಬೇಡಿ! ಹಿಂದೆ 1956ರಲ್ಲಿಯೂ ಇಲ್ಲಿಗೆ ಬಂದಿದ್ದೆ. ಆಗ ನಿಮ್ಮ ತಂದೆ ಪ್ರಧಾನಿಯಾಗಿದ್ದರು. ಆಗಲೂ ಇದೇ ಗೀತೆಯನ್ನು ನುಡಿಸಿದ್ದರು. ಇದು ನನಗೇನೂ ಹೊಸ ಅನುಭವವಲ್ಲ' ಎಂದಾಗ ಇಂದಿರಾಜಿ ಕೋಪ ಇಳಿದುಹೋಯಿತು.

(ಸಂಗ್ರಹ) ಕೆ.ವೆಂಕಣ್ಣಾಚಾರ್

# ಪರೀಕ್ಷೆಯಲ್ಲಿ ಅಂಕ ಗಳಿಸಲು ಅಷ್ಟ ನಿಯಮಗಳು

ಡಾ.ಕೆ.ಸಿ.ಮರಿಯಪ್ಪ

ಪರೀಕ್ಷೆ ಎಂದಾಕ್ಷಣ ಅನೇಕ ವಿದ್ಯಾರ್ಥಿಗಳಿಗೆ ಪರೀಕ್ಷಾ ಜ್ವರ ಬರುವುದುಂಟು. ಮಾನಸಿಕವಾಗಿ ಪರೀಕ್ಷೆಗೆ ಸಿದ್ಧವಾಗಿಲ್ಲದ ವಿದ್ಯಾರ್ಥಿಗಳಲ್ಲಿ ಈ ರೀತಿಯ ದೌರ್ಬಲ್ಯ ಕಾಣುವುದುಂಟು. ಪರೀಕ್ಷಾ ಸಮಯದಲ್ಲಿ ಹಗಲು-ರಾತ್ರಿ ಓದುವ ವಿದ್ಯಾರ್ಥಿಗಳೇನೂ ನಮ್ಮಲ್ಲಿ ಕೊರತೆಯಿಲ್ಲ. ಹೀಗೆ ಓದುವುದರಿಂದ ಪರೀಕ್ಷಾ ಕೊಠಡಿಯಲ್ಲಿ ಗೊಂದಲ ಉಂಟಾಗುತ್ತದೆ. ಉತ್ತರ ಬರೆಯಲು ಅಸ್ಪಷ್ಟವಾಗುತ್ತದೆ. ಓದಿದ್ದು ಮರೆಯುವುದೂ ಉಂಟು.

ಪರೀಕ್ಷೆಯ ಬಗ್ಗೆ ಉದ್ವಿಗ್ನತೆ, ಭಯ ಖಂಡಿತ ಒಳ್ಳೆಯದಲ್ಲ. ಇದರಿಂದ ಕಲಿಕೆಗೆ, ಸ್ಮೃತಿಗೆ ಧಕ್ಕೆ ಉಂಟಾಗುತ್ತದೆ, ಕೆಲವು ವಿದ್ಯಾರ್ಥಿಗಳು ಭಯದಿಂದ ಮುಕ್ತರಾಗದೆ ಪರೀಕ್ಷೆಯನ್ನೇ ಕೈಬಿಡುವುದುಂಟು. ಇತರರ ಬಲವಂತಕ್ಕೆ ಪರೀಕ್ಷೆಗೆ ಹಾಜರಾಗಿ, ಸರಿಯಾಗಿ ಬರೆಯದೆ ಮನೆಗೆ ಮರಳುವುದುಂಟು. ಅಂತಹ ಅಧೈರ್ಯದ ವಿದ್ಯಾರ್ಥಿಗಳಿಗೆ ಪೋಷಕರು, ಶಿಕ್ಷಕರು ಸಮಾಧಾನಪಡಿಸಿ, ಧೈರ್ಯ ತುಂಬಿ ಅವರಲ್ಲಿ ಆತ್ಮವಿಶ್ವಾಸ ಮೂಡಿಸಬೇಕು.

ಕೆಲವು ವಿದ್ಯಾರ್ಥಿಗಳಂತೂ 'ಪರೀಕ್ಷೆ' ಎಂದರೆ ಆಕಾಶವೇ ಅವರ ತಲೆಯ ಮೇಲೆ ಕಳಚಿಬಿದ್ದಂತೆ ತಡಬಡಿಸುತ್ತಾರೆ. ಕುಳಿತು ಓದಲು ಮನಸ್ಸಿಲ್ಲ, ಮಲಗಿದರೆ ನಿದ್ರೆ ಬಾರದು, ಹಸಿವು ನೀರಡಿಕೆಗಳತ್ತ ಮನಸ್ಸಿಲ್ಲ, ಬಾಯಿ ಒಣಗಿ ಮುಖ ಕಪ್ಪಿಡುವುದುಂಟು. ಹೀಗೆ ಪರೀಕ್ಷಾ ಸಮಯದಲ್ಲಿ ಕಾಡಿ ಕಂಗಾಲಾಗುತ್ತಾರೆ. ಈ ರೀತಿಯ ಮಾನಸಿಕ ಸ್ಥಿತಿ ಪರೀಕ್ಷೆಗೆ ಮಾರಕವಾಗಿರುವುದರಿಂದ, ಈ ಭಯವನ್ನು ಹೋಗಲಾಡಿಸುವುದು ಸೂಕ್ತ. ಪರೀಕ್ಷಾ ದೃಷ್ಟಿಯಿಂದ ಅಂಥ ವಿದ್ಯಾರ್ಥಿಗಳಿಗೆ ಧೈರ್ಯ ತುಂಬುವುದೇ ಈ ಲೇಖನದ ಉದ್ದೇಶ.

ವಿದ್ಯಾರ್ಥಿಗಳು ಪರೀಕ್ಷೆಗೆ ಈ ರೀತಿ ಭಯಪಡಲು ಹತ್ತು ಹಲವಾರು ಕಾರಣಗಳು ಇರುತ್ತವೆ. ಅನುತ್ತೀರ್ಣವಾಗುವ ಭಯ, ಅಥವಾ ಕಡಿಮೆ ಅಂಕಗಳು ಬಂದು ಮುಂದಿನ ವ್ಯಾಸಂಗಕ್ಕೆ ಧಕ್ಕೆ ಆಗಬಹುದೆಂಬ ಅಂಜಿಕೆ. ಜೊತೆಗೆ ವರ್ಷವಿಡೀ ಕಾಲ ಕಳೆದು ಪರೀಕ್ಷಾ ಸಮಯದಲ್ಲಿ ಮಾತ್ರ ಹಗಲಿರುಳು ಓದುವುದರಿಂದ ವಿಷಯಗಳು ಗೊಂದಲಮಯ ಆಗುವುದುಂಟು. ಹೀಗೆ ಮಾನಸಿಕ ಘರ್ಷಣೆ ಉಂಟಾಗುತ್ತದೆ. ಇದನ್ನು ತಪ್ಪಿಸಲು ಶಾಂತ ಮನದಿಂದ ವ್ಯಾಸಂಗ ಮಾಡಿ, ಧೈರ್ಯವಾಗಿ ಪರೀಕ್ಷೆಯನ್ನು ಎದುರಿಸುವುದೊಂದೇ ಉಳಿದಿರುವ ಮಾರ್ಗ.

**ಪರೀಕ್ಷಾ ಭಯ ಯಾರಿಗೆ?**

ಇಂದಿನ ಬಹುತೇಕ ವಿದ್ಯಾರ್ಥಿಗಳಿಗೆ ಓದು ಗೌಣವಾಗಿ, ಪಠ್ಯೇತರ ಚಟುವಟಿಕೆಗಳು ಪ್ರಧಾನವಾಗಿರುವುದನ್ನು ಕಾಣುತ್ತೇವೆ. ಇದು ಪಟ್ಟಣ

ಪ್ರದೇಶದ ವಿದ್ಯಾರ್ಥಿಗಳ ಸ್ಥಿತಿಯಾದರೆ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳ ಸ್ಥಿತಿಯೇ ಬೇರೆ.

ವ್ಯವಸಾಯವೇ ಪ್ರಧಾನವಾಗಿರುವ ಗ್ರಾಮೀಣ ಪ್ರದೇಶವಲ್ಲಿ ತಮ್ಮ ಮಕ್ಕಳನ್ನು ಶಾಲಾ-ಕಾಲೇಜಿಗೆ ಕಳಿಸಿದರೆ ಏನು ಪ್ರಯೋಜನ. ಅದಕ್ಕೆ ಬದಲಾಗಿ ಕೂಲಿಗೆ ಕಳಿಸಿದರೆ 8-10 ರೂಪಾಯಿಗಳನ್ನು ತಂದರೆ ಅಂದಿನ ಗಂಜಿಗೆ ಆಧಾರವಾದೀತು ಎಂಬುದು ಬಡವರ ಧೋರಣೆಯಾಗಿರುತ್ತದೆ. ಒಂದು ಪಕ್ಷ ಶಾಲಾ-ಕಾಲೇಜಿಗೆ ಕಳಿಸಿದರೂ ಬಿಡುವಿನ ವೇಳೆಯಲ್ಲಿ ವ್ಯವಸಾಯ ವೃತ್ತಿಯಲ್ಲಿ ತೊಡಗಿಸುತ್ತಾರೆ. ಕೆಲಸಗಳ ಒತ್ತಡದಿಂದಾಗಿ ಓದಿಗೆ ಬಿಡುವು ದೊರೆಯದೆ, ದೈಹಿಕ ಪರಿಶ್ರಮದಿಂದಾಗಿ ಓದಿನಲ್ಲಿ ಆಲಸ್ಯ ಮೂಡುವುದುಂಟು. ಹೀಗೆ ಮಾನಸಿಕವಾಗಿ ಸಿದ್ಧರಿಲ್ಲದ ವಿದ್ಯಾರ್ಥಿಗಳಿಗೆ ಪರೀಕ್ಷೆ ಎಂದರೆ ಭಯ ಸ್ವಾಭಾವಿಕವಾಗಿಯೇ ಬರುತ್ತದೆ. ಈ ಪರೀಕ್ಷಾ ಭಯ ಪಟ್ಟಣ ಪ್ರದೇಶ, ಗ್ರಾಮೀಣ ಪ್ರದೇಶವೆನ್ನದೆ ಎಲ್ಲಾ ವಿದ್ಯಾರ್ಥಿಗಳಲ್ಲೂ ಇರುತ್ತದೆ.

ಅನೇಕ ವಿದ್ಯಾರ್ಥಿಗಳಿಗೆ ನಿರೀಕ್ಷಿತ ಮಟ್ಟದಲ್ಲಿ ಅಂಕಗಳು ಬರುವುದಿಲ್ಲ. ಕಷ್ಟಪಟ್ಟು ವ್ಯಾಸಂಗ ಮಾಡಿಯೂ ಕಡಿಮೆ ಅಂಕಗಳು ಬಂದವು ಎಂತಲೋ ಅಥವಾ ಅನುತ್ತೀರ್ಣನಾದೆ ಎಂತಲೋ ವಿದ್ಯಾರ್ಥಿಗಳು ಗೊಣಗುವುದು ಉಂಟು. ಏಕೆ ಹೀಗಾಗುತ್ತದೆ? ಕಷ್ಟಪಟ್ಟು ವ್ಯಾಸಂಗ ಮಾಡುವುದು ಎಷ್ಟು ಮುಖ್ಯವೋ, ಸರಿಯಾದ ರೀತಿಯಲ್ಲಿ ಪರೀಕ್ಷೆಯಲ್ಲಿ ಉತ್ತರಿಸುವುದೂ ಅಷ್ಟೇ ಮುಖ್ಯವಾಗಿರುತ್ತದೆ. ಪರೀಕ್ಷೆಯಲ್ಲಿ ಉತ್ತೀರ್ಣನಾಗಲು, ಒಂದೊಂದು ಅಂಕವೂ ನಿರ್ಣಾಯಕ ಅಂಕವಾಗಿರುತ್ತದೆ. ಪರೀಕ್ಷೆಯನ್ನು ಧೈರ್ಯವಾಗಿ ಎದುರಿಸಲು ವಿದ್ಯಾರ್ಥಿಗಳಿಗೆ ಕೆಲವು ನಿಯಮಗಳನ್ನು ಉಲ್ಲೇಖಿಸಿದ್ದಾರೆ.

ಈ ನಿಯಮಗಳು ಬಹಳ ಸರಳವಾದವುಗಳು. ವಿದ್ಯಾರ್ಥಿಗಳಿಗೆ ಈ ನಿಯಮಗಳು ಗೊತ್ತಿಲ್ಲವೆಂಬ ಭಾವನೆಯಾಗಲೀ ಈ ಮೂಲಕ ವಿದ್ಯಾರ್ಥಿಗಳಿಗೆ ತಿಳಿಸಬೇಕೆಂಬ ಉದ್ದೇಶವಾಗಲೀ ನನ್ನದಲ್ಲ. ನಮಗೆ ಇವೆಲ್ಲಾ ಗೊತ್ತು ಎಂಬ ತಾತ್ಸಾರ ಮನೋಭಾವನೆ ವಿದ್ಯಾರ್ಥಿಗಳಿಗೆ ಸಲ್ಲದು. ಗೊತ್ತಿರುವುದನ್ನೇ ಮತ್ತೊಮ್ಮೆ ನೆನಪು ಮಾಡಿಕೊಡುವುದು, ಗೊತ್ತಿಲ್ಲದವರಿಗೆ ನೆರವಾಗಲಿ ಎಂಬುದೇ ನನ್ನ ಮುಖ್ಯ ಉದ್ದೇಶ.

ಪರೀಕ್ಷೆಗಾಗಿ ಸಿದ್ಧತೆ ನಡೆಸುವಾಗ ನನಗೆ ಎಲ್ಲಾ ಗೊತ್ತು ಎಂಬ ಅತ್ಯುತ್ಸಾಹವಾಗಲೀ, ತಾತ್ಸಾರವಾಗಲೀ ಅಥವಾ ಏನೂ ಗೊತ್ತಿಲ್ಲವೆಂಬ ಕೀಳರಿಮೆಯಾಗಲೀ ವಿದ್ಯಾರ್ಥಿಗಳಿಗೆ ಇರಬಾರದು. ವಿದ್ಯಾರ್ಥಿಗಳು ಅದರಲ್ಲೂ ಮುಖ್ಯವಾಗಿ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಪರೀಕ್ಷಾ ಕೊಠಡಿಗೆ ಪ್ರವೇಶಿಸುವ ಮುನ್ನ ಈ ಅಷ್ಟ ನಿಯಮಗಳನ್ನು ನೆನಪಿಸಿಕೊಳ್ಳಬೇಕು. ಹಾಗೂ ಕಾರ್ಯರೂಪಕ್ಕೆ ತರಲು ಪ್ರಯತ್ನಿಸಬೇಕು. ಆಗ ಮಾತ್ರ, ನಿರೀಕ್ಷಿತ ಅಂಕಗಳನ್ನು ಪಡೆಯಲು ಸಾಧ್ಯವಾಗುತ್ತದೆ. ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಲು ನೆರವಾಗುತ್ತದೆ.

## ಅಷ್ಟ ನಿಯಮಗಳು

**ಮೊದಲನೆ ನಿಯಮ:-** ಪರೀಕ್ಷೆಗಾಗಿ ಸಿದ್ಧತೆ ನಡೆಸುವಾಗ ಹಿಂದಿನ ಸಾಲಿನ ಪ್ರಶ್ನೆ ಪತ್ರಿಕೆಗಳಿಗೆ ಉತ್ತರಿಸಬೇಕು. ಬರೆದುದನ್ನು ಸಂಬಂಧಪಟ್ಟ ಉಪನ್ಯಾಸಕರಿಗೆ ತೋರಿಸಿ, ಅವರೊಡನೆ ಚರ್ಚಿಸಿ ಉತ್ತರದಲ್ಲಿ ಇರಬಹುದಾದ ಲೋಪದೋಷಗಳನ್ನು ತಿದ್ದಿಕೊಳ್ಳಬೇಕು. ಉತ್ತರ ಬರೆಯುವ ವಿಧಾನದ ಬಗ್ಗೆ ಪೂರ್ಣ ಪರಿಕಲ್ಪನೆ ಪಡೆಯಬಹುದು. ಇದು ಒಂದು ಕೌಶಲವಾದುದರಿಂದ ಇದನ್ನು ರೂಢಿಸಿಕೊಂಡು ಅಭ್ಯಾಸ ನಡೆಸುವುದು ಉತ್ತಮ. ಹೀಗೆ ಹಳೆಯ ಪ್ರಶ್ನೆ ಪತ್ರಿಕೆಗಳಿಗೆ ಉತ್ತರ ಬರೆಯುವುದರಿಂದ ಎಷ್ಟು ವಿಷಯಗಳು ತಿಳಿದಿವೆ. ಇನ್ನೆಷ್ಟು ತಿಳಿಯಬೇಕು ಎಂಬ ತುಲನಾತ್ಮಕವಾದ ಅಭಿಪ್ರಾಯ ಹೊಂದಲು ಸಾಧ್ಯವಾಗುತ್ತದೆ. ಜೊತೆಗೆ ಪರೀಕ್ಷಾ ಕೊಠಡಿಯಲ್ಲಿ ಹೇಗೆ ಉತ್ತರ ಆರಂಭಿಸಬೇಕು, ಹೇಗೆ ಮುಕ್ತಾಯ ಮಾಡಬೇಕು ಎಂಬ ಅರಿವು ಉಂಟಾಗುತ್ತದೆ. ಪರೀಕ್ಷೆಯಲ್ಲಿ ಮೂರು ಗಂಟೆಗಳ

ಕಾಲಾವಕಾಶವಿದ್ದರೆ ಮನೆಯಲ್ಲಿ ಎರಡೂವರೆ ಗಂಟೆಗಳಲ್ಲಿ ಉತ್ತರ ಬರೆದು ಮುಗಿಸುವ ಅಭ್ಯಾಸ ಮಾಡಿಕೊಳ್ಳಬೇಕು. ಓದಿದ್ದನ್ನು ಪರಿಷ್ಕರಣ (Revision) ಮಾಡಿಕೊಳ್ಳಲು ಇದೊಂದು ಉತ್ತಮ ವಿಧಾನ.

**ಎರಡನೆಯ ನಿಯಮ:-** ಪರೀಕ್ಷಾ ಕೊಠಡಿಗೆ ಹತ್ತು ನಿಮಿಷಗಳು ಮುಂಚಿತವಾಗಿ ಪ್ರವೇಶಿಸಿ ನಿಗದಿತ ಆಸನಗಳಲ್ಲಿ ಕುಳಿತುಕೊಳ್ಳಬೇಕು. ಪರೀಕ್ಷಾ ಕೊಠಡಿಯಲ್ಲಿ ಸಮಯದ ಪರಿಪಾಲನೆ ಬಹಳ ಮುಖ್ಯವಾದದ್ದು. ಉತ್ತರ ಪತ್ರಿಕೆಯ ಮುಖಪುಟದಲ್ಲಿ ಕೇಳಿರುವ ವಿವರಗಳನ್ನು ಭರ್ತಿ ಮಾಡಬೇಕು. ಪ್ರಶ್ನೆ ಪತ್ರಿಕೆ ಪಡೆದ ಮೇಲೆ ಎಲ್ಲಾ ಪ್ರಶ್ನೆಗಳನ್ನೂ ಏಕಾಗ್ರತೆಯಿಂದ ಓದಿ ಅರ್ಥಮಾಡಿಕೊಳ್ಳಲು ಹತ್ತು ನಿಮಿಷಗಳನ್ನು ವಿನಿಯೋಗಿಸಿಕೊಳ್ಳಬೇಕು. ಉತ್ತರವನ್ನು ಬರೆದು ಮುಗಿಸಿದ ಮೇಲೆ ಕಡೆಯಲ್ಲಿ ಪುನರಾವರ್ತನೆ ಮಾಡಲು ಹದಿನೈದು ನಿಮಿಷಗಳನ್ನು ಮೀಸಲಿಟ್ಟುಕೊಳ್ಳಬೇಕು. ಉಳಿದ ಅವಧಿಯಲ್ಲಿ ಪ್ರತಿ ಪ್ರಶ್ನೆಗೂ ನಿಗದಿತವಾಗಿ ಹಂಚಿಕೊಂಡು ಉತ್ತರ ಬರೆದು ಮುಗಿಸಲು ಪ್ರಯತ್ನಿಸಬೇಕು.

**ಮೂರನೆಯ ನಿಯಮ:-** ಪರೀಕ್ಷಾ ಕೊಠಡಿಯಲ್ಲಿ ಪ್ರಶ್ನೆಪತ್ರಿಕೆಯನ್ನು ಒಂದೆರಡು ಸಾರಿ ಪೂರ್ತಿ ಓದಿದ ಮೇಲೆ ಉತ್ತರಿಸಲು ಆರಂಭಿಸಬೇಕು. ಇಡೀ ಪ್ರಶ್ನೆ ಪತ್ರಿಕೆಯನ್ನು ಓದುವುದರಿಂದ ಆ ವಿಷಯದ ಪೂರ್ಣ ಕಲ್ಪನೆ ಮನದಲ್ಲಿ ಮೂಡುತ್ತದೆ. ಪ್ರಶ್ನೆ ಪತ್ರಿಕೆಯಲ್ಲಿ ಎಷ್ಟು ಪ್ರಶ್ನೆಗಳಿವೆ, ಎಷ್ಟು ಪರ್ಯಾಯ (Choice) ಪ್ರಶ್ನೆಗಳಿವೆ ಎಂಬ ಅರಿವು ಉಂಟಾಗುತ್ತದೆ. ಈ ಅರಿವು ಮೂಡಿದ ನಂತರ ಚೆನ್ನಾಗಿ ಉತ್ತರಿಸಬಲ್ಲ ಪ್ರಶ್ನೆಯಿಂದ ಉತ್ತರ ಬರೆಯಲು ಪ್ರಾರಂಭಿಸಬೇಕು. ಉತ್ತರಿಸದೇ ಯಾವುದೇ ಪ್ರಶ್ನೆಯನ್ನೂ ಬಿಡಬಾರದು.

**ನಾಲ್ಕನೆಯ ನಿಯಮ:-** ಪ್ರಶ್ನೆಗಳನ್ನು ಓದಿದಾಗ ಕೆಲವೊಮ್ಮೆ ತುಂಬಾ ಗಾಬರಿಯಾಗಬಹುದು. ಅಂದರೆ ನಿರೀಕ್ಷಿತ ಪ್ರಶ್ನೆಗಳು ಬಾರದೇ ಇರಬಹುದು. ಈ ರೀತಿ ಉದ್ವೇಗಗೊಂಡರೆ ಓದಿರುವ ವಿಷಯವೂ ಮರೆತುಹೋಗಬಹುದು. ಈ ರೀತಿ ಆದಾಗ ಅನೇಕ ವಿದ್ಯಾರ್ಥಿಗಳು ಅರ್ಧ ಗಂಟೆಯ ನಂತರ ಹೊರ ಹೋಗುತ್ತಾರೆ. ಹೊರಗೆ ಹೋಗಿ ಪಶ್ಚಾತ್ತಾಪ ಪಟ್ಟುಕೊಂಡಿರುವ ನಿದರ್ಶನಗಳೂ ಉಂಟು. ಪರೀಕ್ಷಾ ಕೊಠಡಿಯಲ್ಲಿ ಉದ್ವೇಗಕ್ಕೆ ಖಂಡಿತ ಒಳಗಾಗದೆ, ಶಾಂತವಾಗಿ ಯೋಚಿಸಿ ಉತ್ತರವನ್ನು ಬರೆಯುತ್ತಾ ಹೋದಂತೆ ಸ್ಮೃತಿಪಟಲದಿಂದ ಉತ್ತರ ತಾನಾಗಿಯೇ ಬರುತ್ತದೆ.

ಉತ್ತರ ಬರೆಯುವಾಗ ಯೋಚಿಸಿ ಪ್ರಶ್ನೆಗೆ ತಕ್ಕಷ್ಟು ಉತ್ತರವನ್ನು ಮಾತ್ರ ಬರೆಯಬೇಕು. ಅತಿ ಹೆಚ್ಚು ಅಥವಾ ಕಡಿಮೆ ಉತ್ತರವನ್ನು ಬರೆಯಲು ಪ್ರಯತ್ನಿಸಬಾರದು. ಉತ್ತರ ಸಂಕ್ಷಿಪ್ತವಾಗಿ, ನೇರವಾಗಿರಬೇಕು. ಅವಶ್ಯವೆನಿಸಿದ ಕಡೆ ಉದಾಹರಣೆಗಳನ್ನು ಬರೆದರೆ ಉತ್ತಮ. ಅಸಂಬದ್ಧ, ಅಸ್ಪಷ್ಟ ಉತ್ತರ ಬರೆಯುತ್ತಾ ಹೋಗಿ ಸಮಯವನ್ನು ವ್ಯಯ ಮಾಡಬಾರದು. ಪ್ರಶ್ನೆಯ ಸಂಖ್ಯೆಯನ್ನು ಸ್ಪಷ್ಟವಾಗಿ ಮಾರ್ಜಿನ್ ಒಳಗೆ ಬರೆಯುವುದನ್ನೂ ಮರೆಯಬಾರದು.

**ಐದನೆಯ ನಿಯಮ:-** ಪ್ರಶ್ನೆ ಪತ್ರಿಕೆಯಲ್ಲಿ ಪ್ರಬಂಧ ಪ್ರಶ್ನೆಗಳು ಹಾಗೂ ವಸ್ತುನಿಷ್ಠ ಪ್ರಶ್ನೆಗಳು ಇದ್ದರೆ ಮೊದಲು ವಸ್ತುನಿಷ್ಠ ಪ್ರಶ್ನೆಗಳಿಗೆ ಉತ್ತರಿಸಬೇಕು. ಅವುಗಳನ್ನು ಬರೆಯುವುದರಿಂದ ಹೆಚ್ಚು ಅಂಕಗಳನ್ನು ಗಳಿಸಬಹುದು. ನಂತರ ಟಿಪ್ಪಣಿ ರೂಪದ ಪ್ರಶ್ನೆಗಳಿಗೆ ಉತ್ತರಿಸಬೇಕು. ಅನಂತರ ಪ್ರಬಂಧ ಪ್ರಶ್ನೆಗಳಿಗೆ ಉತ್ತರಿಸಬೇಕು. ಮುಖ್ಯವಾಗಿ ಎಸ್.ಎಸ್.ಎಲ್.ಸಿ. ಹಾಗೂ ಪಿ.ಯು.ಸಿ. ಪರೀಕ್ಷೆಗಳಲ್ಲಿ ಇದು ಅವಶ್ಯವಾಗುತ್ತದೆ.

ಪ್ರಬಂಧ ಪ್ರಶ್ನೆಗಳಿಗೆ ಉತ್ತರಿಸುವಾಗ ಪ್ರಶ್ನೆಗೆ ಎಷ್ಟು ದೀರ್ಘವಾದ ಉತ್ತರ ಬರೆಯುತ್ತೀರಿ ಎಂಬುದು ಮುಖ್ಯವಲ್ಲ. ಎಷ್ಟು ಅಚ್ಚುಕಟ್ಟಾಗಿ, ವಿಷಯವನ್ನು ಎಷ್ಟು ಸ್ಪಷ್ಟವಾಗಿ ಬರೆಯುತ್ತೀರಿ ಎಂಬುದು ಮುಖ್ಯ. ಉತ್ತರವನ್ನೂ ಸಂಕ್ಷಿಪ್ತವಾಗಿ ಕಾಲಮಿತಿಯೊಳಗೇ ಬರೆದು ಮುಗಿಸಬೇಕು.

ಬೆಟ್ಟಗಳ ಅರಸುತ್ತಾ
ದಟ್ಟವಾಯಿತು ಭಾವ
ತಿಟ್ಟುಗಳ ಹತ್ತುತ್ತಾ
ತೆವರುಗಳಲಿಳಿಯುತ್ತಾ
ಮಟ್ಟವಾಯಿತು ಸ್ವಭಾವ!

● ದೊಡ್ಡರಂಗೇಗೌಡ

ಆರನೆಯ ನಿಯಮ:- ಪ್ರಶ್ನೆಗಳಿಗೆ ಉತ್ತರ ಗೊತ್ತಿಲ್ಲವೆಂದು ಕೈಬಿಡಬಾರದು. ವಿಷಯ ಗೊತ್ತಿದ್ದರೂ ಕೀಳರಿಮೆ (Inferiority Complex) ಸ್ವಭಾವದ ವಿದ್ಯಾರ್ಥಿಗಳಿಗೆ ಕೆಲವೊಮ್ಮೆ ಹೀಗೆ ಆಗುವುದುಂಟು. ಅಂತಹ ಪ್ರಶ್ನೆಗಳಿಗೆ ಕಡೆಯಲ್ಲಿ ಯೋಚಿಸಿ, ಕಡೆಗೆ ಆ ಅಧ್ಯಾಯದ ಬಗ್ಗೆ ಏನು ತಿಳಿದಿದೆಯೋ ಅದನ್ನೇ ಬರೆದರೂ ಸಾಕು. ಕೆಲವು ಸಾರಿ ಆ ಉತ್ತರವೇ ಸರಿಯಿರುತ್ತದೆ.

ಒಂದು ನಿದರ್ಶನ ಕೊಡುವುದಾದರೆ ಈಗ್ಗೆ 5-6 ವರ್ಷಗಳ ಹಿಂದೆ ಒಬ್ಬ ವಿದ್ಯಾರ್ಥಿ ಇಂಗ್ಲಿಷ್ ವಿಷಯಕ್ಕೆ ಪರೀಕ್ಷೆಗೆ ಕುಳಿತುಕೊಂಡಿದ್ದ. ಆತನ ಕೊಠಡಿಗೆ ನಾನೇ ಮೇಲ್ವಿಚಾರಕನಾಗಿದ್ದೆ. ಅರ್ಧ ಗಂಟೆಯ ನಂತರ ಹೊರಗೆ ಹೋಗಲು ಅನುವಾದ. ನಾನು ಬಿಡಲಿಲ್ಲ, ಬದಲಾಗಿ ''ಇಂಗ್ಲಿಷ್ ಪಾಠಗಳ ಬಗ್ಗೆ ನಿನಗೆ ಏನು ಗೊತ್ತು ಯೋಚಿಸಿ ಬರೆ,'' ಎಂದು ಹೇಳಿದೆ. ಕಡೆಯ ಗಳಿಗೆಯವರೆಗೂ ಆ ವಿದ್ಯಾರ್ಥಿ ಕುಳಿತು ಉತ್ತರ ಬರೆದ. ಫಲಿತಾಂಶ ಬಂದಾಗ ಆ ವಿದ್ಯಾರ್ಥಿ ಉತ್ತೀರ್ಣನಾಗಿದ್ದ. ಹೀಗೆ ವಿಚಾರ-ವಿಷಯ ತಿಳಿದಿದ್ದರೂ ಕುಳಿತು ಸಹನೆಯಿಂದ ಬರೆಯುವ ತಾಳ್ಮೆಯನ್ನು ಕಳೆದುಕೊಂಡಿರುವ ಇಂದಿನ ವಿದ್ಯಾರ್ಥಿಗಳು ತಮಗೆ ತಾವೇ ಕೀಳರಿಮೆ ಸ್ವಭಾವದವರಾಗಿರುತ್ತಾರೆ.

ಏಳನೆಯ ನಿಯಮ:- ಎಲ್ಲಾ ಪ್ರಶ್ನೆಗಳಿಗೂ ಉತ್ತರ ಬರೆದು ಮುಗಿಸಿದ ನಂತರ ಇಡೀ ಉತ್ತರ ಪತ್ರಿಕೆಯನ್ನು ಒಂದು ಸಾರಿ ಓದಬೇಕು. ಹೀಗೆ ಮಾಡುವುದರಿಂದ ಯಾವುದೇ ವಿಷಯ ಕೈಬಿಟ್ಟಿದ್ದರೂ ಸೇರಿಸಬಹುದು. ಕಾಗುಣಿತ, ವ್ಯಾಕರಣ ದೋಷಗಳಿದ್ದರೆ ಸರಿಪಡಿಸಿಕೊಳ್ಳಬಹುದು. ಜೊತೆಗೆ ಕೊಟೇಶನ್ (Quotation)ಗಳನ್ನು ಬರೆದಿದ್ದರೆ ಅವುಗಳಿಗೆ 'ಅಂಡರ್ ಲೈನ್' (Under line) ಮಾಡುವುದರಿಂದ ಹೆಚ್ಚು ಅಂಕಗಳನ್ನು ಗಳಿಸಲು ಸಹಕಾರಿಯಾಗುತ್ತದೆ. ಜೊತೆಗೆ ಪ್ರಶ್ನೆಗಳ ಸಂಖ್ಯೆಗೂ ಬರೆದಿರುವ ಉತ್ತರಕ್ಕೂ ಸರಿಯಾಗಿದೆಯೇ ಎಂದು ಮತ್ತೊಮ್ಮೆ ಪರಿಶೀಲಿಸಲು ಸಾಧ್ಯವಾಗುತ್ತದೆ.

ಎಂಟನೆಯ ನಿಯಮ:- ಪರೀಕ್ಷೆಯಲ್ಲಿ ಹೆಚ್ಚುವರಿ ಹಾಳೆಗಳನ್ನು ತೆಗೆದುಕೊಂಡಾಗ, ಮೊದಲು ನೋಂದಣಿ ಸಂಖ್ಯೆ, ಪುಟದ ಸಂಖ್ಯೆಯನ್ನು ತಪ್ಪದೇ ನಮೂದಿಸಬೇಕು. ಕಡೆಯಲ್ಲಿ ಎಲ್ಲಾ ಹಾಳೆಗಳನ್ನು ಕ್ರಮವಾಗಿ ಜೋಡಿಸಿ, ಉತ್ತರ ಪತ್ರಿಕೆಯ ಹಿಂಬದಿಯಲ್ಲಿ ಕಟ್ಟಬೇಕು. ಮೇಲ್ವಿಚಾರಕರಿಗೆ ಹಿಂದಿರುಗಿಸುವ ಮುನ್ನ ಮುಖಪುಟದಲ್ಲಿ ಒಟ್ಟು ಪುಟಗಳ ಸಂಖ್ಯೆಯನ್ನು ಬರೆಯಬೇಕು. ನೋಂದಣಿ ಸಂಖ್ಯೆಯನ್ನು ಮತ್ತೊಮ್ಮೆ ಖಚಿತಪಡಿಸಿಕೊಳ್ಳಬೇಕು. ನಂತರ ಉತ್ತರ ಪತ್ರಿಕೆಯನ್ನು ಕೊಠಡಿ ಮೇಲ್ವಿಚಾರಕರಿಗೆ ಕೊಟ್ಟು ಹೊರಗೆ ನಡೆಯಬಹುದು.

ಸಾಸಿವೆಯಷ್ಟು ಶ್ರಮಪಟ್ಟು ಸಾಗರದಷ್ಟು ಸುಖ ಅಪೇಕ್ಷಿಸುವ ಇಂದಿನ ವಿದ್ಯಾರ್ಥಿಗಳ ಮನೋಭಾವನೆ ಬದಲಾಗಬೇಕು. ಕನಿಷ್ಠ ಶ್ರಮವನ್ನೇ ಪಡದೆ ಗರಿಷ್ಠ ಫಲಕ್ಕಾಗಿ ಆಸೆಪಡುವುದು ತಪ್ಪಬೇಕು. ತಮ್ಮ ಭವಿಷ್ಯದ ಲಿಪಿಕಾರರು, ವ್ಯಕ್ತಿತ್ವ ನಿರ್ಮಾಪಕರು ತಾವೇ ಎಂಬುದನ್ನು ವಿದ್ಯಾರ್ಥಿಗಳು ಮರೆಯಬಾರದು. ''ಕೆಟ್ಟ ಮೇಲೆ ಬುದ್ಧಿ ಬಂತು'' ಎಂಬಂತೆ ಮುಂದೆನೋ ಒಂದು ದಿನ ಪಶ್ಚಾತ್ತಾಪ ಪಡುವ ಮುನ್ನ ಈಗಲೇ ಭದ್ರ ಬುನಾದಿಗೆ ನಾಂದಿ ಹಾಕಬೇಕು. ಸಾಹಸ, ಪರಿಶ್ರಮ, ಅಚಲ ವಿಶ್ವಾಸಗಳನ್ನು ಬೆಳೆಸಿಕೊಳ್ಳಬೇಕು. ಇತ್ತಕಡೆಗೆ ನಮ್ಮ ವಿದ್ಯಾರ್ಥಿ ಸಮೂಹ ಗಮನ ಹರಿಸುವಂತಾಗಲಿ ಎಂದು ಆಶಿಸುತ್ತೇನೆ. ●

# ಕೊಲೆಸ್ಟೆರಾಲ್ ಹತ್ತೋಟಿಗೆ ಸೂರ್ಯಕಾಂತಿ ಎಣ್ಣೆ

ಬಿ. ಎಸ್. ಶ್ರೀನಿವಾಸ್

ಎಣ್ಣೆ ಕಾಳುಗಳು ನಮ್ಮ ಆಹಾರದ ಅವಿಭಾಜ್ಯ ಅಂಗ. ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ ಆಹಾರ ಪದ್ಧತಿಯಲ್ಲಿ ದೈನಂದಿನ ಆಹಾರ ಸೇವನೆಯಲ್ಲಿ ಕೊಬ್ಬು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಉತ್ತರ ಭಾರತದಲ್ಲಿ ಸಾಸಿವೆ ಎಣ್ಣೆ (Mustard Oil) ಅಡಿಗೆಗೆ ಅತಿ ಮುಖ್ಯ. ದಕ್ಷಿಣ ಭಾರತದಲ್ಲಿ ಎಳ್ಳು, ಕಡಲೇಕಾಯಿ ಎಣ್ಣೆ ಹಾಗೂ ಕೊಬ್ಬರಿ ಎಣ್ಣೆ ದೈನಂದಿನ ಬಳಕೆಯುಲ್ಲಿ ಮಹತ್ತರ ಪಾತ್ರವನ್ನು ಹೊಂದಿವೆ. ಆದರೆ ಸೂರ್ಯಕಾಂತಿ ಎಣ್ಣೆ, ಸೋಯಾ ಎಣ್ಣೆ ಹಾಗೂ ಕುಸುಬೆ ಎಣ್ಣೆಗಳ ಬಳಕೆ ಅತಿ ವಿರಳ. ಅನೇಕ ಸಂಘ ಸಂಸ್ಥೆಗಳು ಹಾಗೂ ಕೃಷಿ ವಿಶ್ವವಿದ್ಯಾಲಯದ ಗೃಹ ವಿಜ್ಞಾನದ ಘಟಕ ಸೂರ್ಯಕಾಂತಿ ಎಣ್ಣೆ ಹಾಗೂ ಸೋಯಾ ಎಣ್ಣೆ ಬಳಕೆಯ ಲಾಭವನ್ನು ಎರಡು ದಶಕಗಳಿಂದ ಪ್ರಚುರ ಪಡಿಸುತ್ತಿವೆ.

ಸೂರ್ಯಕಾಂತಿ ಎಣ್ಣೆಯ ಉಪಯೋಗದಿಂದ ರಕ್ತದಲ್ಲಿ ಸಂಚರಿಸುವ ಕೊಲೆಸ್ಟರಾಲ್ ಪ್ರಮಾಣವನ್ನು ನಿಯಂತ್ರಿಸಬಹುದು. ಆದರೆ ಕಡಲೇಕಾಯಿ ಎಣ್ಣೆ ಅಥವಾ ಕೊಬ್ಬರಿ ಎಣ್ಣೆಯನ್ನು ಉಪಯೋಗಿಸಿದರೆ ರಕ್ತದಲ್ಲಿ ಕೊಲೆಸ್ಟೆರಾಲ್ (Cholesterol) ಪ್ರಮಾಣ ಹೆಚ್ಚಾಗುತ್ತದೆ. ಈ ರೀತಿಯ ನಿಯಂತ್ರಣಕ್ಕೆ ಕೊಬ್ಬಿನಲ್ಲಿರುವ ಅಸಂತೃಪ್ತ ಮೇದೋ ಆಮ್ಲಗಳೇ (Unsaturated fatty acids) ಎಂದು ವೈಜ್ಞಾನಿಕವಾಗಿ ತಿಳಿದು ಬಂದಿದೆ.

ಹೃದಯ ರೋಗಕ್ಕೆ ತುತ್ತಾಗುವ ಅನೇಕ ಜನರ ದೇಹದಲ್ಲಿ ಕೊಬ್ಬಿನ ಅಂಶ ಹೆಚ್ಚು ಪ್ರಮಾಣದಲ್ಲಿ ಇರುತ್ತದೆ. ಅಲ್ಲದೆ ರಕ್ತದಲ್ಲಿ ಕೊಲೆಸ್ಟೆರಾಲ್ ಪ್ರಮಾಣವೂ ಹೆಚ್ಚಾಗಿರುತ್ತದೆ.

ಕೊಲೆಸ್ಟೆರಾಲ್ ಬಿಳುಪಾದ ಮೇಣದಂತಹ ವಸ್ತು. ಇದು ಕೊಬ್ಬಿನೊಂದಿಗೆ ಸುಲಭವಾಗಿ ಬೆರೆಯುತ್ತದೆ. ಆದರೆ ಇದು ರಾಸಾಯನಿಕವಾಗಿಯೂ, ಕಾರ್ಯನಿರ್ವಹಣೆಯ ದೃಷ್ಟಿಯಿಂದಲೂ ಮೇಧಸ್ಸಿಗಿಂತ ವಿಭಿನ್ನವಾದದ್ದು. ಇದು ನಮ್ಮ ದೇಹದಲ್ಲಿ ಅನೇಕ ಜೀವಕಣಗಳಲ್ಲಿ ಸಂಯೋಜಿಸಲ್ಪಡುತ್ತದೆ. ಹೇರಳವಾಗಿ ಪಿತ್ತಕೋಶದಲ್ಲಿ ಸಂಯೋಜನೆಯಾಗುತ್ತದೆ. ಈ ಜೈವಿಕ ಘನವಸ್ತು ಜೀವಕೋಶಗಳಲ್ಲಿ ಸತತವಾಗಿ ಸಂಯೋಜನೆ ಹೊಂದಿ ಅನೇಕ ಬದಲಾವಣೆಗಳನ್ನೂ ಹೊಂದುತ್ತದೆ. ಮಾನವ ದೇಹದಲ್ಲಿ ಉತ್ಪತ್ತಿಯಾಗುವ ಚೋದಕ ಸ್ರಾವಗಳಿಗೆ (Hormones) ಇದು ಪೂರ್ವಗಾಮಿ. ದೇಹದ ರಚನೆಯನ್ನು ಹೊಂದಿಕೊಂಡು ಪುರುಷರಲ್ಲಿ ಆ್ಯಂಡ್ರೋಜನ್ ಮತ್ತು ಸ್ತ್ರೀಯರಲ್ಲಿ ಈಸ್ಟ್ರೋಜನ್ ಎಂಬ ಚೋದಕ ಸ್ರಾವವಾಗಿ ಪರಿವರ್ತನೆ ಹೊಂದುವುದು. ಮಿದುಳು, ಮಿದುಳು ಬಳ್ಳಿಯ ಹಾಗೂ ನರಮಂಡಲದ ಅವಿಭಾಜ್ಯ ಅಂಗವಾದ ಕೊಲೆಸ್ಟೆರಾಲ್ ನರಮಂಡಲದಲ್ಲಿ ಹರಿಯುವ ತರಂಗವಾಹಿನಿಗೆ ಪೂರಕ. ಅಲ್ಲದೆ ನರಮಂಡಲದಲ್ಲಿ ವಿದ್ಯುತ್‌ವಾಹಕದಂತೆ ಹಾಗೂ ವಿಸಂಬುಗಾಓಯಂತೆ ಕಾರ್ಯನಿರ್ವಹಿಸುತ್ತದೆ. ಅಂದ

ಮೇಲೆ ಜೀವಕಣಗಳ ಆರೋಗ್ಯಕ್ಕೆ ಮತ್ತು ದೈನಂದಿನ ಚಟುವಟಿಕೆಗಳಿಗೆ ಇದು ಅತ್ಯಂತ ಅಮೂಲ್ಯವಾದ ಘಟಕ. ಇಂತಹ ಗುಣಗಳಿರುವ ವಸ್ತು ಹಲವು ಸಂದರ್ಭಗಳಲ್ಲಿ ನಮಗೆ ಮಾರಕವಾಗಬಹುದು ಎಂಬುದು ಆಶ್ಚರ್ಯಕರವಾದ ಸಂಗತಿ. ಇವರ ರೂಪರೇಷೆಗಳನ್ನು ಅರಿಯಲು ವಿಜ್ಞಾನಿಗಳು ಸಂಶೋಧನೆ ನಡೆಸುತ್ತಿದ್ದಾರೆ.

ಒಬ್ಬ ಸಾಮಾನ್ಯ ಆರೋಗ್ಯವಂತ ವ್ಯಕ್ತಿಯ ದೇಹದಲ್ಲಿ ಕೊಲೆಸ್ಟೆರಾಲ್ ಪ್ರಮಾಣ ದೇಹದ ಪ್ರತಿ ಕಿಲೋಗ್ರಾಮ್ ತೂಕದಲ್ಲಿ 1.5 ಗ್ರಾಮನ್ನು ಮೀರಬಾರದು. ಅದರಂತೆಯೇ ರಕ್ತದಲ್ಲಿ ಇದರ ಗರಿಷ್ಠ ಪ್ರಮಾಣ ಒಂದು ಮಿಲಿಲೀಟರ್ ರಕ್ತಕ್ಕೆ 280 ಮಿಲಿಗ್ರಾಂ ಮೀರಬಾರದು. ಹಾಗೆಯೇ ಇದರ ಕನಿಷ್ಠ ಪ್ರಮಾಣ ಮಿಲಿಲೀಟರಿಗೆ 150 ಮಿಲಿಗ್ರಾಮುಗಳಷ್ಟು. ರಕ್ತದಲ್ಲಿ ಗರಿಷ್ಠ ಪ್ರಮಾಣವನ್ನು ಮೀರಿದಾಗ ಹೆಚ್ಚಿನ ಕೊಲೆಸ್ಟೆರಾಲ್ ರಕ್ತನಾಳದ ಅಪಧಮನಿಗಳಲ್ಲಿ ಶೇಖರಿಸಲ್ಪಡುತ್ತದೆ. ಇದರಿಂದಾಗಿ ರಕ್ತನಾಳಗಳು ಪೆಡಸಾಗಿ ರಕ್ತದ ಒತ್ತಡ ಹೆಚ್ಚಾಗುತ್ತದೆ. ಇದರಿಂದ ಹೃದಯ ಹೆಚ್ಚು ಕೆಲಸ ಮಾಡಬೇಕಾಗುವುದು. ಕೊಲೆಸ್ಟೆರಾಲಿನ ಸಂಗ್ರಹ ಅತಿಯಾದಾಗ ರಕ್ತನಾಳ ಪೂರ್ತಿಯಾಗಿ ಮುಚ್ಚಿ ಹೃದಯಸ್ತಂಬನಕ್ಕೆ ನಾಂದಿಯಾಗುತ್ತದೆ. ಇದಲ್ಲದೇ ದೇಹದಲ್ಲಿನ ಅತ್ಯಧಿಕ ಪ್ರಮಾಣದ ಕೊಲೆಸ್ಟೆರಾಲ್ ಪಿತ್ತಜನಕಾಂಗ ರೋಗಕ್ಕೂ ಕಾರಣವಾಗುತ್ತದೆ. ರೋಗಗ್ರಸ್ಥ ಪಿತ್ತಜನಕಾಂಗದಲ್ಲಿ ಹೇರಳವಾಗಿ ಉತ್ಪತ್ತಿಯಾಗುವ ಪಿತ್ತಶ್ಮರಿ ಹರಳುಗಳಿಗೆ (goll Stones) ಇದು ಪೂರ್ವಗಾಮಿ. ಇದರಿಂದ ಪಿತ್ತಜನಕಾಂಗ ಹಾಗೂ ಪಿತ್ತಕೋಶಗಳಲ್ಲಿ ಅನೇಕ ನ್ಯೂನತೆಗಳು ಉದ್ಭವಿಸುತ್ತವೆ. ಅಂದರೆ, ಜೀವಕೋಶದಲ್ಲಿ ಸತತವಾಗಿ ಕೊಲೆಸ್ಟೆರಾಲ್ ಸಂಯೋಜನೆ ಹೊಂದುವುದು ಮತ್ತು ಕಣ್ಣುಗಳ ನೆರವಿನಿಂದ ಮಾರ್ಪಾಡು ಹೊಂದುವುದು. ನಾವು ಸೇವಿಸುವ ಆಹಾರದಲ್ಲಿ ಕೊಲೆಸ್ಟೆರಾಲ್ ಪ್ರಮಾಣ ಕಡಿಮೆಯಾದರೆ ಪಿತ್ತಕೋಶದಲ್ಲಿ ಇದರ ಸಂಯೋಜನೆ ಹೆಚ್ಚುವುದು. ಆದುದರಿಂದ ಕೊಲೆಸ್ಟೆರಾಲ್ ಇಲ್ಲದ ಮೇಧಸ್ಸು ಅಥವಾ ಎಣ್ಣೆ ಪದಾರ್ಥಗಳು ಎಂದು ನಾವು ಓದುವ ಜಾಹೀರಾತುಗಳು ತುರುಳಿಲ್ಲದ ಘೋಷಣೆಗಳು. ಸಾಮಾನ್ಯವಾಗಿ ಪ್ರಾಣಿಗಳ ಕೊಬ್ಬಿನ ಜೊತೆಯಲ್ಲಿ ಕೊಲೆಸ್ಟೆರಾಲ್ ಹೆಚ್ಚಿನ ಅಂಶದಲ್ಲಿ ದೊರೆಯುತ್ತದೆ. ಆದರೆ ಸಸ್ಯಜನ್ಯವಾದ ಎಣ್ಣೆ ಕಾಳುಗಳು ಮತ್ತು ಇವುಗಳಿಂದ ತೆಗೆದ ಎಣ್ಣೆಯಲ್ಲಿ ಕೊಲೆಸ್ಟೆರಾಲ್ ಇರುವುದಿಲ್ಲ.

ರಕ್ತದಲ್ಲಿ ಕೊಲೆಸ್ಟೆರಾಲ್ ಪ್ರಮಾಣ ಹೆಚ್ಚಾದಾಗ ಗ್ಲಿಸರಾಲ್ ಪ್ರಮಾಣವೂ ಅಧಿಕವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಸಂತೃಪ್ತ ಮೇದೋ ಆಮ್ಲವನ್ನು ಹೊಂದಿರದ ಮೇಧಸ್ಸಿನ (ಉದಾ: ಕೊಬ್ಬರಿ ಎಣ್ಣೆ, ಕಡಲೇಕಾಯಿ ಎಣ್ಣೆ, ಬೆಣ್ಣೆ, ತುಪ್ಪ, ಹಾಲು, ಮೊಸರು) ಸೇವನೆಯನ್ನು ವರ್ಜಿಸಬೇಕು. ಅಲ್ಲದೆ ಅಸಂತೃಪ್ತ ಮೇದೋ ಆಮ್ಲಗಳಿರುವ ಮೇಧಸ್ಸನ್ನು (ಉದಾ: ಸೂರ್ಯಕಾಂತಿ ಎಣ್ಣೆ, ಸೋಯಾ ಎಣ್ಣೆ, ಕುಸುಬೆ ಎಣ್ಣೆ) ಹೆಚ್ಚು ಪ್ರಮಾಣದಲ್ಲಿ ಸೇವಿಸಬೇಕು. ಇದರಿಂದ ಅಸಂತೃಪ್ತ ಮೇದೋ ಆಮ್ಲಗಳು ರಕ್ತದಲ್ಲಿರುವ ಕೊಲೆಸ್ಟೆರಾಲ್‌ನೊಂದಿಗೆ ಸುಲಭವಾಗಿ ಸಂಯೋಜನೆ ಹೊಂದಿ ರಕ್ತದಿಂದ ಬೇರೆಯಾಗಲು ನೆರವಾಗುತ್ತದೆ. ಈ ದಿಶೆಯಲ್ಲಿ ಸೂರ್ಯಕಾಂತಿ ಎಣ್ಣೆ ಹೆಚ್ಚು ಫಲಕಾರಿಯಾಗಿದೆ ಎಂದು ಇತ್ತೀಚಿನ ಸಂಶೋಧನೆಗಳಿಂದ ತಿಳಿದು ಬಂದಿದೆ.

ನಮ್ಮ ದೈನಂದಿನ ಚಟುವಟಿಕೆಗೆ ಮೇಧಸ್ಸು ಅತ್ಯವಶ್ಯಕ. ಇದು ನಮ್ಮ ದೇಹಕ್ಕೆ ಅತ್ಯವಶ್ಯಕವಾದ ಕ್ಯಾಲರಿ ಅಂದರೆ ಶಕ್ತಿಯನ್ನು ನೀಡಲು ನೆರವಾಗುತ್ತದೆ. ಅಲ್ಲದೇ ಇದು ಜೀವಕೋಶದ ಮತ್ತು ಚರ್ಮದ ಅವಿಭಾಜ್ಯ ಅಂಗ. ಶ್ರಮಜೀವಿಗಳಿಗೆ ಮತ್ತು ಕ್ರೀಡಾಪಟುಗಳಿಗೆ ಇದು ಹೆಚ್ಚು ಪ್ರಮಾಣದಲ್ಲಿ ಬೇಕಾಗುತ್ತದೆ. ಕಚೇರಿಗಳಲ್ಲಿ ಕೆಲಸ ಮಾಡುವವರಿಗೆ ವ್ಯಾಯಾಮ ಮಾಡಲು ಸಮಯವಿಲ್ಲದ ಕಾರಣ ಇವರ ದೇಹದಲ್ಲಿ ಕೊಬ್ಬಿನ ಅಂಶ ಹೆಚ್ಚಾಗಿ ಬೊಜ್ಜು ಬೆಳೆಯುವ ಸಂಭವ ಉಂಟು. ಅಂತಹವರು ದೇಹದಲ್ಲಿ ಮೇಧಸ್ಸಿನ ಪ್ರಮಾಣವನ್ನು ನಿಯಂತ್ರಿತ ಆಹಾರ

ಸೇವನೆಯಿಂದ ಹತೋಟಿಯಲ್ಲಿಡಬಹುದು. ಸಸ್ಯಜನ್ಯವಾದ ಹಲವು ಎಣ್ಣೆಕಾಳುಗಳಲ್ಲಿ ಹಾಗೂ ಪ್ರಾಣಿಜನ್ಯವಾದ ಮೇಧಸ್ಸಿನಲ್ಲಿ ವಿಶಿಷ್ಟ ರೀತಿಯ ಅಸಂತೃಪ್ತ ಮೇಧೋ ಆಮ್ಲಗಳು ಗಣನೀಯ ಪ್ರಮಾಣದಲ್ಲಿ ದೊರೆಯುತ್ತವೆ. ಇವುಗಳಿಗೆ $W_3$ ಮೇಧೋ ಆಮ್ಲಗಳು ಎಂದು ಕರೆಯಲಾಗಿದೆ. ಇವುಗಳನ್ನು (essential fatty acids) ಅನಿವಾರ್ಯ ಮೇಧೋ ಆಮ್ಲಗಳು ಎಂದು ಪರಿಗಣಿಸಬಹುದು. ಇವು ನಾವು ಸೇವಿಸುವ ಆಹಾರದಿಂದಲೇ ದೊರಕಬೇಕು. ಈ ಮೇಧೋ ಆಮ್ಲಗಳು ನಿತ್ಯ ಜೀವನದಲ್ಲಿ ಜೀವಕೋಶದಲ್ಲಿ ನಡೆಯುವ ಅನೇಕ ರಾಸಾಯನಿಕ ಕ್ರಿಯೆಗಳಿಗೆ ಅತಿ ಮುಖ್ಯ. $W_3$ ಮೇಧೋ ಆಮ್ಲಗಳು ಕೊಲೆಸ್ಟೆರಾಲ್ ಕಣದೊಂದಿಗೆ ವಿಶಿಷ್ಟ ರೀತಿಯಲ್ಲಿ ಸಂಯೋಜನೆ ಹೊಂದಿ ಅದನ್ನು ರಕ್ತದಿಂದ ಬೇರ್ಪಡಿಸಲು ಅತ್ಯಂತ ಫಲಕಾರಿಯಾಗಿವೆ. ಆದುದರಿಂದಲೇ ಇವುಗಳನ್ನು ಹೊಂದಿದ ಮೇಧಸ್ಸಿನ ಸೇವನೆಯಿಂದ ರಕ್ತದಲ್ಲಿರುವ ಕೊಲೆಸ್ಟೆರಾಲ್ ಪ್ರಮಾಣ ನಿಯಂತ್ರಿಸಲ್ಪಡುತ್ತವೆ. ಎಣ್ಣೆಕಾಳುಗಳಲ್ಲಿ ಸೂರ್ಯಕಾಂತಿ ಎಣ್ಣೆಯಲ್ಲಿ $W_3$ ಮೇಧೋ ಆಮ್ಲ ಗಣನೀಯ ಪ್ರಮಾಣದಲ್ಲಿ ಇದೆ ಎಂದು ಪ್ರಯೋಗಗಳಿಂದ ಕಂಡು ಬಂದಿದೆ. ಆದುದರಿಂದ ನಾವು ದೈನಂದಿನ ಆಹಾರ ತಯಾರು ಮಾಡುವಾಗ ಕಡಲೇಕಾಯಿ ಎಣ್ಣೆ ಅಥವಾ ಕೊಬ್ಬರಿ ಎಣ್ಣೆಗೆ ಬದಲಾಗಿ ಸೂರ್ಯಕಾಂತಿ ಎಣ್ಣೆಯನ್ನು ಅಡಿಗೆಯ ಮಾಧ್ಯಮ (Cooking Medium)ವನ್ನಾಗಿ ಉಪಯೋಗಿಸಿದರೆ ರಕ್ತದಲ್ಲಿ ಕೊಲೆಸ್ಟೆರಾಲ್ ಪ್ರಮಾಣವನ್ನು ಕನಿಷ್ಟ ಮಟ್ಟಕ್ಕೆ ಇಳಿಸಬಹುದು. ಅಲ್ಲದೆ ಈ ನ್ಯೂನತೆಯಿಂದ ಉದ್ಭವಿಸುವ ರೋಗರುಜಿನಗಳನ್ನು ತಡೆಗಟ್ಟಬಹುದು. ●

---

## ಸಾಮ್ಯ :

ಒಂದು ಕಾಲದಲ್ಲಿ ಗಾರೆ ಕೆಲಸ ಮಾಡಿಕೊಂಡಿದ್ದ ಜಾರ್ಜ್ ಲೆಬರ್ ಪಶ್ಚಿಮ ಜರ್ಮನಿಯ (ಆಗಿನ) ರಕ್ಷಣಾ ಸಚಿವರಾದರು. ಆ ಸಂದರ್ಭದಲ್ಲಿ ಪತ್ರಕರ್ತರೊಬ್ಬರು ಈ ಎರಡೂ ಕೆಲಸಗಳಲ್ಲಿ ಏನಾದರೂ ಸಾಮ್ಯ ಕಂಡುಬರುತ್ತದೆಯೇ ಎಂದು ಕೇಳಿದರು. ಅದಕ್ಕೆ ಜಾರ್ಜ್ ಅವರು ನಸುನಗುತ್ತ 'ಹೌದು ಎರಡೂ ಕೆಲಸಗಳಲ್ಲೂ ಒಂದು ಗಮನಾರ್ಹ ಸಾಮ್ಯವು ಕಂಡುಬರುತ್ತದೆ. ಎರಡೂ ಕೆಲಸಗಳಲ್ಲೂ ತುಂಬಾ ಎತ್ತರಕ್ಕೆ ಹೋಗಬೇಕಾಗಿ ಬರುತ್ತದೆ. ಆದರೆ ಹಾಗೆ ಹೋದವರ ತಲೆ ಮಾತ್ರ ತಿರುಗಬಾರದು. ಹಾಗೇನಾದರೂ ಆದಲ್ಲಿ ಪತನ ಖಂಡಿತ' ಎಂದರಂತೆ.

## ಈಸ್ಕಿಲಸ್‌ನ ಮರಣ :

ಸುಪ್ರಸಿದ್ಧ ಗ್ರೀಕ್ ನಾಟಕಕಾರ, ಗ್ರೀಕ್ ರುದ್ರನಾಟಕಗಳ ಪಿತಾಮಹ ಈಸ್ಕಿಲಸ್ ವಿಶ್ವದ ಸಾಹಿತ್ಯ ಪ್ರೇಮಿಗಳಿಗೆ ಸುಪರಿಚಿತ. ಸುಮಾರು ಎಪ್ಪತ್ತು ಶ್ರೇಷ್ಠ ನಾಟಕಗಳನ್ನು ಬರೆದ ಈ ಮಹಾಸಾಹಿತಿಯ ಮರಣ ವಿಚಿತ್ರ ಎನಿಸುವಂಥ ರೀತಿಯಲ್ಲಿ ಸಂಭವಿಸಿತು. ಒಂದು ದಿನ ಈಸ್ಕಿಲಸ್ ಏನನ್ನೋ ಆಳವಾಗಿ ಚಿಂತಿಸುತ್ತಾ ಗದ್ದೆಯೊಂದರಲ್ಲಿ ಕುಳಿತಿದ್ದ. ಭಾರಿ ಆಮೆಯೊಂದನ್ನು ಹೊತ್ತು ಮೇಲೆ ಹಾರುತ್ತಿದ್ದ ಗರುಡವೊಂದು ಅವನ ಬಿಲ್ವಾಟ ತಲೆಯನ್ನು ಕಂಡು ಅದು ಒಂದು ಬಂಡೆಯಿರಬೇಕೆಂದು ಭಾವಿಸಿತು. ಆಮೆಯನ್ನು ಕೊಲ್ಲಬೇಕೆಂದು ಅದನ್ನು ಈ ಸಾಹಿತಿಯ ತಲೆಯ ಮೇಲೆ ಎತ್ತಿ ಹಾಕಿತು. ತಲೆಯೊಡೆದ ಈಸ್ಕಿಲಸ್ ಸ್ಥಳದಲ್ಲಿಯೇ ಸತ್ತನಂತೆ.

● (ಸಂಗ್ರಹ) ಕೆ.ವೆಂಕಣ್ಣಾಚಾರ್



ಯು.ಆರ್.ಕಂಸ್ಲೆ—


HIGH SCHOOL
ಮಿನಿ ಗೈಡ್ ಕಾಪಿ ಮಾಡೋಕೆ ತುಂಬಾ ಅನುಕೂಲವಾಗುತ್ತೆ ಅಲ್ವಾ, ರಾಮು !!


COLLEGE
ಸಾರ್! ಈ ಸಾರಿ ಪರೀಕ್ಷೆಯಲ್ಲಿ ನಮ್ಮನ್ನೇನಾ-ದ್ರು ಫೇಲ್ ಮಾಡಿದ್ರೆ ಇವ್ರು ನಿಮ್ಮ ಮೇಲೆ ಗುಂಡು ಹಾರಿಸ್ತೀವಿ. ಪಾಸ್ ಮಾಡಿದ್ರೆ, ಸುಖಕ್ಕಾಗಿ ಗುಂಡು ಪಾರ್ಟಿ ಕೊಡ್ತೀವಿ, ಏನಂತೀರಾ! ಸಾರ್!!


ಪರೀಕ್ಷೆ ಹತ್ತಿರ ಬಂತಲ್ವಾ, ಮಕ್ಕಳು ಓದಿಕೊಳ್ತಿದಾರೆ!


ನೋಡು! ಅಮ್ಮ ಅಪ್ಪಂಗೆ ನಾವು ಓದಿಕೊಳ್ತಾ ಇದೀವಿ ಅಂತ ತಿಳಿದಿದಾರೆ! ಪಾಪ ಅವರಿಗೇನು ಗೊತ್ತು ನಾವು ಕಾಪಿ ಚೀಟಿ ತಯಾರು ಮಾಡ್ತಿದೀವಿ ಅಂತ!!

# ಬಿಡಿಸಲಾಗದ ಒಗಟು ಈ ಪಿರಾಮಿಡ್

ಜಗತ್ತಿನ ಅದ್ಭುತಗಳಲ್ಲಿ ಒಂದಾದ ಈಜಿಪ್ಟಿನ ಪಿರಾಮಿಡ್‌ಗಳು ಅದರಲ್ಲೂ ಮುಖ್ಯವಾಗಿ ಫೇರೋ ಕುಫುವಿನ ಪಿರಾಮಿಡ್ ಬೀರಿದಷ್ಟು ಭಯ, ಕುತೂಹಲ ಹಾಗೂ ಪ್ರಭಾವವನ್ನು ಇನ್ಯಾವುದೇ ಸ್ಮಾರಕ ಬೀರಿಲ್ಲ. 4,500 ವರ್ಷಗಳ ಹಿಂದೆ ಕಟ್ಟಲ್ಪಟ್ಟ ಕಲ್ಲಿನ ಅತೀ ದೊಡ್ಡದಾದ ಈ ಕಟ್ಟಡ ಐದು ಹೆಕ್ಟೇರುಗಳಷ್ಟು ಜಾಗವನ್ನು ಆಕ್ರಮಿಸಿದೆ. ಇದರ 2.3 ಮಿಲಿಯನ್ ಕಲ್ಲುಗಳು (ಪ್ರತಿಯೊಂದರ ತೂಕ 2.5 ರಿಂದ 50 ಟನ್‌ಗಳು) ಮರುಭೂಮಿಯಿಂದ 147 ಮೀಟರ್‌ಗಳಷ್ಟು ಎತ್ತರದಲ್ಲಿವೆ. ಗೀಜಾದ ಪಿರಾಮಿಡ್‌ನ ಕಲ್ಲುಗಳಿಂದ ಇಡೀ ಫ್ರಾನ್ಸಿನ ಸುತ್ತ ಸುಮಾರು 3 ಮೀಟರ್ ಎತ್ತರ ಹಾಗೂ 1 ಮೀಟರ್ ಅಗಲದ ಕಲ್ಲು ಗೋಡೆ ಕಟ್ಟಬಹುದೆಂದು ನೆಪೋಲಿಯನ್ ಅಂದಾಜು ಮಾಡಿದ್ದ.

ಈ ಪಿರಾಮಿಡ್ ವಿಶೇಷ ವಾಸ್ತುಶಿಲ್ಪಕ್ಕೆ ಹೆಸರುವಾಸಿಯಾಗಿದೆ. ಇಲ್ಲಿ ಕಲ್ಲುಗಳನ್ನು ಒಂದಕ್ಕೊಂದು ಎಷ್ಟು ಕರಾರುವಾಕ್ಕಾಗಿ ಜೋಡಿಸಲಾಗಿದೆಯೆಂದರೆ ಒಂದು ಸಣ್ಣ ಕಾಗದದ ತುಂಡು ಎರಡು ಕಲ್ಲುಗಳ ಮಧ್ಯೆ ನುಸುಳುವುದು ಸಹ ಕಷ್ಟ. ಆಗ್ನೇಯದ ಮೂಲೆ ವಾಯುವ್ಯದ ಮೂಲೆಗಿಂತ ಕೇವಲ 1 ಸೆ.ಮೀ. ಮಾತ್ರ ಎತ್ತರವಾಗಿದೆ. ಇವುಗಳ ಉದ್ದಗಲವೂ ಅಷ್ಟೇ. 10 ಸೆ.ಮೀ. ಗಿಂತ ವ್ಯತ್ಯಾಸವಿಲ್ಲ. ಈ ಎಲ್ಲಾ ಕಲಾಚಾತುರ್ಯ ಸಂಶೋಧಕರನ್ನು ಚಕಿತಗೊಳಿಸಿದುದಲ್ಲದೆ ಹಲವಾರು ಊಹಾಪೋಹಗಳಿಗೆ ಎಡೆ ಮಾಡಿಕೊಟ್ಟಿದೆ. ಕೆಲವರು ಕಂಪ್ಯೂಟರ್‌ಗಳ ನೆರವು ಪಡೆದಿರಬೇಕೆಂದರೆ, ಇನ್ನೂ ಕೆಲವರು ಬೇರೆ ಗ್ರಹಗಳ ಬುದ್ಧಿಜೀವಿಗಳ ಸಹಾಯದಿಂದ ಲೇಸರ್ ಬೀಮ್‌ನಿಂದ ಕಲ್ಲುಗಳನ್ನು ಕರಾರುವಾಕ್ಕಾಗಿ ತುಂಡು ಮಾಡಿರಬೇಕೆಂದು ವಾದಿಸುತ್ತಾರೆ. ಈ ಪಿರಾಮಿಡ್‌ನ್ನು ಹಲವಾರು ಬಾರಿ ಅಳತೆ ಮಾಡಲಾಗಿದೆ. ಎಕ್ಸ್‌ರೇಗೆ ಒಳಪಡಿಸಲಾಗಿದೆ. ವೈಜ್ಞಾನಿಕ ಅಧ್ಯಯನ ನಡೆಸಲಾಗಿದೆ. ಆದರೂ ಇದರ ಬಗ್ಗೆ ಬಗೆ ಹರಿಯದ ಪ್ರಶ್ನೆಗಳಿವೆ.

ಎಸ್.ಜೆ.ಸುಜಾತ

ಪುರಾತನ ಈಜಿಪ್ಟಿನವರಿಗೆ ಗಾಲಿಗಳ ಅಥವಾ ಚಕ್ರಗಳ ಬಳಕೆ ಗೊತ್ತಿರಲಿಲ್ಲ. ಭಾರತ್ತೋಲನ ಯಂತ್ರಗಳ ಅರಿವಿರಲಿಲ್ಲ. ಹಾಗಾದರೆ ಕರಾರುವಾಕ್ಕಾದ ಅಳತೆಯ ಕಲ್ಲುಗಳನ್ನು ಕೇವಲ ಉಳಿ, ಸುತ್ತಿಗೆಯಂತಹ ಸಣ್ಣ ಸಾಧನಗಳಿಂದ [illegible] ಬಾಹು ಬಲದಿಂದಲೇ ಜೋಡಿಸಿದರೆ? ಒಳಭಾಗಕ್ಕೆ ಬೇಕಾದ ಕಲ್ಲುಗಳನ್ನು ಗೀಜಾ ಪ್ರಸ್ಥಭೂಮಿಯ ಸುಣ್ಣದ ಕಲ್ಲುಗಳಿಂದ [illegible]ಗಿದೆ. ಗೋರಿ ಹಾಗೂ ಕೈರೋದ ಅರಮನೆಯನ್ನು ಕಟ್ಟಲು ಬೇಕಾದ ಉತ್ತಮ [illegible] ಕಲ್ಲುಗಳನ್ನು [illegible] ತರಲಾಗಿತ್ತು. [illegible]

ಗಳನ್ನು ಕಟ್ಟಲು ಬೇಕಾದ ಗ್ರಾನೈಟ್ ದಕ್ಷಿಣ ಆಸ್ವಾನ್‌ನಿಂದ ಬಂದಿತ್ತು. ಕಲ್ಲು ಕುಟಿಗರು ಕಲ್ಲುಗಳನ್ನು ಪುಡಿ ಮಾಡಲು ವಿಶೇಷವಾದ ಗಡಸಿನ ಚಮ್ಮಟಿಗೆಯನ್ನು ಉಪಯೋಗಿಸುತ್ತಿದ್ದರು. ನಯವಾದ ಹಾಗೂ ಆಕಾರಗೊಳಿಸಿದ ಕಲ್ಲುಗಳನ್ನು ಸನ್ನೆ ಕೋಲು ಹಾಗೂ ಹಾರೆಗಳ ಸಹಾಯದಿಂದ ಚಕ್ರವಿಲ್ಲದ ಜಾರು ಬಂಡಿಗಳ ಮೇಲಿಟ್ಟು ನೈಲ್ ನದಿಯ ಬಳಿಯ ದೋಣಿಗೆ ಸಾಗಿಸಲು ಕೂಲಿಯಾಳುಗಳು ಬೆವರಿಳಿಸುತ್ತ ಎಳೆದಿರಬೇಕು. ಪಿರಾಮಿಡ್‌ನವರೆಗೂ 18 ಮೀಟರ್ ಅಗಲದ ಕೆಸರು ದಾರಿಯನ್ನು ಮಾಡಲಾಗಿತ್ತು. ಕ್ರಿ.ಪೂ. 5ನೇ ಶತಮಾನದಲ್ಲಿ (2000 ವರ್ಷಗಳ ನಂತರ) ಭೇಟಿ ನೀಡಿದ ಗ್ರೀಕ್ ಇತಿಹಾಸಕಾರ ಹಿರೋಡೆಟಸ್ ಈ ಕೆಸರು ದಾರಿಯನ್ನು ಪಿರಾಮಿಡ್‌ನಷ್ಟೇ ವಿಶೇಷವಾದದ್ದೆಂದು ಹೊಗಳಿದ್ದಾನೆ. ಹಿರೋಡೆಟಸ್‌ನ ಪ್ರಕಾರ (ಈತನಿಗೆ ದೇವಸ್ಥಾನದ ಪಾದ್ರಿಯಿಂದ ಸಿಕ್ಕಿದ ಮಾಹಿತಿಯ ಆಧಾರದಿಂದ) ಈ ಕೆಸರು ದಾರಿಯನ್ನು ನಿರ್ಮಿಸಲು ಹತ್ತು ವರ್ಷಗಳು ಹಾಗೂ ಪಿರಾಮಿಡ್‌ಗಳನ್ನು ಕಟ್ಟಲು ಇನ್ನೂ ಇಪ್ಪತ್ತು ವರ್ಷಗಳು ಬೇಕಾದವು. ಒಂದು ಲಕ್ಷ ಜನರು ಅವಿರತವಾಗಿ ಕೆಲಸ ಮಾಡುತ್ತಿದ್ದರು. ಹಾಗೂ ಮೂರು ತಿಂಗಳಿಗೊಮ್ಮೆ ಇನ್ನೊಂದು ಗುಂಪು ಸಿದ್ಧವಾಗಿರುತ್ತಿತ್ತು. ಆದರೆ ಈಜಿಪ್ಟಿನವರ ಪ್ರಕಾರ ಕುಫು ಆಡಳಿತ ನಡೆಸಿದ್ದು 23 ವರ್ಷಗಳು ಮಾತ್ರ. ಪಿರಾಮಿಡ್‌ನ ನಿರ್ಮಾಣದ ಮೊದಲೆ ಸತ್ತಿದ್ದರೆ ಇನ್ನಿತರ ಪಿರಾಮಿಡ್‌ಗಳಂತೆ ಇದೂ ಪೂರ್ಣವಾಗದೆ ಉಳಿಯುತ್ತಿತ್ತು. ಇವೆಲ್ಲಕ್ಕಿಂತ ಆಶ್ಚರ್ಯದ ಸಂಗತಿಯೆಂದರೆ ಅಷ್ಟು ಭಾರದ ಕಲ್ಲುಗಳನ್ನು ಅಷ್ಟು ಎತ್ತರಕ್ಕೆ ಹೇಗೆ ಸಾಗಿಸಿದರೆಂಬುದು! ಸನ್ನೆ ಕೋಲು ಹಾಗೂ ಚಿಕ್ಕ ಚಿಕ್ಕ ಹಲಗೆಗಳ ಸಹಾಯದಿಂದ ಸಾಗಿಸಲಾಯಿತೆಂದು ಹಿರೋಡೆಟಸ್ ಹೇಳುತ್ತಾನೆ. ಆದರೆ ಇಂಜಿನಿಯರುಗಳ ಪ್ರಕಾರ 50 ಟನ್‌ಗಳಿಗಿಂತ ಹೆಚ್ಚಿನ ತೂಕದ ಗ್ರಾನೈಟ್ ತುಂಡುಗಳನ್ನು ಈ ರೀತಿ ಸಾಗಿಸಲು ಸಾಧ್ಯವಿಲ್ಲದಿರುವುದರಿಂದ 20 ವರ್ಷಗಳಲ್ಲಿ ಈ ರೀತಿ ಕೆಲಸ ಮುಗಿಸುವುದು ಅಸಾಧ್ಯ. ಇಟ್ಟಿಗೆಗಳಿಂದ ಕಟ್ಟಿದ ಹಂಬು ಹಾಗೂ ಮನುಷ್ಯ ಬಲದಿಂದ ಸಾಗಿಸಿರಬಹುದೆಂದು ಹೇಳುತ್ತಾರೆ. ಈ ರೀತಿಯ ಹಂಬುಗಳ (ramps) ಅವಶೇಷಗಳನ್ನು ಇನ್ನಿತರರ ಪಿರಾಮಿಡ್‌ಗಳ ಬಳಿ ಕಾಣಬಹುದಾದರೂ ಈ ವಾದದಲ್ಲಿ ಸತ್ವವಿಲ್ಲ. ಪ್ರತಿ ಬಾರಿ ಕಲ್ಲು ಏರಿಸುವಾಗ ಈ ಹಂಬನ್ನು ಎತ್ತರಿಸಬೇಕಾಗುತ್ತದೆ. ಹೀಗಾದಲ್ಲಿ ಗ್ರೇಟ್ ಪಿರಾಮಿಡ್‌ಗೆ ಕಟ್ಟಿದ ಹಂಬು ಸುಮಾರು 1.6 ಕಿ.ಮೀ. ಎತ್ತರವಿರಬೇಕು. ಇಷ್ಟು ಕಟ್ಟಲು ಬೇಕಾದ ಮಾನವ ಬಲ ಆಗ ಇತ್ತೆಂಬುದು ಸಂಶಯಾಸ್ಪದ. ಈ ರೀತಿ ಹಂಬಿತ್ತೆಂದುಕೊಂಡರೂ ಪಿರಾಮಿಡ್‌ನ ತುದಿಗೆ ಬಂದಾಗ ಅದರ ಅಗಲ ಕೇವಲ ಮೂರು ಮೀಟರ್‌ಗಳಷ್ಟು ಮಾತ್ರ. ಅಟ್ಟಣಿಗೆ ನಿರ್ಮಿಸಿದರೂ ಬೇಕಾದಷ್ಟು ಕೆಲಸಗಾರರು ಅಲ್ಲಿ ನಿಲ್ಲಲು ಆಗುತ್ತಿರಲಿಲ್ಲವೆಂದು ಪರಿಣತರು ಅಭಿಪ್ರಾಯ ಪಡುತ್ತಾರೆ. ಈಜಿಪ್ಟಿನವರು ತಮ್ಮ ತಾಂತ್ರಿಕ ಸಾಧನೆಯನ್ನು ಗೋರಿಯಲ್ಲಿ ಚಿತ್ರಗಳ ಮೂಲಕ ತೋರಿಸಿದ್ದರೂ, ಹಸ್ತ ಪ್ರತಿಗಳಿದ್ದರೂ ತಂತ್ರ, ಕೌಶಲ್ಯದ ಬಗ್ಗೆ ಯಾವುದೇ ಉಲ್ಲೇಖವಿಲ್ಲ. ಸತ್ತ ನಂತರವೂ ಆತ್ಮ ಇರುತ್ತದೆಂದು ನಂಬಿದ್ದ ಈಜಿಪ್ಟಿನವರು ಬದುಕಿದ್ದಾಗ ಅನುಭವಿಸುತ್ತಿದ್ದ ಸುಖ ಸತ್ತ ನಂತರವೂ ಬೇಕೆಂದು ಅದಕ್ಕಾಗಿ ಹಲವಾರು ವಸ್ತುಗಳನ್ನು ಗೋರಿಯಲ್ಲಿಡುತ್ತಿದ್ದರು. ಇದರಲ್ಲಿ ಮುಖ್ಯವಾದದ್ದು ದೇಹವನ್ನು ಕೆಡದಂತೆ ರಕ್ಷಿಸುವುದು. ಇದಕ್ಕಾಗಿ ಶವವನ್ನು ಕೊಳೆಯದಂತೆ ಸುಗಂಧ ಲೇಪಿಸಿ ಇಡುವ ವಿಧಾನವನ್ನು ಕಲಿತುಕೊಂಡರು. ದೇಹಕ್ಕೇನಾದರೂ ಆದರೆ ಎಂದು ಅದರ ಬದಲಿಗೆ ವಿಗ್ರಹಗಳನ್ನು ಇಟ್ಟು ಲಿಖಿತ ಮಂತ್ರ ಪ್ರಯೋಗದಿಂದ ಜೀವ ತುಂಬಬಹುದೆಂದು ನಂಬಿದ್ದರು. ಸತ್ತವನಿಗೆ ಶತಮಾನಗಳಿಗಾಗುವಷ್ಟು ಆಹಾರ, ಒಡವೆ, ಆಯುಧ, ಪೀಠೋಪಕರಣ, ಬಿಯರ್ ಹಾಗೂ ವೈನ್‌ಗಳನ್ನು ಇಡುತ್ತಿದ್ದರು. ಸೈನಿಕರ, ಸೇವಕರ, ಹಾಗೂ ಹಡಗುಗಳ ಮಾದರಿಗಳನ್ನು ಅಲ್ಲಿಡಲಾಗಿತ್ತು. ಅಲ್ಲದೆ ಸತ್ತವನ ಹೆಂಡತಿ, ಮಕ್ಕಳು, ವಿಜಯೋತ್ಸವ

ಹಾಗೂ ಆತನ ಕ್ರೀಡೆಗಳ ಬಗ್ಗೆ ಚಿತ್ರಿಸಲಾಗುತ್ತಿತ್ತು. ಇವೆಲ್ಲವನ್ನು ಶರೀರದೊಂದಿಗೆ ಅಭೇದ್ಯ ಗೋರಿಯೊಳಗಿಟ್ಟು ಸತ್ತವನ ನೆನಪಿಗಾಗಿ ಸುತ್ತಲೂ ದೇವಸ್ಥಾನಗಳನ್ನು ಕಟ್ಟಲಾಗುತ್ತಿತ್ತು.

ಮೊದಮೊದಲು ಕುಫುವಿಗೆ ಅಷ್ಟು ಬೃಹತ್ ಪಿರಾಮಿಡ್‌ನ್ನು ನಿರ್ಮಿಸುವ ಯೋಚನೆಯಿರಲಿಲ್ಲ. ಮಮ್ಮಿಯನ್ನು ಇಡುವಷ್ಟು ಚಿಕ್ಕದಾದ ಸಾಧಾರಣ ಗೋರಿಯನ್ನು ಕಟ್ಟಲು ಯೋಜಿಸಿದ್ದ. ಆದರೆ ಗೋರಿ ಕಟ್ಟುವ ರಾಜನ ಹುಚ್ಚು ಅಭ್ಯಾಸ ಬೆಳೆದಂತೆ ಅದನ್ನು ವಿಸ್ತರಿಸಲಾಯಿತು. ರಾಣಿಯ ಕೋಣೆ, ಇದಕ್ಕಿಂತ ದೊಡ್ಡದಾದ ರಾಜನ ಕೋಣೆ ಮೈದಾನ ಮಟ್ಟದಿಂದ 43 ಅಡಿ ಎತ್ತರದಲ್ಲಿದ್ದು ಪಿರಾಮಿಡ್‌ನ ಮಧ್ಯ ಭಾಗದಲ್ಲಿದೆ. ಇದಕ್ಕೆ ಪ್ರವೇಶಿಸಲು ಇರುವ ಒಂದೇ ಬಾಗಿಲು ತಿರುಗುವ ಹಾಗೆ ಸುಣ್ಣದ ಕಲ್ಲಿನಿಂದ ಮಾಡಿದ್ದು, ಪಿರಾಮಿಡ್‌ನ 13ನೇ ಮೆಟ್ಟಿಲ ಬಳಿ ಇದ್ದು ಮೈದಾನದಿಂದ 17 ಮೀಟರ್ ಎತ್ತರದಲ್ಲಿದೆ.

ಕ್ರಿ.ಶ. 820ರಲ್ಲಿ ಈಜಿಪ್ಟಿನ ಮುಸ್ಲಿಂ ಖಲಿಫ್ ಅಬ್ದುಲಾ-ಅಲ್-ಮಾಮುನ್ ಪಿರಾಮಿಡ್‌ನ ಒಳಗಿದೆಯೆಂದು ನಂಬಲಾದ ವೈಜ್ಞಾನಿಕ ಹಾಗೂ ಖಗೋಲ ಹಸ್ತಪ್ರತಿಗಳ ಬಗ್ಗೆ ಅರಿಯಲು, ತುಕ್ಕು ಹಿಡಿಯದ ವಿಚಿತ್ರ ಲೋಹದ ಹಾಗೂ ಒಡೆಯದೆ ಬಗ್ಗಿಸಬಹುದಾದ ಮೆದು ಗಾಜಿನ ಬಗ್ಗೆ ತಿಳಿಯಲು ಪಿರಾಮಿಡ್‌ನ ಒಳಗೆ ಪ್ರವೇಶಿಸಿದರು. ಇದನ್ನು ಪ್ರವೇಶಿಸಲು ಇದ್ದ ಗುಪ್ತದ್ವಾರದ ಬಗ್ಗೆ ಆಗಲೇ ಮರೆತು ಹೋಗಿದ್ದರಿಂದ ಮರಳಿನ ಮೇಲಿಂದ ಕಲ್ಲಿಗೆ ಕಾಲುವೆ ತೋಡಿದರು. 30 ಮೀಟರ್ ಒಳಗೆ, ಪೂರ್ಣಗೊಳಿಸದ ನೆಲದೊಳಗಿರುವ ಮೃತ ಗೃಹಕ್ಕೆ ಹೋಗುವ ದಾರಿಯನ್ನು ಕಂಡರು. ಆದರೆ ಅಲ್ಲಿ ಧೂಳು ಹಾಗೂ ಅವಶೇಷದ ಹೊರತು ಇನ್ನೇನಿರಲಿಲ್ಲ. ಅರ್ಧ ದಾರಿಯ ನಂತರ ಗ್ರಾನೈಟ್ ಕಲ್ಲುಗಳಿಂದ ಮುಚ್ಚಿದ ದಾರಿಯನ್ನು ಕಂಡರು. ಅದನ್ನು ಕತ್ತರಿಸಿ ಒಳ ಪ್ರವೇಶಿಸಿ ನಂತರ ಈ ಖಾಲಿಯಾದ ರಾಣಿ ಹಾಗೂ ರಾಜನ ಕೋಣೆಗೆ

ಗುಣಕೆ ಗುಣ ಗುಣಿಸಿದರೆ
ಗುಣವಂತರ ತೇಜಃಧಾರೆ

ಗುಣಕೆ ಹಣ ದಾಹ ಸೇರಿದರೆ
ಗುಣಾಢ್ಯರ ಬಣ್ಣವೂ ಬೇರೆ!

● ದೊಡ್ಡರಂಗೇಗೌಡ

ಒಯ್ಯುವ ಸುರಂಗ ಮಾರ್ಗ ನೋಡಿದರು. ಗ್ರಾನೈಟಿನಿಂದ ಮಾಡಿದ ನುಣುಪಾದ ಮುಚ್ಚಳವಿರದ ಶಿಲೆಯ ಶವದಾನಿಯ ಹೊರತು ಬೇರೇನೂ ಕಾಣಸಿಗಲಿಲ್ಲ. ಆದರಿದು ನಂಬಲಸಾಧ್ಯವಾಗಿತ್ತು. ಒಂಭತ್ತು ವರ್ಷ ರಾಜ್ಯಭಾರ ಮಾಡಿ ತನ್ನ 19ನೇ ವಯಸ್ಸಿನಲ್ಲಿ ತೀರಿಕೊಂಡ ರಾಜ ಟುಟುಕಾಮನ್ ಗೋರಿಯಲ್ಲಿ ಸಿಕ್ಕಿದ ಅಗಾಧ ಸಂಪತ್ತಿಗೆ ಹೋಲಿಸಿದರೆ 23 ವರ್ಷ ರಾಜ್ಯಭಾರ ಮಾಡಿದ ಕುಫುನ ಸಂಪತ್ತು ಇದಕ್ಕಿಂತ ಹೆಚ್ಚಿರಬೇಕಿತ್ತು. ಕುಫುವಿನ ಮಮ್ಮಿ ಸಹ ಸಿಗಲಿಲ್ಲ. 1763ರಲ್ಲಿ ಇನ್ನೊಂದು ಮಾರ್ಗ ಪತ್ತೆಯಾಯಿತು. ರಾಜನ ಕೋಣೆಯ ಪಕ್ಕದ ಗ್ರಾಂಡ್ ಗ್ಯಾಲರಿಯಿಂದ ನೇರವಾಗಿ ನಿರ್ಮಿಸಿದ ಈ ರಹಸ್ಯ ಮಾರ್ಗ 60 ಮೀಟರ್ ಉದ್ದವಾಗಿತ್ತು. ಗ್ರಾನೈಟ್ ಚಿಣೆಗಳನ್ನು ಜೋಡಿಸಿದ ನಂತರ ತಪ್ಪಿಸಿಕೊಳ್ಳಲು ರಾಜನಿಗೆ ಗೊತ್ತಿಲ್ಲದಂತೆ ಮಾಡಿದ ಮಾರ್ಗ ಇದಾಗಿರಬೇಕೆಂದು ನಂಬಲಾಗಿದೆ. ಈ ಮಾರ್ಗದ ಮೂಲಕವೇ ಕುಫುವಿಗೆ ಚಿನ್ನದ ರಸ ಲೇಪಿತ ಮಮ್ಮಿಯನ್ನು ಹಾಗೂ ಅಪಾರ ಸಂಪತ್ತನ್ನು ಗೋರಿ ಕಳ್ಳರು ಸಾಗಿಸಿರಬೇಕು. ಹಾಗಿದ್ದರೆ ಆಹಾರ ಸಾಮಗ್ರಿಗಳೇನಾದವೆಂಬ ಪ್ರಶ್ನೆ ಏಳುತ್ತದೆ. ಹಾಗೆಯೇ ಶಿಲಾ ಶವದಾನಿಯ ಮುಚ್ಚಳವೇನಾಯಿತು? ಕೃತಕ ಗೋರಿಗಳನ್ನು ಕಟ್ಟುವುದು ಫೇರೋಗಳಿಗೇನು ಹೊಸದಾಗಿರಲಿಲ್ಲ. ಬಹುಶಃ ಯಾವುದೋ ಚಿಕ್ಕ ಗೋರಿಯಲ್ಲಿ (ಇನ್ನೂ ಕಂಡು ಹಿಡಿಯಬೇಕಾದ) ಕುಫು ಹಾಗೂ ಅವನ ಅಗಾಧ ಸಂಪತ್ತನ್ನಿಟ್ಟು ದೊಡ್ಡ

ಪಿರಾಮಿಡ್ನನ್ನೇ ತೋರಿಕೆಗಾಗಿ ಕಟ್ಟಿರಬೇಕೆಂಬ ಸಾಧ್ಯತೆಯೂ ಇದೆ. ಸಕ್ಕಾರದ ಜೋಸರನ ಪಿರಾಮಿಡ್ ಜೇನುಗೂಡಿನಂತಿದ್ದು ಹಲವಾರು ಕೋಣೆಗಳಿವೆ. ಆದರೆ ಕುಫುವಿನ ಪಿರಾಮಿಡ್ನಲ್ಲಿ ಕೆಲವೇ ದಾರಿಗಳಿದ್ದು ಮೂರು ಕೋಣೆಗಳು ಮಾತ್ರ ಇವೆ.

1966ರಲ್ಲಿ ನೊಬೆಲ್ ಪ್ರಶಸ್ತಿ ವಿಜೇತ ಭೌತಶಾಸ್ತ್ರಜ್ಞ ಲೂಯಿಸ್ ಆಲ್ವಾರಿಜ ಹಾಗೂ ಆತನ ಸಂಗಡಿಗರು ಕುಫುವಿನ ಮಗ ಕಾಫ್ರೆಯ ಪಿರಾಮಿಡ್‌ನ ಕೋಣೆಯಲ್ಲಿ ಕಾಸ್ಮಿಕ್ ಕಿರಣ ಶೋಧನೆ ನಡೆಸಿ ಒಳಭಾಗದ ಚಿತ್ರಣ ಪಡೆದರು. ಆದರೆ ಹೆಚ್ಚಿನ ಮಾಹಿತಿಯೇನೂ ದೊರೆಯಲಿಲ್ಲ. ಕ್ಯಾಲಿಫೋರ್ನಿಯಾದ ಸ್ಟ್ಯಾನ್‌ಫೋರ್ಡ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಗುಪ್ತ ಕೊಠಡಿಗಳ ಬಗ್ಗೆ ಪುನಃ ಕಾರ್ಯಾಚರಣೆ ಪ್ರಾರಂಭಿಸಿತು.

1954ರಲ್ಲಿ 43 ಮೀಟರ್ ಉದ್ದದ ದೇವದಾರು ಮರದ, ಕೋಣೆಗಳಿದ್ದ ದೋಣಿಯೊಂದು ಗ್ರೇಟ್ ಪಿರಾಮಿಡ್‌ನ ದಕ್ಷಿಣದ ಭಾಗದ ಮರಳಿನಲ್ಲಿ ಪತ್ತೆಯಾಯಿತು. ಇದು ಧಾರ್ಮಿಕ ವಿಧಿಗಳಲ್ಲಿ ಮಾತ್ರ ಬಳಸುತ್ತಿದ್ದ ಕುಫುವಿನ ಸನ್ ಬೋಟ್ ಇರಬೇಕೆಂದು ನಂಬಲಾಗಿದೆ. ಶಿಲ್ಪಶಾಸ್ತ್ರಜ್ಞರ ಪ್ರಕಾರ ಇದೇ ತರಹ ಮೂನ್ ಬೋಟೊಂದು ಪಿರಾಮಿಡ್‌ನ ಪೂರ್ವ ಭಾಗದಲ್ಲಿರಬೇಕೆಂದು ಹೇಳುತ್ತಾರೆ. ಆದರೆ ಅದಿನ್ನೂ ಪತ್ತೆಯಾಗಬೇಕಾಗಿದೆ. ''ಏನಂತಹ ಅವಸರ?'' ಈಜಿಪ್ಟಿನ ಕ್ಯೂರೇಟರ್ ಒಬ್ಬರು ಹೇಳುತ್ತಾರೆ, ''45 ಶತಮಾನಗಳಿಂದ ಹಾಗೆಯೇ ಇರುವಾಗ ಇನ್ನು ಕೆಲವು ದಶಕಗಳ ಕಾಲ ಯಾರಿಗೂ ಸಿಗದೆ ಇದ್ದರೆ ತೊಂದರೆಯೇನಿಲ್ಲ. ಯಾರಿಗೆ ಗೊತ್ತು ಬಹುಶಃ ಆ ರಾಜನಿಗೆ ಅದು ಬೇಕಿರಬಹುದು.'' ●

## ಕೀಟ ನಾಶಕ್ಕೆ 'ವೈರಸ್ ಆತ್ಮಹತ್ಯಾ ಪಡೆ'

ಲಕ್ಷಾಂತರ ಟನ್ನು ಬೆಳೆಯನ್ನು ತಿಂದು, ಕೆಡಿಸಿ ನಾಶಮಾಡುವ ಕೀಟಗಳನ್ನು ನಿಯಂತ್ರಿಸಲು ಜೈವಿಕ ವಿಜ್ಞಾನಿಗಳು ಹೊಸದೊಂದು ವಿಧಾನವನ್ನು ಆವಿಷ್ಕರಿಸಿದ್ದಾರೆ. ಕೀಟಗಳ ಮೇಲೆ ದಾಳಿ ಮಾಡಿ ಅವುಗಳಿಗೆ ಅಂತ್ಯ ಕಾಣಿಸುವ 'ವೈರಸ್‌ಗಳ ಆತ್ಮಾಹತ್ಯಾ ಪಡೆ'ಯನ್ನು ಭಾರತದ ಜೈವಿಕ ವಿಜ್ಞಾನಿಗಳು ಅಭಿವೃದ್ಧಿಪಡಿಸಿದ್ದು ಮುಂದಿನ ದಿನಗಳಲ್ಲಿ ಈ 'ಪಡೆ'ಯ ಸಹಾಯದಿಂದ ರೈತರು ಕೀಟಗಳ ವಿರುದ್ಧ ಹೋರಾಡಬಹುದಾಗಿದೆ.

ಬೆಳೆದ ಪೈರುಗಳಿಗೆ ಗಂಟುಬೀಳುವ ಕೀಟಗಳನ್ನು ನಿರ್ದಯವಾಗಿ ನಾಶಪಡಿಸುವ ಈ ಕೀಟ ನಾಶಕ ವೈರಸ್‌ಗಳು ತಮ್ಮ ಕರ್ತವ್ಯ ನಿರ್ವಹಿಸಿದ ನಂತರ ತಮ್ಮಷ್ಟಕ್ಕೆ ತಾವೇ ಸತ್ತುಬೀಳುವುದರಿಂದ ಪಾರ್ಶ್ವಪರಿಣಾಮದ ಭಯಕ್ಕೆ ಕಾರಣವಿಲ್ಲ. ಇವು ವಾತಾವರಣದೊಳಗೆ ಸೇರಿ ಅಪಾಯವನ್ನುಂಟು ಮಾಡುವ ಸಾಧ್ಯತೆಯೂ ಇಲ್ಲ. ಈ ವೈರಸ್‌ಗಳು ಅತ್ಯಂತ ಮೃದು ದೇಹರಚನೆಯ ಸೂಕ್ಷ್ಮ ಜೀವಿಗಳಾಗಿದ್ದು 'ಪಾಲಿಹೆಡ್ರಿನ್' ಎಂಬ ಕವಚವೇ ಇವುಗಳಿಗೆ ನೈಸರ್ಗಿಕ ಏರಿಳಿತ, ಸೂರ್ಯನ ಪ್ರಕಾಶ ಇತ್ಯಾದಿಗಳಿಂದ ರಕ್ಷಣೆ ಒದಗಿಸುತ್ತದೆ. ವೈರಸ್‌ಗಳ ಈ ಪ್ರಾಣ ರಕ್ಷಕ ಗುಟ್ಟನ್ನು ಅರಿತುಕೊಂಡಿರುವ ವಿಜ್ಞಾನಿಗಳು ಅದನ್ನೇ ಉಪಯೋಗಿಸಿಕೊಂಡು, ವೈರಸ್‌ಗಳ ಕವಚಕ್ಕೆ ಕಾರಣವಾದ ಜೀನ್‌ಗಳನ್ನು ತೆಗೆದುಹಾಕುತ್ತಾರೆ. ಈ ರೀತಿ ಸಿದ್ಧಗೊಳಿಸಿದ 'ಆತ್ಮಾಹತ್ಯಾ ಪಡೆ' ಕೀಟಗಳನ್ನು ಕೊಂದುಹಾಕಿದ ನಂತರ ಕವಚದ ರಕ್ಷಣೆಯಿಲ್ಲದೆ ಕೆಲವೇ ಗಂಟೆಗಳಲ್ಲಿ ಸಾವನ್ನಪ್ಪುತ್ತದೆ.

ಕೀಟಗಳ ಹಾವಳಿಯಿಂದ ತಲೆ ರೋಸಿದ ರೈತರ ಪಾಲಿಗೆ ವರವಾಗಿ ಬರಲಿರುವ ಈ 'ವೈರಸ್ ಸೇನೆ' ಇನ್ನೂ ಪ್ರಯೋಗದ ಹಂತದಲ್ಲಿದೆ. ಕೀಟಗಳ ಮೇಲೆ ಮಾತ್ರ ತಮ್ಮ ಪ್ರತಾಪ ತೋರುವ ಈ ವೈರಸ್‌ಗಳು ಇತರೆ ಪ್ರಾಣಿ, ಪಕ್ಷಿ, ಗಿಡಗಳ ಮೇಲೆ ದುಷ್ಪರಿಣಾಮ ಬೀರಲಾರವು. ಪ್ರಯೋಗಶಾಲೆಯ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ವೈರಸ್ ಪಡೆ ಹೊರಬರುವುದನ್ನೇ ನಿರೀಕ್ಷಿಸಲಾಗುತ್ತಿದೆ.

-'ಚಂದಿರ'

ಕೆ.ಟಿ. ಪಾಂಡುರಂಗಿ

# ವಿಚಾರ-ವಿವೇಕ

ಮನುಷ್ಯನು ಜೀವನದಲ್ಲಿ ಯಶಸ್ವಿಯಾಗಲು ವಿಚಾರ ವಿವೇಕ ಎರಡೂ ಅಗತ್ಯ. ಯಾವುದೇ ಒಂದು ವಸ್ತುವಿನ ಅಥವಾ ವಿಷಯದ ಸ್ವರೂಪ ಲಕ್ಷಣ ಪ್ರಕಾರ ಅವುಗಳ ಹೊಂದಾಣಿಕೆ ಇವುಗಳನ್ನೆಲ್ಲಾ ತರ್ಕಬದ್ಧವಾಗಿ ವಿಶ್ಲೇಷಿಸುವುದು ವಿಚಾರ. ಇವುಗಳ ಹಿತ-ಅಹಿತ ಪರಿಣಾಮ, ಗ್ರಾಹ್ಯ ಅಗ್ರಾಹ್ಯತೆಯ ತೂಕ, ಉಚಿತ ಅನುಚಿತತೆಗಳ ಮೌಲ್ಯಮಾಪನಗಳನ್ನು ಮಾಡುವದು ವಿವೇಕ. ವಿಚಾರ ಒಂದು ತಾರ್ಕಿಕ ಕ್ರಮ. ವಿವೇಕ ಒಂದು ನೈತಿಕ ಮೌಲ್ಯ. ವಿಚಾರವು ವಿವೇಕವನ್ನು ಕುದುರಿಸಲು ಸಹಾಯ ಮಾಡಬಹುದು. ವಿವೇಕವೂ ವಿಚಾರವೂ ದೋಷಪೂರಿತವಾಗದಂತೆ ನೆರವಾಗಬಹುದು. ಹೀಗೆ ಇವು ಪರಸ್ಪರ ಪೋಷಕವಾದ ಅಂಶಗಳು.

ಆದರೆ ವಿಚಾರವು ಪ್ರಖರವಾಗಿದ್ದವರಿಗೆಲ್ಲ ವಿವೇಕವಿರುತ್ತದೆ ಎಂದು ಹೇಳಲು ಬರುವುದಿಲ್ಲ. ಯಾವುದೋ ಒಂದು ತರ್ಕದ ಸರಣಿ ಅಥವಾ ಸಿದ್ಧಾಂತಕ್ಕೆ ಕಟ್ಟು ಬಿದ್ದವರು ಅದೇ ದಿಕ್ಕಿನಲ್ಲಿ ವಿಚಾರ ಮಾಡುತ್ತ ಹೋಗಿ ಏಕಮುಖಿಗಳಾಗುವ ಸಂಭವವಿರುತ್ತದೆ. ತಮ್ಮ ವಿಚಾರವೇ ಸರಿ ಎಂಬ ಮೊಂಡುತನವನ್ನು ಬೆಳೆಸಿಕೊಳ್ಳುವ ಸಂಭವವಿರುತ್ತದೆ. ತಮ್ಮ ತರ್ಕದ ಸುಳಿಯಲ್ಲಿಯೇ ತಾವು ಸಿಕ್ಕಿ ಬೀಳುವ ಸಂಭವವಿರುತ್ತದೆ. ಆದರೆ ವಿವೇಕವು ಹಾಗಲ್ಲ. ಎಲ್ಲವನ್ನೂ ಹಿತ ಅಹಿತ ಪರಿಣಾಮಗಳಿಂದ ಅಳೆದು ನೋಡುತ್ತದೆ. ವಿಚಾರದ ಸಹಾಯವನ್ನು ತೆಗೆದುಕೊಂಡರೂ ಅದಕ್ಕೆ ಪರಾಧೀನವಾಗುವುದಿಲ್ಲ. ಆಯಾ ವಿಷಯ ಮತ್ತು ವಸ್ತುಗಳ ಗ್ರಾಹ್ಯ ಅಗ್ರಾಹ್ಯತೆಯ ಮೌಲ್ಯಮಾಪನ ಮಾಡಲು ವಿಚಾರವನ್ನು ಉಪಯೋಗಿಸಿಕೊಳ್ಳುತ್ತದೆ.

ವಿವೇಕಿಯಾದವನು ಬಹಳ ವಿಚಾರ ಮಾಡುವವನಾಗಿರಬೇಕೆಂಬ ಅಗತ್ಯವಿಲ್ಲ. ವಿವೇಕಕ್ಕೆ ಆತ್ಮಸಾಕ್ಷಿ ಅಂತಃಪ್ರೇರಣೆಗಳು ಹೆಚ್ಚು ಸಹಾಯಕ. ವಿಚಾರ ಕೇವಲ ಬಾಹ್ಯ ಸಾಧನ. ಒಮ್ಮೊಮ್ಮೆ ಅತಿ ವಿಚಾರವು ವಿವೇಕಕ್ಕೆ ಆತಂಕವೂ ಆಗುತ್ತದೆ.

ವಿವೇಕಿಯಾದವನು ಸ್ವಹಿತ ಪರಹಿತಗಳನ್ನು ಹೆಚ್ಚು ಯಶಸ್ವಿಯಾಗಿ ಸಾಧಿಸುವನು. ಅವನಿಗೆ ಯಾವುದೇ ವಿಷಯದಲ್ಲಿ ಮೊಂಡತನವಿರುವುದಿಲ್ಲ. ನಮ್ರತೆಯಿರುವುದು. ತನ್ನ ತಿಳುವಳಿಕೆಗಿಂತ ಹೆಚ್ಚು ಯೋಗ್ಯವಾದದ್ದನ್ನು ಯಾರಾದರೂ ಹೇಳಿದರೂ ಅದನ್ನು ಒಪ್ಪಿಕೊಳ್ಳುವನು. ವಿಚಾರವಂತನೂ ತನಗಿಂತ ಹೆಚ್ಚು ವಿಚಾರಶೀಲರು ಹೇಳಿದ್ದನ್ನು ಒಪ್ಪಿಕೊಂಡಾಗಲೂ ಅದು ಅವನಲ್ಲಿಯ ವಿವೇಕದ ಕಾರ್ಯವೇ ಆಗಿರುತ್ತದೆ.

ಚುರುಕು ಬುದ್ಧಿಯವರಿಗಿಂತ-ಸಾಮಾನ್ಯ ಬುದ್ಧಿಯವರು ಹೆಚ್ಚು ವಿವೇಕಿಗಳಾಗಿರುವರು. ಇದು ಏನೇ ಇದ್ದರೂ ಮನುಷ್ಯನಿಗೆ ವಿವೇಕ ವಿಚಾರ ಎರಡೂ ಅಗತ್ಯ. ವಿವೇಕವು ಅನುಭವದಿಂದ ವಿಕಸಿತವಾಗುತ್ತ ಹೋಗುವುದು. ವಿಚಾರವು ತರ್ಕದಿಂದ ಬೆಳೆಯುತ್ತ ಹೋಗುವುದು.



## ಯಡ್ಡಿಶ್ ಕಥೆ:

ನಾನೀಗ ನಿಮಗೆ ಹೇಳುತ್ತಿರುವ ಸಣ್ಣ ಮನುಷ್ಯರ ಪೇಟೆ ಯಾವುದೆಂದು ತಿಳಿದಿದ್ದೀರಿ, ಓದುಗರೇ? ಪೀಪಾಯಿಯೊಳಗೆ ಸೀಗಡಿ ಮೀನುಗಳನ್ನು ಒತ್ತಾಗಿ ತುಂಬಿರುವಂತೆ, ದೈವಕೃಪೆಗೊಳಗಾದ ಪ್ರದೇಶದ ಮಧ್ಯದಲ್ಲಿ ಬರಿಯ ಜ್ಯೂಗಳೇ ತುಂಬಿಕೊಂಡಿರುವ ಪೇಟೆಯ ಬಗೆಗೆ ಸ್ವಲ್ಪ ವಿಸ್ತರಿಸಿ ಹೇಳುತ್ತಿದ್ದೇನೆ. ಈ ಪೇಟೆಯ ಹೆಸರು ಕಸ್ರಿಲೆವ್ಕ. ಈ ಹೆಸರು ಹೇಗೆ ಹುಟ್ಟಿಕೊಂಡಿತು ಗೊತ್ತೆ? ಹೇಳುತ್ತೇನೆ ಕೇಳಿ:

ಜ್ಯೂಗಳ ದಾರಿದ್ರ್ಯ ವೈವಿಧ್ಯದೊಡನೆ ಬಹುಮುಖಿಯಾದದ್ದು. ಒಬ್ಬ ಬಡವ ದುರದೃಷ್ಟದವನಾಗಿರುತ್ತಾನೆ. ಅವನೊಬ್ಬ ಪಾಪರ್, ಭಿಕ್ಷುಕ, ಸ್ಕ್ಯ್ರೀರರ್, ಬರಗೆಟ್ಟವ, ತಿರುಕ ಅಥವಾ ಸೋತು ಸುಣ್ಣಾದವ. ಪ್ರತಿಯೊಬ್ಬನ ಬಗೆಗೂ ಹೀಗೆ ಬೇರೆ ಬೇರೆ ದನಿಗಳಲ್ಲಿ ಹೇಳಲಾಗುತ್ತದೆ. ಆದರೆ ಈ ಎಲ್ಲವೂ ಮಾನವನ ದರಿದ್ರತೆಯನ್ನೇ ಒತ್ತಿ ಹೇಳುತ್ತವೆ. ಹೀಗಿದ್ದೂ ಮತ್ತೊಂದು ಹೆಸರಿದೆ - ಕಸ್ರಿಲ್ ಅಥವಾ ಕಸ್ರಿಲಿಕ್. ಈ ಹೆಸರನ್ನೂ ನಾಕಷ್ಟು ಏರಿಳಿತಗಳ ದನಿಯಲ್ಲಿ ಹೇಳಲಾಗು



# ಸಣ್ಣ ಮನುಷ್ಯರ ಪೇಟೆ

ತ್ತದೆ. ಬಡಾಯಿ ಕೊಚ್ಚಿಕೊಳ್ಳುವವನ ಬೀಗನಲ್ಲಿ ಕೂಡ. ಉದಾಹರಣೆಗೆ, ''ಓಹ್! ನಾನು ಯಾವಾಗಲೂ ಕಸ್ರಿಲಿಕ್!'' ಒಬ್ಬ ಕಸ್ರಿಲಿಕ್ ಸಾಧಾರಣ ಪಾಪರ್‌ನಂತಲ್ಲ. ಬದುಕಿನಲ್ಲಿ ಸೋತವನಾದರೂ ದಾರಿದ್ರ್ಯದ ಹೀನತೆಯನ್ನು ಹತ್ತಿರಕ್ಕೆ ಸುಳಿಯಗೊಡದಂಥ ವೈರುಧ್ಯವುಳ್ಳವನು. ಇದಕ್ಕವನು ನಕ್ಕು ಬಿಡುತ್ತಾನೆ. ಅವನೊಬ್ಬ ಬಡವ, ಆದರೂ ಸಂತೋಷಿಯಾಗಿರುತ್ತಾನೆ.

---

ಮೂಲ : ಶೋಲೋಮ್ ಅಲೈಂ

ಕನ್ನಡಕ್ಕೆ : ಲಿಂಗರಾಜು

---

ಸದ್ದು, ಗದ್ದಲ, ಗೊಂದಲ, ಅವಸರ, ಮಹಾನಗರಗಳಿಂದ ದೂರವಾಗಿ ಜಗತ್ತಿನ ಮೂಲೆಯೊಂದರಲ್ಲಿ, ತನ್ನನ್ನು ಸುತ್ತುವರಿದಿರುವ ದೇಶದೊಳಗೆ ಅಡಗಿರುವ ದಾರಿದ್ರ್ಯದ ಈ ಪೇಟೆ ಕನಸುಗಾಣುತ್ತಿದೆ, ತನ್ನ ಸಮ್ಮೋಹದಲ್ಲೇ ತನ್ನ ಮುಳುಗಿದ. ದೊಡ್ಡ ಮಾತುಗಳನ್ನಾಡುತ್ತಾ, ಮನುಷ್ಯರು



ಸೃಷ್ಟಿಸಿಕೊಂಡಿರುವ ನಾಗರಿಕತೆ, ಸಂಸ್ಕೃತಿ, ಅಭಿವೃದ್ಧಿಗಳಿಂದಲೂ ದೂರವಾಗಿದೆ. ಇಂಥ ವಿಷಯಗಳಿಗೆ ಸಂಭಾವಿತ ವ್ಯಕ್ತಿಯೊಬ್ಬ ಹ್ಯಾಟ್ ತೆಗೆದು ಗೌರವ ತೋರಬಹುದು. ಆದರೆ ಈ ಸಣ್ಣ ಮನುಷ್ಯರಲ್ಲ! ಮೋಟಾರ್ ಕಾರು, ಏರೋಪ್ಲೇನ್‌ಗಳಿರಲಿ, ಈಗಾಗಲೇ ತುಂಬಾ ಹಳೆಯದಾಗಿ ಸಾಮಾನ್ಯವೆನಿಸಿರುವ ರೈಲಿನ ಬಗೆಗೂ ಇವರಿಗೆ ಏನೂ ತಿಳಿದಿಲ್ಲ. ''ಅಂಥದ್ದು ಇಲ್ಲವೇ ಇಲ್ಲ'' ಎನ್ನುತ್ತಾರವರು! ''ಯಾಕೆಂದರೆ'' ಅವರು ಹೇಳುವಂತೆ, ''ಇದೊಂದು ಕನಸು. ಕಲ್ಪಿತ. ಸ್ವರ್ಗದಲ್ಲಿ ಸಂತೋಷವಿರುತ್ತೆ ಎನ್ನುತ್ತೀರಲ್ಲ ನೀವು, ಅದರ ಹಾಗೆ.''

ಆದರೆ ಒಂದು ಸಲ ಕಸ್ರಿಲೆವ್ಕದ ಒಬ್ಬಾತ ಮಾಸ್ಕೋಗೆ ಹೋಗಿ ಬಂದ. ವಾಪಸ್ಸು ಬಂದ ಅವನು ಇದು ಸತ್ಯ ಎಂದು ಆಣೆ, ಪ್ರಮಾಣಗಳ ಮೇಲೆ ಹೇಳಿದ. ತನ್ನ ಭುಜವನ್ನು ರೈಲಿನಲ್ಲಿ ಒರಗಿಸಿಕೊಂಡ ಹಾಗೆ ಒಂದು ಗಂಟೆಯಷ್ಟು ಕಾಲವಾದರೂ ರೈಲಿನಲ್ಲೇ ಪ್ರಯಾಣ ಮಾಡಿದ್ದ. ಇದನ್ನು ಈ ಸಣ್ಣ ಮನುಷ್ಯರು ಅರ್ಥ ಮಾಡಿಕೊಂಡದ್ದು ಹೇಗೆಂದರೆ: ಒಂದು ಗಂಟೆಯಷ್ಟು ಕಾಲ ಪ್ರಯಾಣ ಮಾಡಿದ ಇವನು, ಆಮೇಲೆ ಉಳಿದ ದಾರಿಯನ್ನು ನಡೆದೇ ಹೋದ ಎಂದು. ಆದರೂ ರೈಲಿನ ವಿಷಯ ಬಾಕಿಯುಳಿದಿತ್ತು. ಕಸ್ರಿಲೆವ್ಕದ ಜ್ಞಾನಿಯೊಬ್ಬ ಆಣೆಯಿಟ್ಟು ಹೇಳಿದರೂ ರೈಲಿನಂಥದ್ದು ಇಲ್ಲವೇ ಇಲ್ಲ, ಇದೆಲ್ಲಾ ಸುಳ್ಳು ಎಂದುಬಿಟ್ಟರು. ಇದು ಸತ್ಯ. ಗಾಳಿ ಮಾತಿನಲ್ಲಿ ಹೊಸದೊಂದನ್ನು ಸೃಷ್ಟಿಸಿ ಹೇಳುತ್ತಿಲ್ಲ ಎಂದ ಇವನು ರೈಲಿನ ಇಂದ್ರಜಾಲವನ್ನೆಲ್ಲಾ ಅವರಿಗೆ ವಿವರಿಸಿ ಹೇಳಿದ. ಕಾಗದದ ಮೇಲೆ ಚಿತ್ರವೊಂದನ್ನು ಬಿಡಿಸಿದ. ಚಕ್ರಗಳು ಹೀಗುರುಳುತ್ತವೆ, ಹೊಗೆ ಕೊಳವೆ ಸಿಳ್ಳೆ ಹಾಕುತ್ತದೆ, ಬೋಗಿಗಳು ಚಲಿಸುತ್ತವೆ, ಜನ ಮಾಸ್ಕೋಗೆ ಪ್ರಯಾಣ ಮಾಡುತ್ತಾರೆ; ಕಸ್ರಿಲೆವ್ಕದ ಜನ ಕೇಳಿಯೇ ಕೇಳಿದರು. ತಲೆದೂಗುತ್ತಾ ಸಮ್ಮತಿಯನ್ನೂ ಸೂಚಿಸಿದರು. ಹೃದಯದಾಳದಲ್ಲಿ ಮಾತ್ರ ಇದಕ್ಕವರು ನಕ್ಕುಬಿಟ್ಟರು. ''ಎಂಥಾ ಕತೆ! ಚಕ್ರಗಳು ಉರುಳ್ತವೆ, ಹೊಗೆ ಕೊಳವೆ ಸಿಳ್ಳೆ ಹಾಕುತ್ತೆ, ಬೋಗಿಗಳು ಮುಂದಕ್ಕೆ ಹೋಗ್ತವೆ, ಜನ ಮಾಸ್ಕೋಗೆ ಹೋಗ್ತಾರೆ, ಆಮೇಲೆ ವಾಪಸ್ಸು ಬರ್ತಾರೆ!''

ಆದ್ದರಿಂದಲೇ ಇವರೆಲ್ಲಾ ಸಣ್ಣ ಮನುಷ್ಯರು. ಮೂರ್ಖರಲ್ಲದ ಯಾರೂ ಇಲ್ಲ. ವಿಷಯಗಳಿಗೆ ತಲೆಕೆಡಿಸಿಕೊಳ್ಳದ ಮನುಷ್ಯರೇ ಎಲ್ಲರೂ. ಆದರೆ ವಿರೋಧಾಭಾಸವೆಂಬಂತೆ ಎಲ್ಲಾ ಕಡೆಯೂ ಹಾಸ್ಯಗಾರರು, ಕತೆ ಹೇಳುವವರು, ಸಂತೋಷಿಗಳು, ಸಾಮಾನ್ಯ ಹೃದಯದವರನ್ನು ಆರೈಕೆ ಮಾಡುವವರೂ ಇದ್ದಾರೆಂಬುದನ್ನು ತಿಳಿದಿದ್ದಾರೆ. ಬಡವರಾದರೂ ಸಂತೋಷಿಗಳು. ಯಾವುದು ಇವರನ್ನು ಇಷ್ಟೊಂದು ಸಂತೋಷದಲ್ಲಿಟ್ಟಿದೆಯೋ ಹೇಳುವುದು ಸುಲಭವಲ್ಲ. ಏನಿಲ್ಲ, ಬರಿಯ ಉಲ್ಲಾಸದ ಬದುಕು ಬದುಕುವುದು? ನೀವು ಅವರನ್ನೇ ಕೇಳಿ, ''ನೀವು ಹೇಗೆ ಬದುಕ್ತಿದೀರಿ?'' ಭುಜ ಕುಲುಕಿಸುತ್ತಾ ನಕ್ಕು ಹೇಳುತ್ತಾರೆ, ''ನಾವು ಹೇಗೆ ಬದುಕ್ತಿದೀವಿ?

## ಲೇಖಕರ ಪರಿಚಯ

ಜಗತ್ತಿನ ಶ್ರೇಷ್ಠ ಸಾಹಿತಿಗಳಾದ ಡಿಕನ್ಸ್, ಗೊಗೋಲ್, ಚೆಕಾಫ್, ಮೊದಲಾದವರ ಸಾಲಿಗೆ ಸೇರುವ ಯಿಡ್ಡಿಶ್ ಲೇಖಕ ಶೋಲೋಮ್ ಅಲ್ಕೈಂ. ಆಧುನಿಕ ಯಿಡ್ಡಿಶ್ ಸಾಹಿತ್ಯವನ್ನು ಸಮೃದ್ಧಗೊಳಿಸಿದ ಇವನು 1859ರ ಮಾರ್ಚ್ 2ರಂದು ಉಕ್ರೈನ್‌ನ ಪೆರೆಯ್‌ಸ್ಲಾವ್‌ನಲ್ಲಿ ಬಡ ಅಂಗಡಿಯವನೊಬ್ಬನ ಮಗನಾಗಿ ಹುಟ್ಟಿದ. ತಮ್ಮ ಜನರಲ್ಲಿ ಪರಸ್ಪರರನ್ನು ಅಭಿವಂದಿಸುವ 'ಶೋಲೋಮ್ ಅಲ್ಕೈಂ' ಎಂಬ ಅಂಕಿತದಲ್ಲಿ ಸಾಹಿತ್ಯ ಸೃಷ್ಟಿಗೆ ತೊಡಗಿದ ಸಾಲೊಮನ್ ರಬಿನೋವಿಚ್‌ನನ್ನು ಆರಂಭದಲ್ಲೇ ಟಾಲ್‌ಸ್ಟಾಯ್, ಚೆಕಾಫ್, ಗಾರ್ಕಿ ಮೊದಲಾಗಿ ಎಲ್ಲರೂ ಪ್ರಶಂಸಿಸಿದರು. ಜ್ಯೂ ಜನಾಂಗ ಇತಿಹಾಸದುದ್ದಕ್ಕೂ ಬದುಕುತ್ತಾ ಬಂದ ನೆಲೆಯಿಲ್ಲದ ಅಲೆಮಾರಿ ಬದುಕನ್ನೇ ಬದುಕಿದ ಈತ ತನ್ನ ಸಾಹಿತ್ಯದಲ್ಲೂ ಇದನ್ನು ದಟ್ಟವಾಗಿಸಿದ. ಆಧುನಿಕ ಕಥಾ ಪ್ರಕಾರಕ್ಕೆ ಸ್ಪಷ್ಟ ಚೌಕಟ್ಟೊಂದು ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿ ಈ ಪ್ರಕಾರದೊಳಗೆ ನಿರೂಪಣೆಯ ಕಲೆಗಾರಿಕೆಯನ್ನು ತುಂಬಿದವನು ಈತನೇ. ಮಾರ್ಕ್ಸಿಸ್ಟ್ ಆಗಿದ್ದ ಈತ ತನ್ನ ಸಾಹಿತ್ಯಕ್ಕೆ 'ಕಸ್ರಿಲೆವ್ಕ' ಎಂಬ ಕಾಲ್ಪನಿಕ ಪೇಟೆಯೊಂದನ್ನು ಕೇಂದ್ರವಾಗಿಸಿಕೊಂಡಿದ್ದ. ಮಾನವತಾವಾದಿಯೂ ಆಗಿದ್ದ ಈತನನ್ನು ಜ್ಯೂ ಜನರು 'ಯಿಡ್ಡಿಶ್ ಭಾಷೆಯ ಮಾರ್ಕ್‌ಟ್ವೇನ್' ಎಂದು ಕರೆದರೆ; ಮಾರ್ಕ್‌ಟ್ವೇನ್ ತನ್ನನ್ನು 'ಇಂಗ್ಲಿಷ್ ಭಾಷೆಯ ಶೋಲೋಮ್ ಅಲ್ಕೈಂ' ಎಂದು ಕರೆದುಕೊಂಡ. ಬದುಕಿನುದ್ದಕ್ಕೂ ಬವಣೆಪಟ್ಟ ಈತ 1916ರಲ್ಲಿ ನ್ಯೂಯಾರ್ಕ್‌ನಲ್ಲಿ ಸಾಯುವ ಮುನ್ನ, ತನ್ನ ಸಮಾಧಿಯನ್ನು ಶ್ರೀಮಂತರು, ಪ್ರಸಿದ್ಧ ವ್ಯಕ್ತಿಗಳ ಸಮಾಧಿಗಳ ನಡುವೆ ಮಾಡದೆ, ಸಾಮಾನ್ಯ ಜನರ ಕೂಲಿಕಾರರ ಸಮಾಧಿಗಳ ನಡುವೆ ಮಾಡಬೇಕು ಎಂದು ಹೇಳಿದ. ಆತನ ಕತೆಗಳಲ್ಲಿ ಪ್ರಾತಿನಿಧಿಕವಾದುದು: "ಸಣ್ಣ ಮನುಷ್ಯರ ಪೇಟೆ"

ಯಾರಿಗೆ ಗೊತ್ತು? ನಾವು ಬದುಕಿದೀವಿ?'' ಅಸಾಮಾನ್ಯವೆನಿಸುವ ವಿಷಯ ನೀವು ಯಾವಾಗಲಾದರೂ ಇವರನ್ನು ಭೇಟಿಯಾದರೆ, ಇಲಿಗಳು ಅಲ್ಲಿ ಅದಿದೆ, ಇಲ್ಲಿ ಇದಿದೆ ಎಂದು ಗೆಬರುವಂತೆ ಕೇಳತೊಡಗುತ್ತಾರೆ. ಸುಮ್ಮನೆ ನಿಂತುಕೊಳ್ಳಲಾಗುವುದಿಲ್ಲ. ''ಏನು ಇಷ್ಟೊಂದು ಅವಸರ ಪಡ್ತೀದಿರಿ?'' ''ನಾನ್ಯಾಕೆ ಅವಸರ ಪಡಲಿ? ಆಯ್ತು, ಇದಿರೋದು ಹೀಗೆ, ನಾವು ಅವಸರದಲ್ಲಿದ್ದರೆ ನಾವು ಯೋಚಿಸ್ತಾ ಏನನ್ನಾದರೂ ಪಡಿಯೋಕೆ ಓಡೋಣ, ಒಂದಿಷ್ಟು ಪೆನ್ನಿಗಳನ್ನಾದರೂ ಪಡೆಯೋಣ ಸಬ್ಬತ್‌ಗೆ ತೆಗೆದಿಟ್ಟುಕೊಳ್ಳೋಣ.''

ಸಬ್ಬತ್‌ಗೆಂದು ತೆಗೆದಿರಿಸಿಕೊಳ್ಳುವುದು - ಇದೇ ಇವರ ಜೀವನದಲ್ಲಿನ ಗುರಿ. ಇಡೀ ವಾರ ಇವರು ಕೂಲಿಕಾರರು, ಬೆವರಿಡುತ್ತಾರೆ, ತೊಡುವ ಬಟ್ಟೆ ತೆಗೆದಿಡುತ್ತಾರೆ, ಸಬ್ಬತ್‌ಗಾಗಿ ಸ್ವಲ್ಪವಾದರೂ ಇರಲಿ ಎಂದು ತಿನ್ನದಂತೆ, ಕುಡಿಯದಂತೆ ಬದುಕುತ್ತಾರೆ. ಆಮೇಲೆ, ಪವಿತ್ರವಾದ ಸಬ್ಬತ್ ಯಾವಾಗ ಬರುತ್ತದೋ ಆಗ, ಯೆಹುಪೆಟ್ಜದರೂ ಹಾಳಾಗಲಿ, ಒಡೆಸ್ಸಾವಾದರೂ ಹಾಳು ಬೀಳಲಿ; ಭೂಮಿಯಲ್ಲಿನ ಪ್ಯಾರಿಸ್ ಕೂಡ ಕುಗ್ಗಿ ಚಿಕ್ಕದಾಗಿರುತ್ತದೆ! ಕಸ್ರಿಲೆವ್ಕ ಬದುಕುತ್ತದೆ! ಆದ್ದರಿಂದಲೇ ಕಸ್ರಿಲೆವ್ಕ ಕಾಲಾನುಕಾಲದಿಂದಲೂ ನಿಂತಿದೆ. ಸಬ್ಬತ್ ದಿನ ಒಬ್ಬ ಜ್ಯೂ ಕೂಡ ಇಲ್ಲಿ ಹಸಿವಿನಿಂದಿರುವುದಿಲ್ಲ. ಒಬ್ಬ ಜ್ಯೂನಲ್ಲಿ ಸಬ್ಬತ್‌ಗಾಗಿ ಮೀನಿರುವುದಿಲ್ಲವೇ? ಮೀನಿಲ್ಲದಿದ್ದರೆ ಮಾಂಸವಿರುತ್ತದೆ. ಮಾಂಸವಿಲ್ಲದಿದ್ದರೆ ಹೈರಿಂಗ್ ಮೀನಿರುತ್ತದೆ. ಹೈರಿಂಗ್ ಮೀನಿಲ್ಲದಿದ್ದರೆ ಬಿಳಿ ಬ್ರೆಡ್ಡಿರುತ್ತದೆ. ಬಿಳಿ ಬ್ರೆಡ್ಡಿಲ್ಲದಿದ್ದರೆ ಕರಿ ಬ್ರೆಡ್ ಮತ್ತು ಈರುಳ್ಳಿಗಳಿರುತ್ತವೆ. ಕರಿ ಬ್ರೆಡ್ ಮತ್ತು ಈರುಳ್ಳಿಗಳೂ ಇಲ್ಲದಿದ್ದರೆ ನೆರೆಯವರಿಂದ ಕಡ ಕೇಳಿ ಪಡೆಯುತ್ತಾನೆ. ''ಜಗತ್ತೊಂದು ಚಕ್ರ. ಅದು ತಿರಗ್ತಾ ಇದೆ'' ಕಸ್ರಿಲೆವ್ನ

ದವರು ಈ ಮಾತನ್ನು ಸಾಕಷ್ಟು ಸಲ ಹೇಳುತ್ತಾರೆ. ಇದು ಹೇಗೆ ತಿರುಗುತ್ತಿದೆ ಎನ್ನುವುದನ್ನು ಕೈಯಿಂದಲೂ ತೋರಿಸುತ್ತಾರೆ. ಇವರು ಎಲ್ಲವನ್ನೂ ಚಮತ್ಕಾರದಲ್ಲೇ ಗುರುತಿಸುತ್ತಾರೆ. ಕೆಲವು ವಿಷಯಗಳನ್ನು ಮಾತ್ರ ತಮ್ಮ ತಂದೆ-ತಾಯಿಯರಿಂದ ತುಂಬ ಚುರುಕಿನಲ್ಲಿ ಕಲಿತಿರುತ್ತಾರೆ. ಈ ಸಣ್ಣ ಮನುಷ್ಯರ ಬಗ್ಗೆ ನೀವು ಕೇಳುವ ಕತೆಗಳು ಅದ್ಭುತವಾದವಾದರೂ ಅವೆಲ್ಲಾ ನಿಜವಾಗಿರುತ್ತವೆ.

ಬೇಕೆಂದರೆ ಕಸ್ರಿಲೆವ್ನದಲ್ಲಿ ಹಸಿವಿನಿಂದ ಬಳಲುತ್ತಿದ್ದ ಒಬ್ಬಾತ ತನ್ನ ಭವಿಷ್ಯವನ್ನು ಅರಸುತ್ತಾ ವಿಶಾಲ ಜಗತ್ತಿನತ್ತ ಹೊರಟ ಈ ಕತೆಯನ್ನೇ ನೋಡಿ: ದೇಶವನ್ನು ತೊರೆದ ಇವನು ಅಲೆಯುತ್ತಾ ದೂರಕ್ಕೆ ಹೋದ. ಕಡೆಗೆ ಪ್ಯಾರಿಸ್ಸನ್ನು ತಲುಪಿದ. ಅಲ್ಲಿ ಇವನು ಸ್ವಾಭಾವಿಕವಾಗಿಯೇ ಮೇಯರ್‌ರನ್ನು ನೋಡಬೇಕು ಎಂದುಕೊಂಡ. ಒಬ್ಬ ಜ್ಯೂ ಪ್ಯಾರಿಸ್ಸಿಗೆ ಬಂದು ಮೇಯರ್‌ರನ್ನು ಭೇಟಿಯಾಗಲಿಲ್ಲ ಅಂದರೆ? ಆದರೆ, ಅವರು ಇವನನ್ನು ಒಳಗೆ ಬಿಡಲಿಲ್ಲ. ''ಏನು ತೊಂದರೆ?'' ಏನೆಂದು ಅವನಿಗೂ ತಿಳಿದಿತ್ತು. ''ನಿನ್ನ ಕೋಟು ತೇಪೆ ಹಾಕಿದೆ'' ಬಾಗಿಲು ಕಾಯುವವ ಹೇಳಿದ.

''ನೀನೊಬ್ಬ ಮೂರ್ಖ'' ಜ್ಯೂ ಹೇಳಿದ. ''ನನ್ನ ಹತ್ತಿರ ಒಳ್ಳೆ ಕೋಟು ಇದ್ದಿದ್ದರೆ ನಾನು ಪ್ಯಾರಿಸ್‌ಗೆ ಬರ್‍ತಿದ್ದೆ ಅಂದುಕೊಂಡಿದೀಯಾ?''

ಇದು ಪೇಚಿಗಿಟ್ಟುಕೊಂಡಿತು. ಆದರೆ ಕಸ್ರಿಲೆವ್ನದವನನ್ನು ಮೇಲೆ ಬಿಡಲಿಲ್ಲ. ಒಂದು ಕ್ಷಣ ಯೋಚಿಸಿದ ಇವನು ಬಾಗಿಲಲ್ಲಿದ್ದವನಿಗೆ ಹೇಳಿದ: ''ನಿಮ್ಮ ಸಾಹೇಬರಿಗೆ ಹೇಳು, ಮನೆ ಬಾಗಿಲಿಗೆ ಬಂದಿರೋನು ಸಾಮಾನ್ಯ ಭಿಕ್ಷುಕನಲ್ಲ. ಒಬ್ಬ ಜ್ಯೂ ಬಂದಿದಾನೆ; ಪ್ಯಾರಿಸ್‌ನಲ್ಲಿ ಎಷ್ಟು ಬೆಲೆ ಕೊಟ್ಟರೂ ಸಿಕ್ಕದಂಗಿರೋ ವಸ್ತುಗಳನ್ನು ಕೊಡೋಕೆ ತಂದಿದಾನೆ ಅನ್ನು''

ಈ ಮಾತುಗಳನ್ನು ಕೇಳಿ ಮೇಯರ್‌ಗೆ ಕುತೂಹಲವಾಯಿತು. ವ್ಯಾಪಾರಿಯನ್ನು ಒಳಗೆ ಬಿಡಲು ಹೇಳಿದ.

''ಶೋಲೋಮ್ ಅಲೈಂ'' ಮೇಯರ್ ಹೇಳಿದ.

''ಅಲೈಂ ಶೋಲೋಮ್'' ವ್ಯಾಪಾರಿ ಹೇಳಿದ.

''ಕೂತುಕೊಳ್ಳಿ. ಎಲ್ಲಿಂದ ಬಂದಿರಿ?''

''ನಾನು, ಕಸ್ರಿಲೆವ್ನದಿಂದ ಬಂದೆ.''

''ಏನೇನು ಒಳ್ಳೆ ಸುದ್ದಿ ತಂದಿದೀರ?''

''ಆಯ್ತು ಮಿ. ಮೇಯರ್, ನಮ್ಮ ಪೇಟೇಲಿ ಜನ ನೀವು ತೀರಾ ಕೆಟ್ಟವರಲ್ಲ ಅಂತ ಹೇಳ್ತಾರೆ. ನೀವು ಪಡೆದುಕೊಂಡಿರೋದರ ಅರ್ಧದಷ್ಟನ್ನ ಇಲ್ಲ, ಕಾಲುಭಾಗದಷ್ಟನ್ನಾದರೂ ನಾನು ಗಳಿಸಿಕೊಂಡಿದ್ದರೆ ಉಳಿದದ್ದನ್ನೆಲ್ಲಾ ಹಂಗೇ ಬಿಟ್ಟುಬಿಡುತಿದ್ದೆ. ಆಮೇಲೆ ನಿಮಗೆ ಯಾವುದೂ ಕೊರತೆಯಾಗಿಲ್ಲ ಅಂತಲೂ ಊಹಿಸಿಕೊಳ್ತಿದ್ದೆ. ಜನಗಳೂ ನಿಮ್ಮನ್ನು ತುಂಬಾ ಶ್ರೀಮಂತರು ಅನ್ನೋ ಹಾಗೇ ನೋಡೋರು. ಆಮೇಲೆ ನಿಮಗೆ ಏನು ಕೊರತೆ? ಒಂದೇ ಒಂದು ವಿಷಯ - ಶಾಶ್ವತವಾದ ಬದುಕು. ನಾನು ನಿಮಗೆ ಮಾರಾಟಕ್ಕೆ ತಂದಿರೋದು ಇದೇ.''

ಇದನ್ನು ಕೇಳಿ ಮೇಯರ್ ಹೇಳಿದ. ''ಆಯಿತು. ಈಗ ವ್ಯಾಪಾರಕ್ಕೆ ಬರೋಣ. ನನಗೆ ಇದರ ಬೆಲೆ ಎಷ್ಟು?''

''ನಿಮಗೆ ಇದರ ಬೆಲೆ'' ಖಾತ್ರಿ ಮಾಡಿಕೊಳ್ಳಲೆಂದು ಒಂದು ಕ್ಷಣ ನಿಲ್ಲಿಸಿದ ''ನಿಮಗಿದರ ಬೆಲೆ ಮುನ್ನೂರು ರೂಬಲ್‌ಗಳು''

''ನೀವು ಹೇಳೋ ಸರಿಯಾದ ಬೆಲೆ ಇದೇನಾ?''

''ನಾನು ಹೇಳೋದರಲ್ಲೇ ಉತ್ತಮವಾದದ್ದು ಇದೇ. ಮುನ್ನೂರಕ್ಕಿಂತಲೂ ಜಾಸ್ತಿ ಹೇಳಬಹುದಿತ್ತು. ಆದರೆ ಇಷ್ಟನ್ನ ಹೇಳಿಬಿಟ್ಟಿದೀನಿ. ಇದೇ ಕೊನೆ.''

ಮೇಯರ್ ಹೆಚ್ಚೇನನ್ನೂ ಹೇಳಲಿಲ್ಲ. ಆದರೆ ಒಂದರ ಹಿಂದೊಂದಾಗಿ ಮುನ್ನೂರು ರೂಬಲ್‌ಗಳನ್ನು ಎಣಿಸಿದ.

ಹಣವನ್ನು ಜೇಬಿಗಿಟ್ಟುಕೊಂಡ ನಮ್ಮ ಕಸ್ರಿಲೆವ್ನದವನು ಆಮೇಲೆ ಮೇಯರ್‌ಗೆ ಹೇಳಿದ.

''ನೀವು ಹೆಚ್ಚು ಕಾಲ ಬದುಕಿರಬೇಕು ಅಂದು ಕೊಂಡಿದ್ದರೆ, ನಾನು ನಿಮಗೆ ಕೊಡೊ ಸಲಹೆ ಏನು ಅಂದರೆ; ಸದ್ದು, ಆತುರ ತುಂಬಿಕೊಂ ಡಿರೋ ಈ ಪ್ಯಾರಿಸ್ ಬಿಟ್ಟು ಬಿಡಿ ಸಾಹುಕಾರರೇ, ನಮ್ಮ ಕಸ್ರಿಲೆವ್ನಕ್ಕೆ ಹೋಗಿ, ಅಲ್ಲಿ ನೀವು ಯಾವಾ ಗಲೂ ಸಾಯೋದಿಲ್ಲ. ಯಾಕೆ ಅಂದರೆ ನಮ್ಮ ಕಸ್ರಿಲೆವ್ನ ಅಂಥ ಪೇಟೆ. ಅಲ್ಲಿ ಶ್ರೀಮಂತರು ಯಾವಾಗಲೂ ಸಾಯೋದೇ ಇಲ್ಲ.''

ಇದೇ ತರ ಅಮೆರಿಕಾಗೆ ಹೋದ ಮನುಷ್ಯ ನೊಬ್ಬನ ಕತೆಯೊಂದೂ ಇದೆ ... ಆದರೆ ಸಣ್ಣ ಮನುಷ್ಯರ ಎಲ್ಲ ಕತೆಗಳನ್ನೂ ನಿಮಗೆ ಹೇಳುತ್ತಾ ಕುಳಿತರೆ ಮೂರು ದಿನ ಹಗಲೂ ರಾತ್ರಿ ಮಾತು, ಮಾತು ಎಂದು ನಾನು ಮಾತಾಡುತ್ತಲೇ ಇರಬೇ ಕಾಗುತ್ತದೆ. ಮಾತು ಮುಗಿಯುವುದೇ ಇಲ್ಲ. ಇದರ ಬದಲಿಗೆ ಪೇಟೆಯ ವಿವರದತ್ತ ಹೊರಳಿ ನೋಡೋಣ.

ಇದನ್ನು ಸುಂದರವಾಗಿರುವ ಒಂದು ಸಣ್ಣ ಪೇಟೆ ಎಂದು ಕರೆಯಲೇ? ಸ್ವಲ್ಪ ದೂರದಿಂದ ನೋಡಿದಾಗ ನಾನು ಹ್ಯಾಗೆ ಹೇಳಲಿ ಇದನ್ನ? ಬೇಯಿಸಿದ ಬ್ರೆಡ್ಡಿನಾಕಾರದಲ್ಲಿ ಬಣ್ಣದ ಹೂ ಬೀಜಗಳನ್ನೊಳಗೊಂಡ ಗುಬುಟಿನಂತಿದೆ. ಕೆಲವು ಮನೆಗಳನ್ನು ಬೆಟ್ಟದ ತಪ್ಪಲಿನಲ್ಲಿ ಕಟ್ಟಿ ದ್ದರೆ, ಉಳಿದವನ್ನು ಕೆಳಗೆ ಸಮನೆಲದಲ್ಲಿ ಒಂದ ಕ್ಕೊಂದು ಜೋಡಿಸಿಕೊಳ್ಳುವಂತೆ ಕಟ್ಟಿದ್ದಾರೆ; ಒಂದಕ್ಕಿಂತ ಮತ್ತೊಂದು ಎತ್ತರವಾಗಿ ಸ್ಮಶಾನದ ಲ್ಲಿರುವ ಗೋರಿ ಕಲ್ಲುಗಳಂತೆ. ರಸ್ತೆಗಳೆಂದು ಕರೆಯಲು ಸಾಧ್ಯವಾಗದಂತಿದೆ, ಏಕೆಂದರೆ ಮನೆಗ ಳನ್ನು ಯಾವ ಯೋಜನೆಯ ಪ್ರಕಾರವಾಗಿಯೂ ಕಟ್ಟಿಲ್ಲ. ಅಂಥ ವಿಷಯಗಳಿಗೆಲ್ಲಾ ಇಲ್ಲಿ ಕೋಣೆ ಎನ್ನುವುದೆಲ್ಲಿದೆ? ಖಾಲಿ ಇರುವ ಜಾಗದಲ್ಲಿ ಕಟ್ಟಲು ಹೋದಾಗ ಅಂಥದೆಲ್ಲಾ ಯಾಕೆ? ಭೂಮಿಯಲ್ಲಿ ವಾಸವಿರಬೇಕು ಎಂದು ಬರೆದಿದೆ. ಅದನ್ನೆಲ್ಲಾ ಅಳೆದು ನೋಡು ಎಂದಲ್ಲ.

ಇಷ್ಟಕ್ಕೇ ಬೇಸರಗೊಳ್ಳಬೇಡಿ, ಅಲ್ಲಲ್ಲಿ ಕೆಲವು ಬೀದಿಗಳಿವೆ, ದೊಡ್ಡ ಬೀದಿಗಳು ಚಿಕ್ಕ ಬೀದಿಗಳು, ಸಂದುಗೊಂದಿಯ ಓಣಿಗಳು. ಬೆಟ್ಟದ ತಪ್ಪಲಿನಿಂದ ಆರಂಭವಾದದ್ದು ಎಲ್ಲೆಲ್ಲೋ ಸುತ್ತಿ, ಮತ್ತೆಲ್ಲೋ ಹೊರಳಿ ಕೆಳ ತಗ್ಗಿನ ಒಂದು ಮನೆಯ ಬಳಿಯೋ, ನೆಲ ಮಾಳಿ ಗೆಯ ಗೋಡೆಯೊಂದರ ಎದುರಿಗೋ ಅಥವಾ



ಗುಂಡಿಯೊಂದರ ಬಳಿಯೋ ಈ ಬೀದಿಗಳು ಕೊನೆಗೊಂಡರೆ ಅವರಿಗೇನಾಗಬೇಕಿದೆ? ನೀವು ಪೇಟೆಗೆ ಹೊಸಬರಾಗಿದ್ದರೆ ರಾತ್ರಿ ಹೊತ್ತಿನಲ್ಲಿ ಒಬ್ಬರೇ ಲಾಟೀನಿಲ್ಲದೆ ಹೊರಗೆ ಹೋಗಬೇಡಿ. ಇಲ್ಲಿಯೇ ವಾಸ ಮಾಡುತ್ತಿರುವ ಸಣ್ಣ ಮನುಷ್ಯರು ಹೇಗಾದರೂ ಇರಲಿ. ಅವರ ಬಗ್ಗೆ ನಿಮಗೆ ಯಾವ ಚಿಂತೆಯೂ ಬೇಡ. ಕಸ್ರಿಲೆವ್ನದವರು ಕಸ್ರಿಲೆವ್ನದವರೇ. ಅವರು ಕಸ್ರಿಲೆವ್ನದೊಳಗೆ ಯಾವಾಗಲೂ ಕಳೆದು ಹೋಗುವುದಿಲ್ಲ. ಪ್ರತಿಯೊಬ್ಬನೂ ತನ್ನ ಹೆಂಡತಿ, ಮಕ್ಕಳನ್ನು ಹುಡುಕಿಕೊಂಡು ಹೋಗುತ್ತಾನೆ, ಹಕ್ಕಿಯೊಂದು ತನ್ನ ಸ್ವಂತ ಗೂಡಿಗೇ ಮರಳಿ ಹೋಗುವಂತೆ.

ಪೇಟೆಯ ಮಧ್ಯದಲ್ಲಿ ಅರ್ಧವೃತ್ತಾಕಾರದ ಸ್ಥಳವೊಂದಿದೆ. ಇದನ್ನು ಚೌಕವೆಂದೂ ಕರೆಯಬಹುದು. ನೀವು ಇಲ್ಲಿಯೇ ಅಂಗಡಿ ಮುಂಗಟ್ಟುಗಳು, ಸಂತೆ ಮಳಿಗೆಗಳು, ಚಿಲ್ಲರೆ ಅಂಗಡಿಗಳನ್ನೆಲ್ಲಾ ನೋಡುವುದು. ಆಸುಪಾಸಿನ ಹಳ್ಳಿಗಳ ಎಲ್ಲ ರೈತರೂ ತಮ್ಮ ದಾಸ್ತಾನುಗಳಾದ ಮೀನು, ಈರುಳ್ಳಿ, ಮೂಲಂಗಿ ಮತ್ತಿತರ ಸಾಮಗ್ರಿಗಳನ್ನು ಇಲ್ಲಿಗೆ ತರುತ್ತಾರೆ. ಈ ಸಾಮಗ್ರಿಗಳನ್ನೆಲ್ಲಾ ಮಾರಾಟ ಮಾಡುವ ಇವರು ತಮ್ಮ ಜೀವನಕ್ಕೆ ಅಗತ್ಯವಿರುವ ವಸ್ತುಗಳನ್ನು ಈ ಸಣ್ಣ ಮನುಷ್ಯರಿಂದ ಕೊಂಡುಕೊಳ್ಳುತ್ತಾರೆ. ಕಸ್ರಿಲೆವ್ನದವರು ತಮ್ಮ ಜೀವನವನ್ನು ಹೀಗೆಯೇ ಸರಿದೂಗಿಸಿಕೊಳ್ಳುತ್ತಿರುವುದು. ಸಾಕಾಗದೆ ಹೋದರೂ ಏನೂ ಇಲ್ಲದಿರುವುದಕ್ಕಿಂತ ಉತ್ತಮ. ಈ ಚೌಕದಲ್ಲೇ ಪೇಟೆಯ ಮೇಕೆಗಳೆಲ್ಲಾ ಬಿಸಿಲು ಕಾಯಿಸಿಕೊಳ್ಳುತ್ತಾ ಮಲಗಿರುತ್ತವೆ.

ಇಲ್ಲಿಯೇ ಸಿನಗಾಗ್‌ಗಳಿವೆ, ಪಂಚಾಯ್ತಿ ಮನೆಗಳಿವೆ, ಚರ್ಚ್‌ಗಳಿವೆ ಮತ್ತು ಜ್ಯೂ ಮಕ್ಕಳು ಧರ್ಮಗ್ರಂಥಗಳನ್ನೋದುವ ಚೆದರ್‌ಗಳಿವೆ. ವಿದ್ಯಾರ್ಥಿಗಳು ಮತ್ತು ರಬಾಯಿಯವರ ಪಠಣದ ಜೋರು ಸದ್ದಿಗೆ ಯಾರ ಕಿವಿಯಾದರೂ ಕಿವುಡಾದೀತು. ಹೆಂಗಸರು ಸ್ನಾನಕ್ಕೆ ಹೋಗುವ ಸ್ನಾನದ ಮನೆಗಳೂ ಇಲ್ಲಿಯೇ ಇವೆ. ಸಾರ್ವಜನಿಕ ಸಂಘ-ಸಂಸ್ಥೆಗಳ ಕಟ್ಟಡಗಳೂ ಇಲ್ಲಿಯೇ ಇವೆ. ನೀರುಗಾಲುವೆ, ನೀರಾವರಿ ಕಾಮಗಾರಿ, ವಿದ್ಯುಚ್ಛಕ್ತಿ ಅಥವಾ ಇಂಥ ಸಿರಿವಂತವಾದ ಏನನ್ನೂ ಕಸ್ರಿಲೆವ್ನದವರು ಇಲ್ಲಿಯ ತನಕ ಕೇಳಿಯೇ ಇಲ್ಲ. ಇವೆಲ್ಲದರಿಂದ ಅವರಿಗೇನಾಗಬೇಕಿದೆ? ಎಲ್ಲಾ ಕಡೆಯೂ ಜನ ಅದೇ ಸಾವನ್ನು ಸಾಯುತ್ತಾರೆ ಮತ್ತು ಅವರನ್ನು ಇದೇ ಭೂಮಿಯಲ್ಲಿಡುತ್ತಾರೆ, ಅದೇ ಗುದ್ದಲಿಗಳಿಂದ ಮುಚ್ಚುತ್ತಾರೆ. ನಮ್ಮ ರಬಾಯಿಗಳಾದ ರೆಬ್ ಇಸ್ಸೆಲ್ ಹೇಳುವುದೇನೆಂದರೆ ತನಗೆ ತುಂಬಾ ಸಂತೋಷವಾಗುವುದು ಮದುವೆ, ಮತ್ತಿತರ ಸಮಾರಂಭಗಳಲ್ಲಿ ಕೆಲವು ಲೋಟ ವೈನ್ ಕುಡಿದು, ಉದ್ದ ಕೋಟಿನ ಸ್ಕರ್ಟ್‌ನ್ನು ಮೇಲೆ ಸಿಗಿಸಿ ಕಜಟ್ಸ್ಕಿ ನೃತ್ಯ ಮಾಡುವಾಗ ...

ಆದರೆ ಕಸ್ರಿಲೆವ್ನದ ನಿಜವಾದ ಕಳೆಯಿರುವುದು ಅದರ ಸ್ಮಶಾನಗಳಲ್ಲಿ. ಈ ಅದೃಷ್ಟವಂತ ಪೇಟೆಗೆ ಎರಡು ಶ್ರೀಮಂತ ಸ್ಮಶಾನಗಳಿವೆ, ಹಳೆಯದು ಮತ್ತು ಹೊಸದು. ಹೊಸದರಲ್ಲಿ ಹಳೆಯದಕ್ಕಿಂತ ಶ್ರೀಮಂತ ಗೋರಿಗಳಿವೆ, ಅಷ್ಟೆ. ಇಲ್ಲೀಗ ಯಾರನ್ನು ಹೂಳಲೂ ಸ್ಥಳವಿಲ್ಲ. ಆದರೂ ಯಾರಾದರೂ ದುರ್ದೈವದ ಸಾವಿಗೋ ಇಲ್ಲಾ, ಕೊಲೆಗೋ ತುತ್ತಾದ ವಿಶೇಷ ಸಂದರ್ಭಗಳಲ್ಲಿ ಮಾತ್ರ ಸಂದಿಯೊಂದರಲ್ಲಿ ಅವಕಾಶ ಕೊಡುತ್ತಾರೆ.

ಆದರೆ ಹಳೆ ಸ್ಮಶಾನದ ಘನತೆಯ ಬಗ್ಗೆ ಕಸ್ರಿಲೆವ್ನದವರಿಗೆ ಗೌರವವಿದೆ. ಈ ಹಳೇ ಸ್ಮಶಾನದ ತುಂಬ ಹುಲ್ಲು ಬೆಳೆದಿದ್ದು ಪೊದೆಗಳೂ ಇವೆ, ಕಲ್ಲುಗಳು ಇಲ್ಲಿ ನೇರವಾಗಿಲ್ಲ. ಆದರೂ ಇವು ಅಪರೂಪದ ಮುತ್ತಿನಂತೆ, ಸಿರಿತನದ ಚೂರುಗಳಂತೆ, ಕಣ್ಣೊಳಗಿನ ಗುಡ್ಡೆಗಳಂತಿದ್ದು ಖಜಾನೆಯಷ್ಟು ಬಲವನ್ನಿರಿಸಿಕೊಂಡಿದೆ. ಈ ಜಾಗದಲ್ಲಿ ಮಲಗಿರುವವರು ಕಸ್ರಿಲೆವ್ನದ ಪೂರ್ವಿಕರಷ್ಟೇ ಅಲ್ಲ, ರಬಾಯಿಗಳು, ಧರ್ಮ ಪಾಲನೆಯಲ್ಲಿ ಗೌರವ ಪಡೆದವರು, ಪಂಡಿತರು, ವಿದ್ವಾಂಸರು ಮತ್ತು ಪ್ರಸಿದ್ಧ ವ್ಯಕ್ತಿಗಳೊಡನೆ ಚೆಲ್ಮಿನಿತ್ಸ್ಕಿಯವರ ಕಾಲದಿಂದಲೂ ಶೌರ್ಯ ತೋರಿ ಮಡಿದವರೂ ಇದ್ದಾರೆ. ಆದರೆ ಇವರೆಲ್ಲಾ ಈಗ

ಭೂಮಿಯ ತುಣುಕೊಂದರ ಒಡೆತನ ಪಡೆದಿದ್ದಾರೆ. ಅವರು ಪಡೆದಿರುವ ಈ ತುಣುಕಿನಲ್ಲಿ ಹುಲ್ಲಿನ ಗರಿ ಚಿಗುರೊಡೆಯುತ್ತಿದೆ, ಮರಗಳು ಬೆಳೆದು ನಿಲ್ಲುತ್ತಿವೆ, ಗಾಳಿ ಹಿತಕರವಾಗಿ ಬೀಸುತ್ತದೆ. ಯಾರಾದರೂ ಇಲ್ಲಿ ಸರಾಗವಾಗಿ ಉಸಿರಾಡಬಹುದು.

ಹೊಸ ವರುಷಕ್ಕೆ ಒಂದು ತಿಂಗಳಷ್ಟು ಮುಂಚೆ ''ಅಳುವ ದಿನಗಳು'' ಸಮೀಪಿಸಿದಾಗ ಇಲ್ಲಿ ಏನು ನಡೆಯುತ್ತದೆ ಎನ್ನುವುದನ್ನು ನೀವೇ ನೋಡಬಹುದು. ಗಂಡಸರು ಮತ್ತು ಹೆಂಗಸರು ಮುಖ್ಯವಾಗಿ ಹೆಂಗಸರು, ಹಿಂಡುಗಟ್ಟಿಕೊಂಡು ಇಲ್ಲಿನ ದಾರಿಗಳಲ್ಲಿ ಮೇಲಿನಿಂದ ಕೆಳಗೆ ಹೋಗುತ್ತಾ ತಮ್ಮ ಪೂರ್ವಿಕರ ಗೋರಿಗಳತ್ತ ಹೋಗುತ್ತಾರೆ. ದೇಶದ ಎಲ್ಲಾ ಭಾಗದಿಂದಲೂ ಬಂದು ಸೇರುವ ಜನ ತಮ್ಮ ಹೃದಯದೊಳಗಿನ ಕಣ್ಣೀರನ್ನು ಪವಿತ್ರವಾದ ಈ ಗೋರಿಗಳ ಮೇಲೆ ಹರಿಸುತ್ತಾರೆ. ನನ್ನನ್ನು ನಂಬಿ; ಆಗ, ಇಲ್ಲಿ ಯಾರೂ ಸುಲಭವಾಗಿ ಅಳಲಾಗುವುದಿಲ್ಲ. ಕಸ್ರಿಲೆವ್ನದ ಇಂಥ ''ಬಯಲು ಪ್ರದೇಶ''ವನ್ನು ಬಿಟ್ಟು ಹೋಗಲೂ ಸಾಧ್ಯವಾಗುವುದಿಲ್ಲ. ಯಾರೇ ಆದರೂ ಸಿನಗಾಗ್‌ನಲ್ಲಿ ಸುಲಭವಾಗಿ ಅಳಬಹುದು. ಆದರೆ ಸಿನಗಾಗ್ ಸ್ಮಶಾನಕ್ಕೆ ಬರುವುದಿಲ್ಲ. ಕಸ್ರಿಲೆವ್ನದ ಕಲ್ಲು ಕುಟುಕರಿಗೆ, ಛತ್ರಗಳವರಿಗೆ, ಹಾಡುಗಾರರಿಗೆ, ಸ್ಮಶಾನದ ಕಾವಲಿನವರಿಗೆ ಈ ಸ್ಮಶಾನ ಆದಾಯ ತರುವ ಮೂಲಸ್ಥಾನವಾಗಿದೆ. ಹೊಸ ವರುಷಕ್ಕೆ ಮೊದಲಿನ ತಿಂಗಳಾದ್ದರಿಂದ ಸುತ್ತಲಿನ ಪಾಪರ್‌ಗಳಿಗೆ, ಹೆಳವರಿಗೆ ಸುಗ್ಗಿಯ ದಿನಗಳಾಗಿರುತ್ತವೆ.

''ನೀವು ಯಾವಾಗಾದರೂ 'ನಮ್ಮ ಬಯಲು ಪ್ರದೇಶ'ಕ್ಕೆ ಹೋಗಿದ್ದೀರಾ?'' ಕಸ್ರಿಲೆವ್ನದವರು ನಿಮ್ಮನ್ನು ತುಂಬಾ ಸಂತೋಷದಿಂದ ಕೇಳುತ್ತಾರೆ, ತಮ್ಮ ತಂದೆಯ ದ್ರಾಕ್ಷಿ ತೋಟಕ್ಕೆ ಹೋಗಿ ಬಂದಿರುವಿರೇನೋ ಎಂಬಂತೆ. ನೀವು ಇಲ್ಲಿಗೆ ಹೋಗಿರದೆ ಇದ್ದರೆ ನಿಮ್ಮ ಬಗ್ಗೆ ಮರುಕ ತೋರುತ್ತಾರೆ. ನೀವು ಈ ''ಬಯಲು ಪ್ರದೇಶ''ಕ್ಕೆ ಹೋದಾಗ ಗೋರಿಗಳ ನೆಡುಗಲ್ಲುಗಳಲ್ಲಿರುವ ಮಸುಕಾದ ಹಳೇ ಅಕ್ಷರಗಳನ್ನು ತಪ್ಪದೇ ಓದಿ, ಮತ್ತು ಇದರಿಂದ ಈ ಜನರ ಇಡೀ ಕತೆಯನ್ನು ನೀವೇ ಕಂಡುಕೊಳ್ಳಿ. ಇಷ್ಟೇ ಅಲ್ಲದೆ ನಿಮ್ಮ ಭಾವನೆಗಳೊಂದಿಗೆ ಕಲ್ಪನೆಯನ್ನೂ ಬೆಳೆಸಿಕೊಳ್ಳಬಹುದಾದರೆ ಬಡತನದ ಸಣ್ಣ ಮನುಷ್ಯರ ಈ ಶ್ರೀಮಂತ ಸ್ಮಶಾನಗಳನ್ನು ನೋಡಿ ಹಳೇ ವಾಕ್ಯಗಳನ್ನೇ ಮತ್ತೆ ಉಚ್ಛರಿಸಿ:

''ಓ ಜಾಕೋಬ್, ನಿನ್ನ ಡೇರೆಗಳು ಎಷ್ಟೊಂದು ಸುಂದರವಾಗಿವೆ; ನಿನ್ನ ವಿಶ್ರಾಂತಿ ಸ್ಥಳಗಳು ಎಷ್ಟೊಂದು ಚೆನ್ನಾಗಿವೆ, ಓ ಇಸ್ರೈಲ್!''

★ ★ ★

**(ಸಬ್ಬತ್: ವಾರಕ್ಕೊಮ್ಮೆ ಬರುವ ಧಾರ್ಮಿಕ ಆಚರಣೆಯ ಪವಿತ್ರ ಊಟದ ದಿನ, ಶನಿವಾರ**

**ಸಿನಗಾಗ್: ಜ್ಯೂಗಳ ಆರಾಧ್ಯ ಮಂದಿರ, ಚರ್ಚ್‌ನಂತೆ.**

**ಚೆದರ್: ವಿದ್ಯಾರ್ಥಿಗಳಿಗೆ ಸಂಪ್ರದಾಯದ ರೀತಿಯಲ್ಲಿ ಜ್ಯೂ ಧರ್ಮವನ್ನು ಬೋಧಿಸುವ ಶಾಲೆ.**

**ರಬಾಯಿ: ಜ್ಯೂಗಳ ಧಾರ್ಮಿಕ ಗುರು, ಪಾದ್ರಿಗಳಂತೆ ●**

## ''ನಮ್ಮ ಮನೆಗೆ ಬನ್ನಿ''

ಆಯುಸ್ಸು ಮುಗಿದು ತೀರಿಕೊಂಡ ಆನಂದರಾಯರು ನರಕಕ್ಕೆ ಯಾತ್ರೆ ಬೆಳೆಸಿದರು. ಅಲ್ಲಿ ಸಂತೋಷದಿಂದಲೇ ನಗುನಗುತ್ತಾ ಓಡಾಡಿಕೊಂಡಿದ್ದ ರಾಯರನ್ನು ಕಂಡ ಯಮಧರ್ಮರಾಯ, ''ಏನ್ ರಾಯರೇ .....! ನಿಮಗೆ ನರಕವೆಂದರೆ ಸ್ವಲ್ಪವೂ ಭಯವಿಲ್ಲವೇ ....!?'' ಅಂತ ಪ್ರಶ್ನಿಸಿದರು.

''ಏನೂ .....! ಇದು ನರಕಾನೇ .....!? ಖಂಡಿತ ಅಲ್ಲಾ ಸ್ವಾಮಿ! ಇದು ಸ್ವರ್ಗ! ಇದು ಸ್ವರ್ಗ! ನರಕ ನೋಡ್ಬೇಕಾದರೆ ಭೂಮಿ ಮೇಲಿರೋ ನಮ್ಮ ಮನೆಗೆ ಬನ್ನಿ!!'' ಎಂದರು ರಾಯರು.

(ಸಂಗ್ರಹ) **ಜೆ.ವಿ.ಪ್ರಭು**

# ಚುಂಬನದ ಮೂಲವೆಲ್ಲಿ?



ಸಂಸ್ಕೃತ ಕವಿಗಳು ಚುಂಬನವನ್ನು 'ಅಧರಾಮೃತ' ಎಂದು ಕರೆದರು. ಪುರಾತನ ಗ್ರೀಕ್ ಕವಿಗಳು ಅದನ್ನು ಸ್ವರ್ಗದ ಕೀಲಿ ಕೈ ಎಂದರು. ಹಾಸ್ಯ ಕವಿಯೊಬ್ಬ ಚುಂಬನವನ್ನು ಅನುಭವಿಸಬೇಕೇ ಹೊರತು ಅದರ ಬಗ್ಗೆ ಮಾತಾಡಬಾರದು ಎಂದಿದ್ದಾನೆ.

**ಕೃಷ್ಣರಾಜ**

ಚುಂಬನಗಳಲ್ಲಿ ಅಸಂಖ್ಯ ವಿಧಾನಗಳು. ರವೀಂದ್ರರ 'ಗಾರ್ಡನರ್' ಕವನ ಸಂಗ್ರಹದಲ್ಲಿ ತೋಟಗಾರನೊಬ್ಬ ರಾಣಿಯನ್ನು ಪ್ರೇಮಿಸುತ್ತಾನೆ. ಆದರೆ ತನಗೆ ಅವಳ ಮುಖಚುಂಬನದ ಯೋಗವಿಲ್ಲವೆಂದು ಆತ ಬಲ್ಲ. ಆತ ಬೇಡುವುದಿಷ್ಟೇ, ಅವಳು ಹೂದೋಟದಲ್ಲಿ ಸಂಚರಿಸುವಾಗ ಅವಳ ಪಾದಕ್ಕಂಟಿದ ಒಂದು ಧೂಳಿ ಕಣವನ್ನು ಚುಂಬಿಸಿ ತೆಗೆಯುವ ಅನುಗ್ರಹ ದೊರಕಲಿ ಎಂದು. ಕೃಷ್ಣನು ಗೋಪಿಯರ ತುಟಿಗಳ ಮೇಲೆ ಒತ್ತಿದ ಮುದ್ರೆಯ ನೆನಪು ಎಷ್ಟು ಮಾದಕವಾಗಿತ್ತೆಂದರೆ ಅವರು 'ಅಧರ ಸೀಧುನಾಽಽಪ್ಯಾಯಯಸ್ವನಃ' 'ತುಟಿಯ ಮದಿರೆಯನಿತ್ತು ತಣಿಸು ನಮ್ಮ' ಎಂದು ಮತ್ತೆ ಮತ್ತೆ ಕೇಳುತ್ತಾರೆ. ತೊಟ್ಟಿಲಲ್ಲಿ ಶಾಂತವಾಗಿ ನಿದ್ರಿಸಿದ ಮಗುವಿನ ತುಟಿಯಿಂದ ತಾಯಿ ಮೆದುವಾಗಿ ಸೆಳೆದುಕೊಂಡ ಚುಂಬನವೇ ಬೇರೆ, 'ಅಮರ ಶತಕ'ದಲ್ಲಿ ಗಂಡ ನಿದ್ರಿಸಿದ್ದಾನೆಂದು ಬಗೆದು ಮೆಲ್ಲನೆ ಅವನ ಗಲ್ಲವನ್ನು ಮುತ್ತಿಟ್ಟು ಅವನು ಪುಲಕಿತನಾದುದನ್ನು ಕಂಡು ನಾಚಿಕೊಂಡ ನವವಧುವಿನ ಕಳ್ಳ ಚುಂಬನವೇ ಬೇರೆ.

ಚುಂಬನವು ಎಲ್ಲಿ, ಎಂದು ಪ್ರಾರಂಭವಾಯಿತು? ಪಾಶ್ಚಾತ್ಯ ಸಂಶೋಧಕರ ಪ್ರಕಾರ ವೇದ ಕಾಲದ ಭಾರತವೇ ಚುಂಬನದ ಮೂಲ ಸ್ಥಳ. ಆದರೆ ಆಗ ಅದು ಮೂಸುವ ರೂಪದಲ್ಲಿತ್ತು. ರಾಮಾಯಣದಲ್ಲಿ ತಾಯಂದಿರು ತಮ್ಮನ್ನು ನಮಸ್ಕರಿಸಿದ ಮಕ್ಕಳನ್ನೆತ್ತಿ ಮೂಸುವ ಸಂದರ್ಭಗಳೆಷ್ಟೋ ಬರುತ್ತವೆ. ಕನ್ನಡದ ಮುತ್ತು, ಮುದ್ದು, ಮುಂಡು ಎಂಬ ಧಾತುಗಳು ಮೂಸು ಎಂಬುದರಿಂದಲೇ ಹುಟ್ಟಿದವೆಂದು ಕಿಟೆಲ್ ಕೋಶ ತರ್ಕಿಸುತ್ತದೆ. ಆದರೆ ಮಹಾಭಾರತ ಕಾಲದವರೆಗೂ ತುಟಿ ತುಟಿಗಳ ಮುದ್ದಾಟ ಪ್ರಚಾರಕ್ಕೆ ಬಂದಿರಲಿಲ್ಲ. ಅನಂತರ ಅದು ಭಾರತದಿಂದ ಪೂರ್ವಕ್ಕೆ ಚೀನದತ್ತ ಹಾಗೂ ಪಶ್ಚಿಮದಲ್ಲಿ ಇರಾಣ, ಅಸೀರಿಯ, ಸಿರಿಯ, ಗ್ರೀಸ್, ಇಟಲಿಗಳತ್ತ ಹಬ್ಬಿತು.

ತುಟಿಗಳ ಚುಂಬನವು ಬಹುಶಃ ಪ್ರಾರಂಭದಲ್ಲಿ ಹಣೆಗೆ ಹಣೆ ಹಚ್ಚುವುದರಿಂದಾರಂಭಿಸಿರಬೇಕು. ಅನಂತರ ಮೂಗು ಅದರಲ್ಲಿ ಪ್ರಧಾನ

ಚುಂಬನವು ಕೇವಲ ಪ್ರೀತಿಯನ್ನಲ್ಲ ಭಯಭಕ್ತಿಯನ್ನೂ ಪ್ರದರ್ಶಿಸಿದ್ದುಂಟು!

ಪಾತ್ರ ವಹಿಸಿತು. ಇಂದಿಗೂ ಮಲಯ ಮತ್ತು ದಕ್ಷಿಣ ದ್ವೀಪಗಳಲ್ಲಿ ಮೂಗು ಮೂಗಿನ ಘರ್ಷಣೆಯೇ ಪ್ರೀತಿ ಸೂಚಕವಾಗಿದೆ. ಎಸ್ಕಿಮೋಗಳಲ್ಲಿ ಪ್ರಣಯಿಗಳು ಬಲು ಮಮತೆಯಿಂದ ಮೂಗಿಗೆ ಮೂಗು ತಿಕ್ಕುತ್ತಾರೆ. ಚೀನೀಯರ ಮುತ್ತು ಮೂಗನ್ನು ಕೆನ್ನೆಗೆ ಒತ್ತಿ ಉಸಿರೆಳೆದುಕೊಳ್ಳುವ ರೂಪ ಧರಿಸುತ್ತದೆ. ತುಟಿ ತುಟಿಗಳ ಮುತ್ತು ಅಸಹ್ಯವೆಂದು ಅವರ ತಿಳಿವಳಿಕೆ. ಇಂಡೋಚೀನದಲ್ಲಿ ತಾಯಂದಿರು ಫಿರಂಗಿಯವರ ಮುತ್ತು ಕೊಡುತ್ತೇನೆಂದು ಮಕ್ಕಳನ್ನು ಹೆದರಿಸುತ್ತಾರಂತೆ! ಆಫ್ರಿಕನ್ನರು ಕೂಡ ತುಟಿ ಮುದ್ದನ್ನು ಎಂದೂ ಮೆಚ್ಚುವುದಿಲ್ಲ. ಈಜಿಪ್ತದಲ್ಲಿಯೂ ಚುಂಬನ ಬೇರೂರಿಲ್ಲ. ಜಪಾನೀಯರಲ್ಲಿ ಚುಂಬನಕ್ಕೆ ಶಬ್ದವೇ ಇಲ್ಲ. ತಾಯಿ ಮಕ್ಕಳ ನಡುವೆ ಮಾತ್ರ ಇಲ್ಲಿ ಚುಂಬನದ ಸಂಪ್ರದಾಯವಿದೆ. ತದ್ವಿರುದ್ಧವಾಗಿ ಫ್ರೆಂಚರಲ್ಲಿ ಈಗ ಪ್ರಣಯಿಗಳು ಹೊರತು ಮತ್ತುಳಿದವರು ಪರಸ್ಪರ ಚುಂಬಿಸುವುದು ಪಾಪ ಎಂಬಂತಾಗಿಬಿಟ್ಟಿದೆ!

ಚುಂಬನವು ಎಲ್ಲ ದೇಶಗಳಲ್ಲಿ ಎಲ್ಲ ಕಾಲಗಳಲ್ಲಿ ಒಂದೇ ಅರ್ಥವನ್ನು, ಪ್ರೀತಿಯನ್ನು ಸೂಚಿಸುತ್ತಿರಲಿಲ್ಲ ಎಂದು ಹೇಳಿದರೆ ನಿಮಗೆ ಆಶ್ಚರ್ಯವಾದೀತು. ಅದೊಂದು ಥರದ ನಮಸ್ಕಾರವನ್ನು ಸೂಚಿಸುತ್ತಿತ್ತು. ಪ್ರಾಚೀನ ಇರಾಣೀಯರಲ್ಲಿ ಗಂಡಸು-ಗಂಡಸರು ಸಮಾನ ಅಂತಸ್ತಿನವರಾಗಿದ್ದರೆ ತುಟಿ ಮುದ್ದು ತೆಗೆದುಕೊಳ್ಳುತ್ತಿದ್ದರು. ಅಸಮಾನ ಅಂತಸ್ತಿನವರಾಗಿದ್ದರೆ ಕೆನ್ನೆ-ಮುದ್ದು ತೆಗೆದುಕೊಳ್ಳುತ್ತಿದ್ದರು. ಪ್ರಾಚೀನ ರೋಮನ್ನರಲ್ಲಿ ಕೆನ್ನೆ ಮುದ್ದು ಸ್ನೇಹವನ್ನೂ ಬಾಯಿ ಮುದ್ದು ಪ್ರೀತಿಯನ್ನೂ ತುಟಿತುಟಿಗಳ ಸ್ಪರ್ಶ ಕಾಮವನ್ನೂ ಸೂಚಿಸುತ್ತಿತ್ತು. ಪಾಶ್ಚಾತ್ಯರಲ್ಲಿ ಇಂದು ಹಣೆ ಮುದ್ದು ಗೌರವವನ್ನೂ ಕೆನ್ನೆ ಮುದ್ದು ಸ್ನೇಹ ಮಮತೆಗಳನ್ನೂ ಕೈಗೆ ಮುದ್ದಿಟ್ಟರೆ ಆದರವನ್ನೂ, ಪಾದ ಚುಂಬನವು ದೈನ್ಯವನ್ನೂ ಮುಖ ಚುಂಬನವು ಪ್ರಣಯವನ್ನೂ ಪ್ರಕಟಿಸುತ್ತದೆನ್ನಬಹುದು.

ನಾವು ಭಾರತೀಯರು ಸಾಷ್ಟಾಂಗ ನಮಸ್ಕಾರ ಮಾಡುತ್ತೇವಲ್ಲ. ಅದು ಪಾದವನ್ನು ಚುಂಬಿಸುವ ರೂಢಿಯದೇ, ಇನ್ನೂ ಭಯ ಭಕ್ತಿ ಸೂಚಕವಾದ ರೂಪಾಂತರವೆಂದು ತೋರುತ್ತದೆ. ಅರಬ ಪ್ರಜೆಗಳು ತಮ್ಮ ಅರಸರ ಮುಂದೆ ಉದ್ದಂಡ ನಮಸ್ಕಾರ ಹಾಕಿ ನೆಲವನ್ನು ಚುಂಬಿಸುತ್ತಾರೆ.

ಭಯ ಭಕ್ತಿ ಸೂಚಕ ಚುಂಬನದಲ್ಲಿ ಒಂದು ವಿಪರೀತ ವಿಧಾನವೆಂದರೆ ಹಿಂಭಾಗದ ಚುಂಬನ. ಮಾಟಗಾತಿಯರು ಸೈತಾನನ ಪೃಷ್ಠವನ್ನು ಚುಂಬಿಸಿದಂತೆ ತೋರಿಸುವ ಕೆಲ ಪುರಾತನ ಚಿತ್ರಗಳಿವೆ. ತಪ್ಪು ಮಾಡಿದವರಿಗೆ ಶಿಕ್ಷೆಯೆಂದು ಅಥವಾ ಅವಮಾನ ಮಾಡುವುದಕ್ಕಾಗಿ ಈ ಪೃಷ್ಠ ಚುಂಬನವನ್ನು ವಿಧಿಸಲಾಗುತ್ತಿತ್ತೆಂದು ಹಳೆಯ




ಮೇ 1959ರ ಸಂಚಿಕೆಯಿಂದ

ಕಥೆಗಳಿಂದ ತಿಳಿಯುತ್ತದೆ. ಇದರದೇ ಇನ್ನೊಂದು ಅವತಾರವೆಂದರೆ ತಂಟೆಕೋರ ಮಕ್ಕಳಿಗೆ ಉಪಾಧ್ಯಾಯರು ಬೆತ್ತವನ್ನು ಮುತ್ತಿಡುವಂತೆ ಬಲಾತ್ಕರಿಸುತ್ತಿದ್ದ ಪದ್ಧತಿ.

ಗೌರವ-ಭಯಸೂಚಕ ಚುಂಬನವು ಬೇರೊಂದು ರೂಪದಲ್ಲಿಯೂ ಪ್ರಚಲಿತವಾಗಿತ್ತು. ರೋಮಿನಲ್ಲಿ ಆಳುಗಳು ಒಡೆಯನ ಬಟ್ಟೆಯನ್ನು ಕೈಯಿಂದ ಸ್ಪರ್ಶಿಸಿ ಬಳಿಕ ಆ ಕೈಯನ್ನು ಮುತ್ತಿಟ್ಟುಕೊಳ್ಳುತ್ತಿದ್ದರು. ತುರ್ಕಿ ಜನರು ತಮ್ಮ ಕೈಯನ್ನು ಚುಂಬಿಸಿ ಅದನ್ನು ಹಣೆಗೆ ಎತ್ತಿ ಗೌರವ ಸೂಚಿಸುತ್ತಾರೆ. ಆಗ್ರಾದಲ್ಲಿ ತಾಜಮಹಲಿಗೆ ಹೋದಾಗ ಮಮತಾಜ್-ಶಾಹಜಹಾನರ



ಗೋರಿಗಳನ್ನು ಒಬ್ಬ ಮುಸ್ಲಿಂ ಮುದುಕಿ ಸುಬದ್ಧವಾಗಿ ಚುಂಬಿಸಿದ್ದನ್ನು ನೋಡಿ ನನಗೆ ಸೋಜಿಗವಾಯಿತು. ಆದರೆ ಇದೇನೂ ಹೊಸದಲ್ಲವಂತೆ. ಮುಸ್ಲಿಮರು ಮಕ್ಕಾ ಯಾತ್ರೆಗೆ ಹೋದಾಗ ಕಾಬಾ ದೇಗುಲದಲ್ಲಿ ಪವಿತ್ರ ಶಿಲೆಯನ್ನು ಮುತ್ತಿಡುತ್ತಾರಂತೆ. ಇಷ್ಟೇ ಅಲ್ಲ, ಅವರು ದೇಗುಲದ ಮುಂದೆ ತಮ್ಮ ಕೈ, ಹಣೆ, ಬಲ ಕೆನ್ನೆ, ಹೊಟ್ಟೆ ಮತ್ತು ಎದೆಯನ್ನು ಬೆರಳುಗಳಿಂದ ಮುಟ್ಟಿಕೊಂಡು ಬಳಿಕ ಆ ಬೆರಳುಗಳನ್ನು ಚುಂಬಿಸುತ್ತಾರೆಂದು ಬರ್ಟನ್ ಹೇಳುತ್ತಾನೆ.

ಬೀದಿ ಕಾಮಣ್ಣರು ಕೆಲ ವೇಳೆ ತಮ್ಮ ಬೆರಳುಗಳನ್ನು ಮುತ್ತಿಟ್ಟು ದಾರಿಹೋಕ ಹುಡುಗಿಯರ ಕಡೆ ಅದನ್ನು 'ಭೂ ಬಿಡು'ತ್ತಾರಲ್ಲ, ಇದು ಇಂದು ಕಿಡಿಗೇಡಿತನವಾಗಿದ್ದರೂ 5,500 ವರ್ಷಗಳ ಹಿಂದೆ ದೇವತಾ ನಮಸ್ಕಾರದ ಪದ್ಧತಿಯಾಗಿತ್ತಂತೆ. ಪ್ರಾಚೀನ ಸುಮೇರಿಯನ್ನರ ಚಿತ್ರಲಿಪಿಯಲ್ಲಿ ಪ್ರಾರ್ಥನೆಯನ್ನು ಸೂಚಿಸುವ ಲಿಪಿಯು ದೇವರ ಕಡೆಗೆ ಮುತ್ತನ್ನು ಭೂ ಬಿಡುವ ಚಿತ್ರವೇ ಆಗಿತ್ತೆಂದು ಲಾಂಗ್‌ಡನ್ ಹೇಳುತ್ತಾನೆ. ಗ್ರೀಕರೂ ರೋಮನ್ನರೂ ಸೂರ್ಯ ಚಂದ್ರಾದಿ ದೇವತೆಗಳಿಗೆ ಹೀಗೆ ಭೂ-ಮುತ್ತನ್ನು ಕೊಡುತ್ತಿದ್ದರು.

ಯಹೂದ್ಯರಲ್ಲಿ ಧಾರ್ಮಿಕ ಚುಂಬನ ಪದ್ಧತಿ ಇದ್ದರೂ ತುಟಿ-ತುಟಿಗಳ ಮುತ್ತು, ಅದೂ ಗಂಡಸರು-ಹೆಂಗಸರ ನಡುವೆ, ತೀವ್ರವಾಗಿ ನಿಷೇಧಿಸಲ್ಪಟ್ಟಿತ್ತು. ಆದರೆ ಕ್ರೈಸ್ತ ಧರ್ಮ ಪ್ರಸಾರಕನಾದ ಸಂತ ಪಾಲನು 'ಪವಿತ್ರ ಚುಂಬನದಿಂದ ಪರಸ್ಪರರನ್ನು ಆದರಿಸಿರಿ' ಎಂದಾಜ್ಞಾಪಿಸಿದ್ದರಿಂದ ಕ್ರೈಸ್ತರಲ್ಲಿ ಈ ಆಚಾರ ಲಿಂಗ ಪರಿಭೇದವಿಲ್ಲದೆ ವಿಪರೀತವಾಗಿ ಹಬ್ಬಿತು. ಕೊನೆಗೆ ಅಗೇಪ್ ಹಬ್ಬದ ಸಮಯದಲ್ಲಿ ಈ ಪವಿತ್ರ ಚುಂಬನ ಎಷ್ಟು ಅವಾಂತರಕ್ಕಿಟ್ಟುಕೊಂಡಿತೆಂದರೆ, ಗಂಡಸರು ಗಂಡಸರನ್ನೂ ಹೆಂಗಸರು ಹೆಂಗಸರನ್ನೂ ಮಾತ್ರ ಚುಂಬಿಸಬೇಕೆಂದು ಪಾದ್ರಿಗಳು ವಿಧಿಸಬೇಕಾಯಿತು. ಅಗೇಪ್ ಹಬ್ಬದ ಸ್ವಾರಸ್ಯ ಅಂದಿನಿಂದ ಬಹಳ ಇಳಿದುಹೋಗಿರಬೇಕು!

ದೇವತೆಗಳಿಗೆ ಚುಂಬನ ಸೇವೆ ಮಾಡುವ ಪದ್ಧತಿಯು ಕೆಲ ಕೌತುಕದ ಪರಿಣಾಮಗಳನ್ನು

ಇಂದಿಗೂ ನಾವು ಕಾಣಬಹುದು. ಸಿಸಿಲಿ ದ್ವೀಪದ ಪ್ರಾಚೀನ ಗ್ರೀಕ್ ನಗರವಾದ ಅಗ್ರಿಗೆಂಟಮ್‌ನ ಮಂದಿರವೊಂದರಲ್ಲಿ ಪ್ರಾಚೀನ ಗ್ರೀಕ್ ದೇವತೆಯಾದ ಹೆರಾಕಲ್ಸ್‌ನ ಕಂಚಿನ ಮೂರ್ತಿಯ ತುಟಿ ಮತ್ತು ಗಡ್ಡದ ಬಹುಭಾಗವು ಭಕ್ತರ ಚುಂಬನ ಸೇವೆಯ ಫಲವಾಗಿ ಸಂಪೂರ್ಣ ಸವೆದು ವಿರೂಪವಾಗಿ ಹೋಗಿದೆ. ಅಷ್ಟು ದೂರವೇಕೆ, ರೋಮ್ ನಗರದ ಪ್ರಸಿದ್ಧ ಸಂತ ಪೀಟರನ ಮಂದಿರದಲ್ಲಿ ಆ ಕ್ರೈಸ್ತ ಸಂತನ ಕಂಚಿನ ಪ್ರತಿಮೆಯೊಂದಿದೆ; ಕಳೆದ 1500 ವರ್ಷಗಳಿಂದ ಭಕ್ತರು ಅದರ ಬಲ ಪಾದವನ್ನು ಚುಂಬಿಸಿ ಚುಂಬಿಸಿ ಈಗ ಅದರ ಅಲ್ಪಾಂಶವಷ್ಟೇ ಉಳಿದಿದೆ. ಸಂತ ಪೀಟರನು ಭಕ್ತರಿಂದ ನನ್ನನ್ನುಳಿಸಪ್ಪಾ ಎಂದು ಮೊರೆಯಿಡುತ್ತಿರಬೇಕು!

ಮಾನವನ ಪ್ರೇಮೋಪಹಾರವಾಗಿ ರೂಪುಗೊಂಡಿರುವ ಚುಂಬನದಲ್ಲಡಕವಾದ ಸಂಪರ್ಕದ ಹಂಬಲದ ಮೂಲವೆಲ್ಲಿದೆ? ಅತ್ಯಂತ ಸೂಕ್ಷ್ಮಜೀವಿಗಳಲ್ಲಿ ಕೂಡ ಈ ಹಂಬಲವಿರುವುದನ್ನು ಕಂಡು ವಿಜ್ಞಾನಿಗಳು ಚಕಿತರಾಗಿದ್ದಾರೆ. ಪಾರಾಮೀಸಿಯಂ ಎಂಬ ಅತಿ ಸೂಕ್ಷ್ಮ ಜೀವಿಯನ್ನು ತೆಗೆದುಕೊಳ್ಳಿರಿ. ಇದರ ಸಂತಾನವೃದ್ಧಿ ಲೈಂಗಿಕ ಸಂಪರ್ಕದಿಂದಾಗದೆ ವಿಭಜನೆಯಿಂದ ಆಗುತ್ತದೆ. ಹೀಗೆ ಸುಮಾರು ಮುನ್ನೂರು ಸಲ ವಿಭಜನೆ ಹೊಂದಿದ ಮೇಲೆ ಪಾರಾಮೀಸಿಯಂ ನಿರ್ವೀರ್ಯತೆಯಿಂದ ಮರಣ ಹೊಂದುತ್ತದೆ. ಆದರೆ ಅದೇ ಪಾರಾಮೀಸಿಯಂ ಇನ್ನೊಂದು ಪಾರಾಮೀಸಿಯಂನೊಡನೆ ತನ್ನ ಮುಖ ಪ್ರದೇಶದಲ್ಲಿ ಕೆಲ ಕ್ಷಣಗಳವರೆಗೆ ಬೆರಯಿತೆಂದರೆ ಕಾಯಕಲ್ಪ ಹೊಂದಿದಂತಾಗಿ ಮತ್ತೆ ಮುನ್ನೂರು ಸಲ ವಿಭಜನೆ ಹೊಂದುವುದನ್ನು ತಾಳಿಕೊಳ್ಳಬಲ್ಲದು. ಚುಂಬನವನ್ನು ಅಧರಾಮೃತವೆಂದು ಕರೆದ ನಮ್ಮ ಕವಿಗಳು ವಿಜ್ಞಾನದಿಂದ ಬಹಳ ದೂರ ಇರಲಿಲ್ಲ!

ಸ್ಪರ್ಶವು ಇಂದ್ರಿಯಗಳ ತಾಯಿ. ಅದು ಪ್ರೇಮದ ಆಕಾರವೆಂದೂ ಸಂಯೋಗವು ಅದರ ಆಕಾರವೆಂದೂ ಬೇನ್ ಹೇಳುತ್ತಾನೆ. ಮೃದು ಸ್ಪರ್ಶದಿಂದ ಮಿದುಳು ಉತ್ತೇಜಿತವಾಗುತ್ತದೆಂದು ಹೇಡೆನ್ ಹೈನನು ತೋರಿಸಿಕೊಟ್ಟಿದ್ದಾನೆ. ಬೆಕ್ಕು, ನಾಯಿಗಳು ಯಜಮಾನನ ಮೈಗೆ ತಮ್ಮ ತಲೆಯನ್ನು ಒರೆಸುವಾಗ, ಆನೆಗಳು ಸೊಂಡಿಲುಗಳನ್ನು ಒಂದಕ್ಕೊಂದು ಹೆಣೆಯುವಾಗ, ಹಕ್ಕಿಗಳು ಒಂದನ್ನೊಂದು ಚಂಚುವಿನಿಂದ ಕುಕ್ಕುವಾಗ, ಕೀಟಗಳು ತಮ್ಮ ಮೀಸೆಗಳನ್ನು ಒಂದಕ್ಕೊಂದು ತಗಲಿಸುವಾಗ ಸ್ಪರ್ಶದ ಒಂದು ವಿಶೇಷ ಸ್ವರೂಪವಾದ ಚುಂಬನವನ್ನು ಪ್ರೀತಿ ದ್ಯೋತಕವಾಗಿ ಉಪಯೋಗಿಸುತ್ತವೆ. ಹೊರ ಚರ್ಮವು ಒಳಚರ್ಮವನ್ನು ಸಂಧಿಸುವಲ್ಲಿ ಸ್ಪರ್ಶಾನುಭವವು ತುಂಬಾ ಸೂಕ್ಷ್ಮವಾಗಿರುತ್ತದೆ. ತುಟಿಗಳು ಅಂಥಾ ಸಂಧಿ ಸ್ಥಾನಗಳಲ್ಲಿ ಒಂದು ವಿಶೇಷ. ಕಾಮೋತ್ತೇಜಕ ಸ್ಥಾನದ ಕ್ರಿಯೆಯೇ ಚುಂಬನದಿಂದ ಸಿಗುವ ನಿರ್ವಚನೀಯ ಆನಂದದ ಝರಿಯಾಗಿದೆ. ಮುಖಪ್ರಾಂತದ ಈ ಉತ್ತೇಜನೀಯತೆಯ ಕಾರಣದಿಂದಲೇ ಮಕ್ಕಳೂ ಮಂಗಗಳೂ ಸಿಕ್ಕಿದ್ದನ್ನೆಲ್ಲ ಬಾಯಿಗೆ ತುರುಕಲು ಹವಣಿಸುತ್ತವೆ. ಎಷ್ಟೋ ವೇಳೆ ಮಕ್ಕಳು ತಾಯಿಯನ್ನು ಪ್ರೀತಿಯಿಂದ ನೆಕ್ಕುವುದನ್ನು ಕಾಣುತ್ತೇವೆ. ಅನಾಗರಿಕರಲ್ಲಿ ತಾಯಿಯೂ ಮಕ್ಕಳನ್ನು ನೆಕ್ಕುವುದುಂಟು. ಮಾನವನ ಪೂರ್ವಜರು ಮೊದಲು ತಾವೇ ಆಹಾರವನ್ನು ಜಗಿದು ಅಣಿಗೊಳಿಸಿ ಮಗುವಿನ ಬಾಯೊಳಗೆ ಹಾಕುತ್ತಿದ್ದರೆಂದು ತರ್ಕಿಸಲಾಗಿದೆ. ಮುಖ ಚುಂಬನವು ಇಂಥ ಅನಾದಿ ಕಾಲದ ಸುಖಾನುಭವಗಳ ಅಸ್ಫುಟ ಸ್ಮರಣೆಯಿಂದೊಡಗೂಡಿದೆಯೆಂಬುದಕ್ಕೆ ವಿಶೇಷ ಸಂಶಯವಿಲ್ಲ. ಅದೇ ಇಂದು ಉದಾತ್ತೀಕೃತವಾಗಿ ಚುಂಬನವೆಂಬುದು ಭಾವನಾದ್ಯೋತಕವಾದ ಶಾರೀರಿಕ ಕ್ರಿಯೆಯಾಗಿದೆ; ಅದಕ್ಕೆ ಪಾತ್ರರಾದವರಲ್ಲಿಯೂ ಅದೇ ಭಾವನೆಯನ್ನು ಪ್ರೇರಿಸುತ್ತದೆ. ●



# ‘‘ಕಂಬ್ಳೀವ್ರುಳ!’’

● ಕೆ.ವಿ.ಅಯ್ಯರ್ ●

ಕೈಲಾಸಂ ದೊಡ್ಡ ದೊಡ್ಡ ನಾಟಕ ನೋಡಿದವರು. ಭಾಸ, ಕಾಳಿದಾಸ, ಭವಭೂತಿ ಮುಂತಾದ ಕವಿವರರ ನಾಟಕಗಳನ್ನು ತಾವೇ ಓದಿ ಆನಂದಪಟ್ಟವರು. ಅನೇಕ ನಾಟಕಗಳನ್ನು ತಾವೇ ಬರೆದುದಲ್ಲದೆ ಅವುಗಳಲ್ಲಿ ತಾವೂ ನಟಿಸಿದವರು. ಆಗಿನ ಪ್ರಪಂಚದ ಉತ್ತಮೋತ್ತಮ ನಟನಟಿಯರನ್ನು ಅವರು ನೋಡಿದವರು; ಅವರೊಡನೆ ಇದ್ದು, ನಡೆದು, ನುಡಿದು ಕಲಿತವರು. ‘ಇಂತಹವರ ಸಂಗವು ನನ್ನ ಸುಕೃತವಲ್ಲದೆ ಇನ್ನೇನು!’ ಎಂದು ಭಾವಿಸಿದೆ.

ಕೈಲಾಸಂಗೆ ಹಳ್ಳಿಯವರ ಹಾಡು, ಕುಣಿತ, ನಾಟಕ ಎಂದರೂ ಇಂತೆಯೇ ಅಭಿಮಾನ. ಒಂದು ದಿನ ತುಳಸೀ ತೋಟದ ನಾಟಕ ಮಂದಿರದಲ್ಲಿ ಯಾವುದೋ ತುಮಕೂರು ಕಂಪೆನಿಯವರ ‘ರಾಮಾಂಜನೇಯ ಯುದ್ಧ’ವೆಂಬ ನಾಟಕವಿತ್ತು. Railway Stationನ ಆಗಿನ Spencer's ಇಂದ ಬರುವ ದಾರಿಯಲ್ಲಿ ಮೆಟ್ಟಿಲು ಇಳಿದು, ತುಳಸೀ ತೋಟದ ಮುಂದೆ ಬಂದಾಗ ಅಲ್ಲಿ ನಾಟಕ ನಡೆಯುತ್ತಿತ್ತು. ಮತ್ತೆ ಕೆರೆಯ ಕಟ್ಟೆಯ ಮೇಲೆ ಕುಳಿತು, ಸ್ವಲ್ಪ ಕಾಲ ಅದು ಇದು ಮಾತಾಡಿ, ನಾಟಕ ಮಂದಿರದ ಬಳಿ ಮತ್ತೆ ಬಂದಾಗ ರಾತ್ರಿ ಹನ್ನೊಂದು ಗಂಟೆಯಾಗಿ ಹೋಗಿತ್ತು.

‘‘ನಾಟಕ ನೋಡೋಣವೆ?’’ ಅಂದರು ಕೈಲಾಸಂ.

‘‘ಯಾವುದೋ ಹಳ್ಳಿ ಕಂಪೆನಿ ಇರಬೇಕು, ಸರ್. ಜನಗಳೂ ಹೆಚ್ಚು ಬಂದಿಲ್ಲ. ನಾಟ್ಕ ಷುರು ಆಗಿ ಎಷ್ಟೋ ಹೊತ್ತಾಗಿದೆ. ನೆಟ್ಟಗೆ ಮನೆಗೇ ಹೋಗೋಣ’’ ಎಂದೆ.

‘‘ಇರು ವೆಂಕಟೇಶ್. Can't we still enjoy it? ಚೆನ್ನಾಗಿ ಹಾಡೋರೂ ಇರಬಹುದು. ವರದಾಚಾರಿ ಕಂಪೆನಿ ಮಟ್ಟುಗಳಿಗಿಂತ ಈ ಚಿಕ್ಕ ಕಂಪೆನಿ ಹಾಡುಗಳು ಎಷ್ಟೋ ಚೆನ್ನಾಗಿರುತ್ವೆ. ಇದು ಕೇಳು, ಎಷ್ಟು ಚೆನ್ನಾಗಿದೆ ಈ ಮಟ್ಟು!’’ ಎಂದು ಹಾಡುವುದಕ್ಕೆ ಷುರು ಮಾಡಿದರು: ‘‘ಎಳೆಯ ತಾವರೆಯಂತೆ ಪೊಳೆವ ನಿನ್ನಾಸ್ಯದ ಚೆಲುವೆಗೆ ಮರುಳಾದೆ ...! ನೋಡು: ಆ Simple composition, how very lovely and, that lift!’’ ಎಂದರು.

‘‘ಚೆನ್ನಾಗಿದೆ, ಸರ್. ಈಗೇನು, ಹೋಗಿ ನೋಡಬೇಕೂಂತಿದ್ರೆ, ನೋಡಿಯೇ ಬಿಡೋಣ’’ ಎಂದು ಹೇಳುತ್ತ, ಕೈಲಾಸಂ ಅವರ ಜೊತೆಯಲ್ಲಿ ticket officeಗೆ ಬಂದೆ. ಜೇಬಿನಿಂದ purse ತೆಗೆದು, ‘‘ಸರ್, ನನ್ನ ಹತ್ತಿರ ಇರೋದು three rupees and five annas. One eight clasಗೆ ಮಾತ್ರ ಟಿಕೆಟ್ ತಗೋಬಹುದು.’’

ಕೈಲಾಸಂ ‘‘Here, give me eight annas’’ ಎಂದು ನನ್ನ ಕೈಯಿಂದ ಎಂಟಾಣೆ ಇಸುಕೊಂಡು, ‘‘ಎರಡು ಟಿಕೆಟ್ ಕೊಡಿ, ಸಾರ್.’’ ಎಂದು ಕಿಟಕಿಯಲ್ಲಿ ಎಂಟಾಣೆ ಕೊಟ್ಟು, ನಾಲ್ಕು ನಾಲ್ಕಾಣೆಯ ಎರಡು ಟಿಕೆಟ್ ತೆಗೆದುಕೊಂಡರು.

ನಾನು: ‘‘ಏನ್ ಸಾರ್! ಅಲ್ಲಿ ಹ್ಯಾಗೆ ಕೂತ್ಕೊಳ್ಳೋದು? ಈಚಲು ಚಾಪೆ ಕೂಡ ಹಾಸಿರೋಲ್ಲ. ಬರೀ ಮಣ್ಣಿನ ನೆಲ. ಸಾರಿಸಿದ್ದು ಕೂಡ ಅಲ್ಲ. ಅಲ್ಲೇ ಎಲೆ ಅಡಿಕೆ ಹಾಕ್ಕೊಂಡು ಉಗಿದಿರ್ತಾರೆ. ಸಾಲದ್ದಕ್ಕೆ ಎಂಜಲು ಬೀಡಿಗಳು. ಏನೇನೋ ಅಸಹ್ಯ. ಹ್ಯಾಗೆ, ಸಾರ್?’’

ಕೈಲಾಸಂ: ‘‘ನಾಟ್ಕ ಚೆನ್ನಾಗಿದ್ರೆ, ನಾಳೆ

ನಾಲ್ಕು ರೂಪಾಯಿ ಕ್ಲಾಸ್ಗೇ ಹೋಗೋಣ. Notice ಮಾಡೋಕೆ ನಾಲ್ಕಾಣೆ class ಏ best ಮಗು Come on, dear boy, ನಿನ್ನ ಪಂಚೆ ಕೊಳೆ ಆಗದ ಹಾಗೆ ನನ್ನ over-coat ಹಾಸ್ತೇನೆ. We will certainly enjoy the Play."

ಒಳಗೆ ಹೋಗಿ ಕೂತೆವು. ನಾನು ಅದುವರೆಗೆ ನಾಲ್ಕಾಣೆ ಕ್ಲಾಸಿನಲ್ಲಿ ಕುಳಿತು ನಾಟಕ ನೋಡಿದವನೇ ಅಲ್ಲ. ಜನ ಅಷ್ಟೇನೂ ಹೆಚ್ಚಾಗಿರಲಿಲ್ಲ. ಆ ನಾಲ್ಕಾಣೆ ಕ್ಲಾಸಂತೂ ಯಥಾ - ನಾನು ಹೇಳಿದ ಹಾಗೇ ಇತ್ತು. ಕುಳಿತುಕೊಳ್ಳಬೇಕೆಂದಿದ್ದ ಸ್ಥಳದ ಕಶ್ಮಲವನ್ನು ಕೈವಸ್ತ್ರದಿಂದ ಸ್ವಲ್ಪ ಗುಡಿಸಿದಂತೆ ಮಾಡಿದೆ. "ಅಲ್ಲ್ರೀ! ಯಾರ್ರೀ ನೀವು? ಧೂಳ್ಯಾಕ್ರಿ ಎಬ್ಬಿಸ್ತೀರಿ?" ಎಂದು ಯಾರೋ ಅಂದರು. ಅಷ್ಟರಲ್ಲಿ ನನ್ನ ಪಕ್ಕದಲ್ಲಿ ಕೂತವರೊಬ್ಬರು ಎಲೆ ಅಡಿಕೆ ಹೊಗೆಸೊಪ್ಪು ಅಗಿಯುತ್ತಿದ್ದ

ನಾಟಕವನ್ನು ಆಡುತ್ತಿದ್ದಾಗ, ಕೈಲಾಸಂ ಆತ Kismet ಎಂಬ ಉರ್ದು ಪದವನ್ನು ಸರಿಯಾಗಿ ಉಚ್ಚರಿಸದಿದ್ದುದನ್ನು ಗಮನಿಸಿ, ಆ ಪದವನ್ನು ಹೀಗೇ ಉಚ್ಚರಿಸಬೇಕು ಎಂದು ಆತನಿಗೆ ಒಂದು ಪತ್ರ ಬರೆದರಂತೆ. ಆಗ ಆತ ಇವರನ್ನು ತನ್ನ ಹೋಟಲಿಗೆ ಬರಮಾಡಿಕೊಂಡು ಇವರೊಡನೆ ಮಾತುಕತೆಯಾಡಿ, ಅದೇ ನಾಟಕದಲ್ಲಿ ತಾನು ಬಳಸುತ್ತಿದ್ದ ಇನ್ನೂ ಅನೇಕ ಪದಗಳ ಸರಿಯಾದ ಉಚ್ಚಾರವನ್ನು ಕೇಳಿ ತಿಳಿದುಕೊಂಡು, ಕೈಲಾಸಂಗೆ ಔತಣವಿಟ್ಟು, ಮಾರನೆಯ ದಿನ ಅದೇ ನಾಟಕಕ್ಕೆ ಒಂದು Complementary pass ಕೊಟ್ಟು, Next to King's Boxನಲ್ಲಿ ಕರೆದು ಕೂಡಿಸಿ ಉಪಚರಿಸಿದ್ದನಂತೆ!

ಅದೇ ಕೈಲಾಸಂ ಈಗ ಥೇಟ್ ನಾಲ್ಕಾಣೆ ಪ್ರಭುವಿನಂತೆ- ಉಡುಪಿನಲ್ಲೂ ಮಾತಿನಲ್ಲೂ

**ಕೈಲಾಸಂ ಸ್ಮರಣೆ:**
**ಟಿ.ಪಿ. ಕೈಲಾಸಂ ಅವರಂತಹ ಮಹಾನ್ ಲೇಖಕರ ಕುರಿತು ಒಂದು ಸ್ಮರಣೀಯ ಪುಸ್ತಕ. ಅದರ ಕರ್ತೃ ಮತ್ತೊಬ್ಬ ಶಕ್ತ ಬರಹಗಾರರಾದ ಕೆ.ಎ. ಅಯ್ಯರ್. ಕೃತಿಗೆ ತಿಲಕವಿಟ್ಟಂತೆ ಡಿ.ವಿ.ಜಿ.ಯವರ ಮುನ್ನುಡಿ. ಈ ಪುಸ್ತಕದ ಆಯ್ದ ಪುಟಗಳನ್ನು ಕಸ್ತೂರಿಯ ಓದುಗರ ಅವಲೋಕನಕ್ಕಾಗಿ ಒದಗಿಸುತ್ತಿದ್ದೇವೆ.**

ವರು, ಹಿಂದಕ್ಕೆ ತಿರುಗಿ ಖಾಲಿ ಜಾಗ ಇದ್ದ ಕಡೆ ಎಂಜಲನ್ನು ಪಿಚಕಾರಿಯಿಂದ ಹೊಡೆದ ಹಾಗೆ ದೂರಕ್ಕೆ ತುಪ್ಪಿ "ಧೂಳ್ಯಾಕ್ರಿ ಎಬ್ಬಿಸ್ತೀರಿ? ಆ ವಸ್ತ್ರಾನ ಹಾಸ್ಕೊಂಡು ಹಂಗೇ ಕುಂತ್ಕೊಂಬುಡಿ" ಅಂದರು. ಕೈಲಾಸಂ, ನನ್ನ ಎಡಭಾಗದಲ್ಲಿ, ಕುತ್ತಿಗೆಯಲ್ಲಿದ್ದ ಚಾಕ್‌ಲೆಟ್ ಬಣ್ಣದ muffler ಅನ್ನು ತಮ್ಮ ತಲೆಗೆ ಸುತ್ತಿ, ಕಂಬಳಿಯ ಹಾಗಿದ್ದ over-coat ಅನ್ನು ಕೆಳಕ್ಕೆ ಹಾಸಿಕೊಂಡು, ಒಂದು ಬೀಡಾ ಅಗಿಯುತ್ತ ನಡುವೆ ಸಿಗರೇಟ್ ಹಚ್ಚಿ ಸೇದುತ್ತ, ಇವರೂ ಥೇಟ್ ನಾಲ್ಕಾಣೆ ಪ್ರಭುಗಳಂತೆಯೇ ಕುಳಿತರು.

ಹಿಂದೆ London ಪಟ್ಟಣದಲ್ಲಿ 'ಆಟಿಸ್ ಸ್ಕಿನ್ನರ್' ಎಂಬ ಮಹಾ ನಟ, KISMET ಎಂಬ

ಯಥಾವತ್ತಾಗಿ-ಹಳ್ಳಿಯ ನಾಟಕವನ್ನು ಅವಲೋಕಿಸುತ್ತಾ, ಧೂಳಿನಲ್ಲೂ ಕೊಳೆಯಲ್ಲೂ ಕುಳಿತಿದ್ದಾರೆ. ಇನ್ನು ನನಗೇತರ ಮನಃಕ್ಲೇಶ? ಇಲ್ಲದ ಸ್ಥಾನ ಮಾನ, ಗೌರವಗಳನ್ನು ಭ್ರಮಿಸಿಕೊಳ್ಳುವುದು ಸರಿಯಲ್ಲ. ಎಂದುಕೊಂಡು, 'democrcay ಎಂದು ದೊಡ್ಡದಾಗಿ ಮಾತನಾಡುವುದಕ್ಕಿಂತ ಅದರಲ್ಲಿದ್ದು ನಡೆದು ಬಾಳುವುದೇ ದೊಡ್ಡತನ' ಎಂದು ನನ್ನ ಗರ್ವಕ್ಕೆ ನಾನೇ ನಾಚಿಕೆಪಟ್ಟುಕೊಂಡು, ನಾಟಕ ನೋಡುತ್ತಾ ಕುಳಿತೆ.

ಆ ತುಳಸೀ ತೋಟದ ನಾಟಕ ಮಂದಿರವಂತೂ (ಯಾವ ಯುಗದ್ದೊ!) ಮಾನವನ ಮೂಲ ಪುರುಷರು ತಮ್ಮ ಆದಿಯ ಆವಾಸವಾದ ಗುಹೆಗಹ್ವರಾದಿಗಳನ್ನು ಬಿಟ್ಟು ಆಗ ತಾನೇ

ಬೊಂಬು, ಬಿದಿರು, ಹುಲ್ಲು, ಸೋಗೆ ಮುಂತಾದುವನ್ನು ಬಳಸಿಕೊಂಡು ಮನೆ ಕಲ್ಪಿಸಿಕೊಂಡ ಕಾಲದಲ್ಲಿ ಕಟ್ಟಿದ್ದಿರಬೇಕು. ಅಥವಾ, ಅದಕ್ಕಿಂತ ಸ್ವಲ್ಪ ಅನಂತರ, ಎಂದರೆ ಮಣ್ಣು ಗೋಡೆ, ಕಲ್ಲು ಕೂಚ, ಬಿದಿರು ಸೂರು, ನಾಡ ಹೆಂಚು ಇವುಗಳ ಪ್ರಾಬಲ್ಯದ ಕಾಲದಲ್ಲಿ ಕಟ್ಟಿದ್ದಿರಬೇಕು. ಆ ಕಟ್ಟಡದ ಸೂರಿನಿಂದ, ಕೆಳಗೆ ಕುಳಿತಿದ್ದ ಪ್ರೇಕ್ಷಕರ ಮೈಯ ಮೇಲೂ ತಲೆಯ ಮೇಲೂ ಕಂಬಳಿಹುಳುಗಳು ತಪತಪನೆ ಉದುರುತ್ತಿದ್ದುವು. ಎಲ್ಲರೂ ತಲೆ ಮೈ ಕೈ ಕೆರೆದುಕೊಳ್ಳುತ್ತಿದ್ದವರೇ. ಆಗ September ತಿಂಗಳು.

ಕೈಲಾಸಂ ಕುಳಿತಿದ್ದ ಕಡೆಯಿಂದ ರಂಗಸ್ಥಳ ಸರಿಯಾಗಿ ಕಾಣಬರುತ್ತಿರಲಿಲ್ಲ. ಅವರಿಗೂ ರಂಗಸ್ಥಳಕ್ಕೂ ನಡುವೆ, ಮರೆಯಾಗಿ, ಯಾವನೋ ಪ್ರೇಕ್ಷಕ ಒಂದು ಕರಿಯ ಕಂಬಳಿಯನ್ನು ಹೊದೆದುಕೊಂಡು, ನಿಂತೇ ನಾಟಕವನ್ನು ನೋಡುತ್ತಿದ್ದ. ಇತರರು ''ಅಯ್ಯಾ, ಕುಂತುಕೊಳ್ಳಯ್ಯಾ ನಿನ್ನ ಹಾಗೆ ನಾವೂ ದುಡ್ಡು ಕೊಟ್ಟು ಬಂದವರಲ್ವಾ? ನಾವೂ ನೋಡಬೇಡವೆ? ನಿಂತುಕೊಂಡು ನೋಡಬೇಕಾದರೆ, ಹಿಂದಿನ ಗೋಡೆಗೆ ಹೋಗಿ ಒರಗಿ ನಿಂತುಕೊ. ಕೂತುಕೊಳ್ಳಯ್ಯಾ'' ಎಂದು ಎಷ್ಟೋ ವಿನಯವಾಗಿ ಕೇಳಿಕೊಂಡರು. ಅವರ ಮಾತುಗಳನ್ನು ಆತ ಲಕ್ಷ್ಯಸಲೇ ಇಲ್ಲ. ಆಮೇಲೆ ಒತ್ತಾಯ ಮಾಡಿದರು, ಕೋಪಿಸಿಕೊಂಡರು; ಯಾವುದಕ್ಕೂ ಅವನು ಕಿವಿ ಕೊಡಲಿಲ್ಲ. ''ಈ ಕಡೆ ಬನ್ನಿ, ಸಾರ್. ಇಲ್ಲಿ ಚೆನ್ನಾಗಿ ಕಾಣುತ್ತೆ'' ಅಂತ ನಾನು ಕೈಲಾಸಂ ಅನ್ನ ಕರೆದೆ. ಕೈಲಾಸಂ '' ಆ ಕಂಬಳಿ ಹೊದೆದ ಮನುಷ್ಯ, ಇಷ್ಟು ಜನ ಕೇಳುತ್ತಿದ್ದರೂ ಕೂತುಕೊಳ್ಳಲೇ ಇಲ್ಲವಲ್ಲ! ಇವನ್ನ ಏನಾದರೂ ಮಾಡಿ ಕೂರಿಸಲೇಬೇಕು'' ಅಂತ ಬಹಳ ಹೊತ್ತಿನಿಂದಲೂ ಹೊಂಚು ಹಾಕುತ್ತಿದ್ದರೆಂದು ಕಾಣುತ್ತದೆ. ತಮ್ಮ ಧ್ವನಿಯನ್ನು ಗೊಗ್ಗರ ಮಾಡಿಕೊಂಡು, 'ಗೂಂಡರ ಗೂಂಡ' ಕೂಗಿದ ಹಾಗೆ ''ಕೂತ್ಕೊಳ್ಳೋಲೇ ಕಬ್ಬೀವುಳ!'' ಎಂದು ಒಂದು ಸಾರಿ ಕಿರಿಲಿದರು. ಬೇರೆ ಯಾರ, ಯಾವ, ಒಳ್ಳೆಯ ಮಾತಿಗೂ ಕಿವಿಗೊಡದೆ ನಿಂತಿದ್ದವನು ಈ ಮಾತು ಕಿವಿಗೆ ಬಿತ್ತೋ ಇಲ್ಲವೋ, ತಪಕ್ಕನೆ ಕುಸಿದು ಕುಳಿತುಬಿಟ್ಟ! ಆಗ ಅಲ್ಲಿ ಯಾರೋ ಪಕ್ಕದಲ್ಲಿ ಕುಳಿತಿದ್ದವರು ''ಅಂಗೇಳ್ಬೇಕು ಇವರಿಗೆ. ಒಳ್ಳೇ ಮಾತಿನಾಗ್ ಯೋಳಿದ್ರೆ ತಿಳ್ಯಾಕೇ ಇಲ್ಲ. ಚಂಬಾರ್ನ ದೇವ್ರು ಚಪ್ಪಲ್ಕ ಪೂಜಾ!'' ಅಂದರು. ಕಂಬಳಿ ಹೊದ್ದಿದ್ದವನಿಗೆ 'ಏಕ್‌ದಂ' ಸಿಟ್ಟು ಬಂತು. ''ಯಾವ್ ನನ್ ಮಗನೋ ನನ್ನ ಚಂಬಾರ ಅಂದದ್ದೂ?'' ಅಂತ ಹೇಳಿದವನ ಮೇಲೆ ಧಾವಿಸಿದ. ಗಲಭೆಗೆ ಷುರು ಆಯಿತು. ರಂಗಸ್ಥಳದ ಮೇಲೆ ಯುದ್ಧಕ್ಕೆ ತಯಾರಾಗಿದ್ದ ಶ್ರೀ ರಾಮಾಂಜನೇಯರು ಕೂಡ ನಮ್ಮ ನಾಲ್ಕಾಣೆ ಕ್ಲಾಸಿನಲ್ಲಿ ಆಗುತ್ತಿದ್ದ ಯುದ್ಧದ ಕಡೆಯೇ ನೋಡತೊಡಗಿದರು. ಪೋಲೀಸಿನವನೊಬ್ಬ ಕೈಯಲ್ಲಿ ಬೆತ್ತ ಹಿಡಿದು ಬಂದು, ''ಕೂತುಕೊಳ್ಳಿ! ಕೂತುಕೊಳ್ಳಿ!'' ಎಂದು ಗದ್ದರಿಸಿದ. ಜನ ಲೆಕ್ಕಿಸಲಿಲ್ಲ. ಕೈಲಾಸಂ, ಈ ಗಲಾಟೆಯ ನಡುವೆ, ಒಂದು ಸಿಗರೆಟ್ ಹಚ್ಚಿ, Smoke ring ಬಿಡುತ್ತ ಆನಂದವಾಗಿ ಕುಳಿತಿದ್ದರು. ನನಗೋ, ''ಯಾಕಪ್ಪಾ ಬಂದ್ವಿ ಈ ಹಾಳು ನಾಟ್ಕಕ್ಕೆ? ಬಯಾಸ್ಕೋಪಿಗಾದರೂ ಹೋಗಬಹುದಾಗಿತ್ತಲ್ಲ!'' ಎನಿಸಿತು. ಗಲಭೆ ಹೆಚ್ಚಿತು; ಡ್ಯೂಟಿ ಮೇಲಿದ್ದು ನಾಟಕ ನೋಡುತ್ತಿದ್ದ ಪೋಲೀಸ್ ಇನ್ಸ್‌ಪೆಕ್ಟರೂ ಇನ್ನೊಬ್ಬ ಕಾನ್ಸ್‌ಟೇಬಲೂ ನಾಲ್ಕಾಣೆ ಕ್ಲಾಸಿಗೆ ನುಗ್ಗಿ ಬಂದು, ಕೈಬೆತ್ತದಿಂದ ಪಟಪಟನೇ ಹತ್ತಾರು ಜನರ ತಲೆಯ ಮೇಲೆ, ಮೈಮೇಲೆ ಬಿಗಿದರು. ಸದ್ಯ, ನಮ್ಮ ಹತ್ತಿರದವರೆಗೂ ಏಟು ಏಕೆ ಬರಲಿಲ್ವೊ ಕಾಣೆ. ಸ್ವಲ್ಪ ಹೊತ್ತಿನಲ್ಲೇ ಗಲಭೆ ಅಡಗಿತು.

ನಾನು ಕೈಲಾಸಂ ಅನ್ನು ಕೇಳಿಕೊಂಡೆ: ''ಸಾರ್, ಇನ್ನು ಮನೆಗೆ ಹೋಗೋಣ'' ಅಂತ. ಅವರೆಂದರು: ''ತಾಳು, ಮಗು. ಆ ರಾಮನ ಪಾರ್ಟು ಮಾಡಿದಾನಲ್ಲ, ಆ 'ಕಾಲಾ ಬಿಲ್ಲಿ', ಅವನು ಚೆನ್ನಾಗಿ ಹಾಡ್ತಾನಂತೆ. ಕೇಳ್ಬಿಟ್ಟು ಹೋಗೋಣ.'' ನನಗೊ, ನಾಟಕವೂ, ಸನ್ನಿವೇಶವೂ, ಕುಳಿತುಕೊಂಡಿದ್ದ ಸ್ಥಳವೂ, ಒಂದಕ್ಕಿಂತ

ಒಂದು ಸರ್ವಾಸಹ್ಯವಾಗಿತ್ತು. ಕೈಲಾಸಂ ಮಾತ್ರ ಆನಂದವಾಗಿ ಕುಳಿತಿದ್ದರು. ಮೇಲಿನಿಂದ ಉದುರುತ್ತಿದ್ದ ಕಂಬಳಿ ಹುಳುಗಳ ಬಾಧೆಯನ್ನು ನೋಡುತ್ತಿರುವುದು ನನಗೆ ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ನನ್ನ ತಲೆಯ ಮೇಲೊಂದು ದೊಡ್ಡ ಹುಳು ಬಿತ್ತು. ನಾನು ಅದನ್ನು ತತ್‌ಕ್ಷಣ ಕೈಯಿಂದ ಕೊಡವಿದೆ. ಆ ರಭಸಕ್ಕೆ, ಆ ಹುಳ ಇನ್ನೊಬ್ಬರ ಕುತ್ತಿಗೆಯ ಮೇಲೆ ಹೋಗಿ ಬಿತ್ತು. ಆತ, ಅದು ಏನೆಂದುಕೊಂಡನೋ! ಆ ಹುಳುವನ್ನು ತನ್ನ ಅಂಗೈಯಿಂದ ಕುತ್ತಿಗೆಯ ಮೇಲೆ ಚೆನ್ನಾಗಿ ತಿಕ್ಕಿ ಕೊಂಡುಬಿಟ್ಟ. ಹುಳು ಚಟ್ನಿ ಆಗಿ ಹೋಯಿತು. ಆದರೆ, ಒಂದೆರಡು ನಿಮಿಷಗಳೊಳಗಾಗಿ ಅವನ ಕುತ್ತಿಗೆಯಲ್ಲಿ ಷುರುವಾಯಿತು ಉರಿ. ಕೆರೆದಷ್ಟೂ ಹೆಚ್ಚಾಯಿತು, ಉರಿ. ಪಕ್ಕದಲ್ಲಿದ್ದ ಒಬ್ಬಾತ ''ಅಲ್ರೀ! ಕಂಬ್ಳೀವುಳಾನ ಕುತ್ಗೇಗಾಕ್ರೀ ಅಂಗ್ ತಿಕ್ಕೊಂಡ್ರೀ? ಅದಕ್ಕೇ ಅಷ್ಟು ಉರಿ! ತಾಳ್ರಿ, ಕಂಬ್ಳೀಯಿಂದ ಚೆನ್ನಾಗಿ ಉಜ್ಜಿಬಿಟ್ರೆ, ಹೋಗುತ್ತೆ'' ಎಂದು ಆ ಕಂಬಳಿ ಹೊದೆದಿದ್ದವನ ಕಂಬಳಿಯ ಕೊನೆಯಿಂದ ಇವನ ಕುತ್ತಿಗೆಯನ್ನು ಚೆನ್ನಾಗಿ ರಕ್ತ ಬರುವವರೆಗೆ ಉಜ್ಜಿ ಬಿಟ್ಟ. ಆದರಿಂದ ಉಜ್ಜಿಸಿಕೊಂಡವನಿಗೆ ಉರಿ ಸಾವಿರ ಪಾಲು ಅಧಿಕವಾಯಿತು. ಕಂಬಳಿ ಹೊದೆದಿದ್ದ ಆ ಮನುಷ್ಯ ''ಯಾಕ್ರಿ! ಬಿಟ್ಟ್ರೆ ಸಿಕ್ಕೋಯ್ತೋ ನನ್ ಕಂಬ್ಳಿ?'' ಎಂದು ಜಗಳಕ್ಕೆ ಬಂದ. ಉಜ್ಜಿಸಿಕೊಂಡವನು ಉರಿಯನ್ನು ತಡೆಯಲಾರದೆ, ಲಬೋ .....! ಲಬೋಂತ !! ಬಾಯ್ ಬಾಯ್ ಬಡ್ಕೊಂಡು, ತಕಪಕ ಕುಣಿದಾಡಿಬಿಟ್ಟ. ಸಬ್ ಇನ್ಸ್‌ಪೆಕ್ಟರೂ ಕಾನ್ಸ್‌ಟೇಬಲುಗಳೂ ''ಏನೋ ಅನಾಹುತ ನಡೆದ್ಹೋಯ್ತು!'' ಅಂತ ಬೆತ್ತ ಹಿಡಿದುಕೊಂಡು ಬಂದು ನಾಲ್ಕು ನಾಲ್ಕು ಬಿಗಿದರು. ಜನರ ಸದ್ದೂ ಅಡಗಿತು. ಕಂಬಳಿ ಉಜ್ಜಿಸಿಕೊಂಡವನು ಇನ್ನೂ ಅರಚುತಾನೇ ಇದ್ದ. ಸಬ್ ಇನ್‌ಸ್ಪೆಕ್ಟರ್ ಅವನನ್ನು ಮೆಲ್ಲಗೆ ಹೊರಗೆ ಕರೆದುಕೊಂಡು ಹೊರಟುಹೋದ. ಗಲಭೆ ಕಡಿಮೆಯಾಯಿತು.

ಅದುವರೆಗೂ ಈ ನಾಲ್ಕಾಣೆ ಕ್ಲಾಸಿನಲ್ಲಿ ಆದ ನೈಜ ನಾಟಕದಿಂದ ಅಲ್ಲಿ ರಂಗಸ್ಥಳದ ಮೇಲೆ ನಿಂತಿದ್ದ ಶ್ರೀ ರಾಮಾಂಜನೇಯರ ವಾಗ್ಯುದ್ಧ ಮತ್ತೆ ಮೊದಲಾಯಿತು. ಯಾರೋ ಒಬ್ಬ ನಾಲ್ಕಾಣೆಯ ಪ್ರಭು ಗಟ್ಟಿಯಾಗಿ 'ಖಾಮೂಷ್!' ಎಂದು ಕೂಗಿದ. ಎಲ್ಲರೂ ತೆಪ್ಪಗಾದರು. ರಾಮಾಂಜನೇಯ ಯುದ್ಧ ಮುಂದುವರೆಯಿತು.



ಅಮ್ಮಾ! ಹೀಗೆ ಕೇಳ್ತಿದೀನಿ ಅಂತ ತಪ್ಪು ತಿಳಕೋಬೇಡಿ .... ನಾನು ತೆಗಿಯೋ ಪಿಕ್ಚರ್‌ನಲ್ಲಿ ಹೀರೋಯಿನ್ ಪಾತ್ರ ಮಾಡುತ್ತೀರಾ?

ಸುಗ್ರೀವ ವಿಭೀಷಣಾದಿಗಳು ನಡುವೆ ಬಂದು ಸಮಾಧಾನ ಮಾಡಿದರು. ಮೇಲಿನಿಂದ ಅಶರೀರ ವಾಣಿಯಾಯಿತು. ಆಂಜನೇಯನು ಶಾಂತನಾಗಿ, ಶ್ರೀರಾಮನನ್ನು ತನ್ನ ಸ್ವಾಮಿಯೆಂದರಿತು, ಬಹು ದುಃಖದಿಂದ ಶರಣು ಹೋದನು. ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ಸೀತಾಮಾತೆಯು ಗಗನದ ಕಡೆಗೆ ನೋಡಿ, ''ಆರ್ಯಪುತ್ರ, ದೇವತೆಗಳು ಮಹಾ ಸಂತೋಷದಿಂದ ಪುಷ್ಪವೃಷ್ಟಿಯನ್ನು ಕರೆಯುತ್ತಿರುವರು'' ಎಂದಳು.

ಅದನ್ನು ಕೇಳಿದ ನಾಲ್ಕಾಣೆ ಪ್ರಭುವೊಬ್ಬನಿಗೆ ಬಹಳ ಕೋಪ ಬಂದು ''ಪುಸ್ಪ ಅಂತೆ ಪುಸ್ಪ,

ಮೇಲಿಂದ ಜೀಳ್ತಿರೋದು ಕಂಬ್ಳಿವುಳ್ಗಳು ಕಾಣ್ರಿ! '' ಎಂದು ಗಟ್ಟಿಯಾಗಿ ಅರಚಿದ. ಅಷ್ಟು ಬಿಗುಮಾನದಿಂದ ನಡೆದ ಬಂದಿದ್ದ ನಾಟಕದ ವೈಖರಿಯೆಲ್ಲ ಆ ಒಂದೇ ಮಾತಿನಲ್ಲಿ ಹಾರಿಹೋಯಿತು. ಚಪ್ಪರದಲ್ಲಿದ್ದ ಜನರು ಮಾತ್ರವೇಕೆ, ಶ್ರೀ ಸೀತಾರಾಮ ಲಕ್ಷ್ಮಣ ಆಂಜನೇಯ ವಿಭೀಷಣ ಸುಗ್ರೀವಾದಿಗಳು ಕೂಡ 'ಹೋ' ಎಂದು ನಗತೊಡಗಿದರು! ಮಂಗಳ ಕೂಡ ಹಾಡದೆ ಪರದೆ ಬಿಟ್ಟುಬಿಟ್ಟರು. ಅಂತೂ ಆ ನಾಟಕವೇನೋ ನಮಗೆಲ್ಲಾ ಹೊಟ್ಟೆ ಹಿಡಿಸದಷ್ಟು ನಗುವುಂಟು ಮಾಡಿತು.

ಮನೆಗೆ ಹೋಗುತ್ತ, ದಾರೀಲೂ ಅದೇ ಹುಚ್ಚು ಹುಚ್ಚು ನಗು: ''ಪುಸ್ಪ ಅಂತೆ ಪುಸ್ಪ, ಮೇಲಿಂದ ಬೀಳ್ತಿರೋದು ಕಂಬ್ಳೀವುಳ್ಗಳು ಕಾಣ್ರೀ!'' ಆ ಮಾತನ್ನು ನೆನೆಸಿಕೊಂಡಷ್ಟೂ ನಗುವೇ.

ಕೈಲಾಸಂ ಹೇಳಿದರು: ''ನೋಡಿದ್ಯಾ, ವೆಂಕಟೇಶ್ would you have enjoyed this much in the one-eight class? ನಾಲ್ಕಾಣೆ ಕ್ಲಾಸು ನವರಸಿಕರು ಕೂಡೋ ಸ್ಥಳ. ಅವರು ಆಡೋ ಮಾತು, ಅವರು ನೋಡೋ ದೃಷ್ಟಿ, ಅವರು ಪಡೋ ಅಭಿಪ್ರಾಯ ಇವುಗಳಿಗೆ ಅವಕಾಶ ಕೊಟ್ರೇನೇ ನಾಟಕ ಬದುಕೋದು, ನಾಲ್ಕು ಕಾಸೂ ಸಿಕ್ಕೋದು ..... ನೀನು ಅಮೆಚೂರ್ ಕಂಪೆನಿ ನಾಟಕ, 'ತಪ್ಪೆವರಿದಿ' ನೋಡಿದೀಯ? ರಾಘವಾಚಾರ್ act ಮಾಡಿದ್ದು?''

ನಾನು: ''ಇಲ್ಲ, ಸರ್. 'ರಾಮದಾಸ್' ನೋಡಿದ್ದೇನೆ. ನಿಮ್ಮ 'ನಾ ಸಾಮಿ ನಾ ಪೈ ನೀಕು ದಯಲೇದೇ?' ಕೇಳಿದ್ದೇನೆ.''

ಕೈಲಾಸಂ: ''ಓ, ಅದೇ! ಆಮೇಲೆ ಅದನ್ನ Change ಮಾಡ್ಬಿಟ್ಟೆ. ನೀನು ನೋಡ್ಲಿಲ್ಲಾಂತ ಕಾಣುತ್ತೆ. ಅದು 'ಡ್ಯಾಂದಾಸ್' ಆಗ್ಹೋಯ್ತು, ಮಗು. ಭಜನೆ ಕೇಳಿಲ್ವೇ ನೀನು:

ಕಡುಪುನೊಪ್ಪಿಕಿ ಕಾಲು ದರ್‍ರಾಂ,
ಮುಕ್ಕುನೊಪ್ಪಿಕಿ ಮುಕ್ಕಾಲು ದರ್‍ರಾಂ;
ಒಳ್ಳುನೊಪ್ಪಿಕಿ ಒಕ್ಕ ದರ್‍ರಾಂ, ತಾಗೇವಾಳ್ಳಿಕಿ ಮಂಚಿದಿ ರ್‍ರಾಂ;
ರಾಮ ರಾಮ ಜಯ ರಾಜಾರಾಂ .....

ಅದಲ್ಲ ವೆಂಕಟೇಶ್, ನಾನು ಹೇಳ್ತಾ ಇದ್ದದ್ದು. 'ತಪ್ಪೆವರಿದಿ?' ನಾಟಕ. ನೋಡು, ಪಾಪ, ರಾಘವಾಚಾರ್ ಚೆನ್ನಾಗೇ ಮಾಡಿದ್ರು, ಆ ದಿವಸದ ನಾಟಕ. ಆದರೆ, ಚಿಲ್ರೆ ಪಾರ್ಟುಗಳು ತುಂಬ ಅಧ್ವಾನ್ನ ಮಾಡಿಬಿಟ್ವು. Lines ಏನು ಒಬ್ಬ್ರಿಗೂ ಸರಿಯಾಗಿ ಬರ್ತಿರ್‍ಲಿಲ್ಲಾ. ನಾಟಕ ಕಳೆ ಕಟ್ಲಿಲ್ಲ, ಕೆಟ್ಹೋಯ್ತು. ಕೊನೇಲಿ soliloquy ಒಂದು ಬರುತ್ತೆ, ರಾಘವಾಚಾರ್ರದು. ಎಲ್ಲಾ ಹೇಳಿ, ಕೊನೆಗೆ ಅವರು 'ಅಯ್ಯೋ .....! ತಪ್ಪೆವರಿದಿ? ತಪ್ಪೆವರಿದೀ?!' ಅಂದ್ರು. ನಾಲ್ಕಾಣೆ ಪ್ರಭುಗಳು ಸುಮ್ಮ ನಿರಬೇಕೋ ಬೇಡ್ವೋ, ಆ tragedyನ ನೋಡಿ, ಫಟ್ಯಾಗಿ 'ಮಾದಿರಾ, ರಾಘವಾ! ತಪ್ಪು ಮಾದಿರಾ, ಡಬ್ಬು ಇಚ್ಚಿನ ವಾಳ್ಳಿದಿರಾ!' ಅಂತ ಕೂಗೇಬಿಟ್ರು! ಹಾಳಾಗ್ಹೋಯ್ತು ನಾಟಕ! ಅದೇ ಕೊನೇನೂ ಆಗ್ಹೋಯ್ತು ಆ ನಾಟಕಕ್ಕೆ.''

ಮನೆ ಸೇರಿ ಮಲಗಿಕೊಂಡ ಮೇಲೂ ಆ ದಿನದ ನಾಟಕದ ನೆನಪೇ! ಆ ದಿನದ ಹುಚ್ಚು ನಗುವೇ ನಗು! ಕೈಲಾಸಂ ಹೇಳಿದ್ದು ನಿಜ: ನಾಲ್ಕಾಣೆ ಕ್ಲಾಸಿನವರು ನಿಜವಾಗಿಯೂ ರಸಿಕರು. ರೂಪಾಯಿ ತೆತ್ತು, ಮುಂದ್ಗಡೆ ಸೋಫಾದಲ್ಲಿ ಕುಳಿತು, ಬಿಂಕದಿಂದ ತಮ್ಮ ಅಂತಸ್ತಿನ ಬಿಗುಮಾನದಿಂದ, ಧರಿಸಿದ ಜರೀರುಮಾಲಿನ ಗೌರವಕ್ಕಾದರೂ ಬಿಮ್ಮನೆ ಕುಳಿತು ನಾಟಕ ನೋಡಿ ಹೋಗುವರಿಗಿಂತ ಇವರು ಎಷ್ಟೋ ವಾಸಿ. ಚೆನ್ನಾಗಿದ್ದರೆ, ಚೆನ್ನಾಗಿಯೇ ಪ್ರೋತ್ಸಾಹಿಸುತ್ತಾರೆ; ಇಲ್ಲದೆ ಹೋದರೆ, ತಲೆಯೆತ್ತದ ಹಾಗೆ ಮುಖಕ್ಕೆ ....ಳಿ ಹೋಗ್ತಾರೆ.

●

(ಕೆ. ಪಿ. ಅಯ್ಯರ್ ಅವರ 'ಕೈಲಾಸಂ ಸ್ಮರಣೆ' ಪುಸ್ತಕದಿಂದ ಆಯ್ದ ಲೇಖನ)




ಪುಸ್ತಕ ವಿಭಾಗ
ಉರುಳಿನ ನೆರಳಿನಲ್ಲಿ




ಸಂಕ್ಷಿಪ್ತ ರೂಪ: ಉಮೇಶ ಕಾರಂತ

## ಪ್ರಿಯ ಓದುಗರೇ,

ಬರ್ಲಿನ್ ನಗರದ ನಾಝಿ ನ್ಯಾಯಾಲಯವೊಂದರಲ್ಲಿ ನನ್ನ ಪತಿ ಜ್ಯೂಲಿಯಸ್ ಫ್ಯೂಚಿಕ್‌ರಿಗೆ 1943 ಅಗಸ್ಟ 25ರಂದು ಮರಣ ದಂಡನೆ ವಿಧಿಸಲಾಯಿತು. ನನ್ನ ಪತಿಯ ಮುಂದಿನ ಗತಿ ಏನಾಯಿತೆಂಬ ಬಗೆಗೆ ನನ್ನನ್ನು ಕಾಡುತ್ತಿದ್ದ ಪ್ರಶ್ನೆಗಳು ಆ ಬಂದಿಖಾನೆಯ ಸುತ್ತಲಿನ ಎತ್ತರವಾದ ಗೋಡೆಗಳಿಂದ ಕೇವಲ ಮಾರ್ದನಿಗೊಂಡು ನನಗೇ ಮರಳುತ್ತಿದ್ದವು. ಹಿಟ್ಲರನ ಜರ್ಮನಿಯು 1945ರ ಮೇ ತಿಂಗಳಲ್ಲಿ ಸೋಲನ್ನೊಪ್ಪಿಕೊಳ್ಳಬೇಕಾಯಿತು. ಕೈದಿಗಳು ಬಿಡುಗಡೆಗೊಂಡರು. ಹಾಗೆ ಬದುಕಿ ಉಳಿದುಕೊಂಡವರಲ್ಲಿ ನಾನೂ ಒಬ್ಬಳಾಗಿದ್ದೆ. ವಿಮೋಚನೆ ಹೊಂದಿದ ನನ್ನ ತಾಯ್ನಾಡಿಗೆ ಹಿಂದಿರುಗಿದ ಮೇಲೆ ನಾನು ನನ್ನ ಪತಿಗಾಗಿ ಹುಡುಕಾಡಿದೆ. ನನ್ನ ಪತಿಗೆ ನಾಝಿ ನ್ಯಾಯಾಲಯ ಮರಣ ದಂಡನೆ ವಿಧಿಸಿ 14ನೇ ದಿನ-1943 ಸೆಪ್ಟೆಂಬರ 8ರಂದು ಗಲ್ಲಿಗೇರಿಸಲಾಗಿತ್ತೆಂದು ನಾನು ತಿಳಿದೆ. ಪ್ರಾಗ್‌ನಗರದ ಪ್ಯಾಂಕ್ರ್ಯಾಟ್ಸ್ ಸೆರೆಮನೆಯಲ್ಲಿದ್ದಾಗ ಜ್ಯೂ. ಫ್ಯೂಚಿಕ್ ಕೆಲವು ಟಿಪ್ಪಣಿಗಳನ್ನು ಬರೆದಿದ್ದರೆಂದು ಸಹ ನನಗೆ ಗೊತ್ತಾಯಿತು. ಎ. ಕೊಲಿನ್‌ಸ್ಕಿ ಎಂಬ ಚೆಕ್ ಸೆರೆಮನೆ ಕಾವಲುಗಾರ ಫ್ಯೂಚಿಕರವರ ಜೈಲುಕೋಣೆಗೆ ಕಾಗದ ಮತ್ತು ಸೀಸದ ಕಡ್ಡಿ ತಂದು ಕೊಟ್ಟು ಅವರು ಬರೆದಿಟ್ಟ ಕಾಗದದ ಹಾಳೆಗಳನ್ನು ಗುಟ್ಟಾಗಿ ಒಂದೊಂದಾಗಿಯೇ ಹೊರಗೆ ಸಾಗಿಸಿದ್ದನು. ಆ ಕಾವಲುಗಾರನನ್ನು ನಾನು ಸಂಧಿಸಿದೆ. ನನ್ನ ಪತಿ ಬರೆದಿದ್ದ ಟಿಪ್ಪಣಿಗಳನ್ನು ಸಂಗ್ರಹಿಸಿದೆ. ಕ್ರಮಾಂಕಗಳನ್ನು ಹೊಂದಿದ್ದ ಆ ಹಾಳೆಗಳು ವಿಶ್ವಸ್ಥರಾದ ಬೇರೆ ಬೇರೆ ಜನರಲ್ಲಿ ಅಡಗಿದ್ದು ಅವುಗಳು ನನಗೆ ದೊರೆತವು. ಅವುಗಳನ್ನು ಈ ಪುಸ್ತಕದಲ್ಲಿ ಓದುಗರಿಗೆ ಅರ್ಪಿಸಲಾಗಿದೆ. ಇದು ಜ್ಯೂಲಿಯಸ್ ಫ್ಯೂಚಿಕರವರ ಜೀವನದ ಕೊನೆಯ ಅಧ್ಯಾಯವಾಗಿದೆ. ಅವರ ಕಟ್ಟಕಡೆಯ ಕೃತಿಯಾಗಿದೆ.

● ಅಗಸ್ತಿನಾ ಫ್ಯೂಚಿಕ್

ಮೂಲ: ಜ್ಯೂಲಿಯಸ್ ಫ್ಯೂಚಿಕ್
ಕನ್ನಡಕ್ಕೆ: ವಾಸುದೇವ
ಪ್ರಕಾಶನ: ನವಕರ್ನಾಟಕ ಪಬ್ಲಿಕೇಶನ್ಸ್ ಪ್ರೈ.ಲಿ. ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್, ಪೂರ್ವ ಬೆಂಗಳೂರು - 560 001 ಬೆಲೆ: ರೂ.9=00 ಪುಟ: 158

**ಇಪ್ಪತ್ತನಾಲ್ಕು ಗಂಟೆಗಳು:**

**ಹ**ತ್ತು ಗಂಟೆ ಹೊಡೆಯಲು ಇನ್ನೇನು ಐದು ನಿಮಿಷಗಳಿವೆ. 1942ರ ಎಪ್ರಿಲ್ 24, ವಸಂತಕಾಲದ ಸುಂದರ ಹಿತಕರ ಸಂಜೆ. ನಾನು ಮುದುಕನೊಬ್ಬನಂತೆ ನಟಿಸಿಕೊಂಡು ಕುಂಟುತ್ತಾ ಆದಷ್ಟು ಬೇಗ ಬೇಗನೇ ನಡೆಯುತ್ತಿದ್ದೇನೆ. ರಾತ್ರಿ ಹತ್ತು ಗಂಟೆಗೆ ಕರ್ಫ್ಯೂ ಜಾರಿಗೆ ಬಂದ ಬಳಿಕ ಕಟ್ಟಡದ ಬಾಗಿಲನ್ನು ಮುಚ್ಚುವುದರಿಂದ ಅದಕ್ಕಿಂತ ಮುಂಚೆಯೇ ಜೆಲಿನಿಕ್ ಪರಿವಾರವನ್ನು ಕೂಡಿಕೊಳ್ಳುವುದು ನನ್ನ ಉದ್ದೇಶ. ನನ್ನ ಆಪ್ತ ಸಂಗಾತಿ ಮಿರೆಕ್ ನನಗಾಗಿ ಅಲ್ಲಿ ಕಾಯುತ್ತಿದ್ದಾನೆ. ಅವರು ನನ್ನನ್ನು ಚಹಾ ನೀಡಿ ಸ್ವಾಗತಿಸಿದರು. ಮಿರೆಕ್ ಅಲ್ಲೇ ಇದ್ದಾನೆ. ಫ್ರೀಡ್ ದಂಪತಿಗಳೂ ಅಲ್ಲಿದ್ದಾರೆ. ಆದರೆ, ಇದು ಒಂದು ಅನಾವಶ್ಯಕವಾದ ಅಪಾಯವಾಗಬಲ್ಲದು. ''ನನಗೆ ನಿಮ್ಮನ್ನು ಕಾಣಬೇಕೆಂಬ ಬಯಕೆ ಖಂಡಿತಾ ಇದೆ. ಆದರೆ ಈ ರೀತಿ ಜೊತೆಯಾಗಿ ಕುಳಿತಿರುವುದು ಒಳ್ಳೆಯದಲ್ಲ. ಒಂದೇ ಕಾಲಕ್ಕೆ ಕೋಣೆಯೊಂದರಲ್ಲಿ ಇಷ್ಟು ಜನ ಸೇರಿದರೆ ಕಾರಾಗೃಹ ಸೇರುವುದಕ್ಕೂ, ಸಾವನ್ನು ಆಹ್ವಾನಿಸುವುದಕ್ಕೂ ಅತಿ ಸುಲಭದ ದಾರಿಯಾಗುತ್ತದೆ. ನೀವು ಒಂದೋ ಪಿತೂರಿಯ ನಿಯಮಗಳಿಗೆ ಬದ್ಧರಾಗಿರಬೇಕು, ಅಥವಾ ನಮ್ಮೊಂದಿಗೆ ದುಡಿಯುವುದನ್ನು ಬಿಡಬೇಕು. ಏಕೆಂದರೆ ಹೀಗೆ ಮಾಡುವುದರಿಂದ ನೀವು ಸ್ವತಃ ಅಪಾಯಕ್ಕೆ ಒಳಗಾಗುತ್ತೀರಿ ಮಾತ್ರವಲ್ಲ ಇತರರಿಗೂ ಅಪಾಯವನ್ನು ತಂದೊಡ್ಡುತ್ತೀರಿ. ನಾನು ಹೇಳಿದ್ದು ಅರ್ಥವಾಯಿತೆ?''

''ಹೌದು. ಅರ್ಥವಾಯಿತು.''

''ನನಗಾಗಿ ಏನನ್ನು ತಂದಿದ್ದೀರಿ?''

''ಕೆಂಪು ಹಕ್ಕುಗಳು ಪತ್ರಿಕೆಯ ಮೇ ದಿನದ ಸಂಚಿಕೆಗೆ ಸಿದ್ಧಪ್ರತಿಯನ್ನು ತಂದಿದ್ದೇನೆ.''

''ತುಂಬಾ ಒಳ್ಳೆಯದಾಯಿತು. ಮಿರೆಕ್, ನೀನೇನು ತಂದಿದ್ದೀ?''

''ಹೊಸದೇನೂ ಇಲ್ಲ. ಕೆಲಸ ಸಲೀಸಾಗಿ ನಡೀತಾ ಇದೆ.''

ಯಾರೋ ಬಾಗಿಲು ಬಡಿದಂತಾಯಿತು.

''ಬಾಗಿಲು ತೆರೆಯಿರಿ! ನಾವು ಪೊಲೀಸರು ಬಂದಿದ್ದೇವೆ!''

ಬೇಗನೆ ಕಿಟಕಿಯಿಂದ ಹಾರಿ ತಪ್ಪಿಸಿಕೊಳ್ಳಿ. ನನ್ನ ಬಳಿ ಪಿಸ್ತೂಲಿದೆ. ನಾನು ಅವರನ್ನು ತಡೆಯುತ್ತೇನೆ. ಆದರೆ ಕಾಲ ಮೀರಿ ಹೋಯಿತು. ಗೆಸ್ಟಾಪೋ (ನಾಝಿ ಪಡೆಯ ಗುಪ್ತಚರ ವಿಭಾಗ) ಪಡೆಯ ಜನರು ಕಿಟಕಿಗಳ ಓಂದೆಯೂ ನಿಂತಿದ್ದಾರೆ. ತಮ್ಮ ಬಂದೂಕುಗಳನ್ನು ಕೋಣೆಯತ್ತ ನೆಟ್ಟಿದ್ದಾರೆ. ಗೂಢಚಾರರು ಬಾಗಿಲನ್ನು ಒಡೆದು ಅಡಿಗೆ ಮನೆಯ ಮೂಲಕ ಕೋಣೆಗೆ ಬಂದರು. ಒಂದು, ಎರಡು, ಮೂರು. ಬಿಟ್ಟು ಒಂಭತ್ತು ಜನ. ಅವರು ಒಳನುಗ್ಗಿದ ಬಾಗಿಲಿನ ಹಿಂದೆಯೇ ನಾನು ಅವಿತಿದ್ದುದರಿಂದ ಅವರ ಕಣ್ಣಿಗೆ ಬೀಳಲಿಲ್ಲ. ನಾನು ಅವರ ಬೆನ್ನ ಹಿಂದಿನಿಂದ ಅವರನ್ನೆಲ್ಲ ಸುಲಭವಾಗಿ ಗುಂಡಿಕ್ಕಿ ಕೊಲ್ಲಬಹುದಿತ್ತು. ಆದರೆ, ಅವರ ಒಂಭತ್ತೂ ಬಂದೂಕುಗಳು ಇಬ್ಬರು ಮಹಿಳೆಯರ ಕಡೆಗೂ ಮೂವರು ಅವಿವಾಹಿತ ಪುರುಷರ ಕಡೆಗೂ ಗುರಿಯಿಟ್ಟಿದ್ದವು. ನಾನೇನಾದರೂ ಗುಂಡು ಹಾರಿಸಿದರೆ ನನಗಿಂತಲೂ ಮೊದಲು ನನ್ನ ಐವರು ಮಿತ್ರರು ಪೊಲೀಸರ ಗುಂಡುಗಳಿಗೆ ಬಲಿಯಾಗುತ್ತಾರೆ. ನಾನು ಗುಂಡು ಹಾರಿಸಿಕೊಂಡು ಆತ್ಮಹತ್ಯೆ ಮಾಡಿಕೊಂಡರೂ ಕೂಡ ಆ ಐವರು ಮಿತ್ರರನ್ನು ಗುಂಡಿನ ದಾಳಿಯಿಂದ ಉಳಿಸುವುದು ಸಾಧ್ಯವಿಲ್ಲ. ನಾನು ಗುಂಡು ಹಾರಿಸದೇ ತೆಪ್ಪಗಿದ್ದರೆ ನನ್ನ ಮಿತ್ರರು ಆರು ತಿಂಗಳಿನಿಂದ ಒಂದು ವರ್ಷದವರೆಗೆ ಕಾರಾಗೃಹವಾಸ ಅನುಭವಿಸಬೇಕಾಗಬಹುದು. ನಂತರ ಕ್ರಾಂತಿ ನಡೆದು ಅವರನ್ನು ಜೀವ ಸಹಿತ ಬಿಡುಗಡೆ ಮಾಡಬಹುದು. ನಾನು ಮೂಲೆಯನ್ನು ತೊರೆದು ಹೊರಬಂದೆ.

''ಓ ಇನ್ನೊಬ್ಬನಿದ್ದಾನೆ!''

ಮೊದಲ ಹೊಡೆತ ನನ್ನ ಮುಖಕ್ಕೆ ಬಿತ್ತು. ಒಬ್ಬನನ್ನು ಉರುಳಿಸಬಲ್ಲಷ್ಟು ಬಲವಾದ ಹೊಡೆತ ಅದು.

''ಕೈಗಳನ್ನೆತ್ತು.''

ಮತ್ತೆರಡು ಹೊಡೆತಗಳು ಬಿದ್ದವು. ನಾನು ಕಲ್ಪಿಸಿದ ರೀತಿಯಲ್ಲೇ ಇದೆಲ್ಲಾ ನಡೆಯುತ್ತಿತ್ತು. ಇನ್ನಷ್ಟು ಒದೆಗಳೂ ಹೊಡೆತಗಳೂ ಬಿದ್ದವು. ಅವರು ನನ್ನನ್ನು ಒಂದು ಮೋಟಾರು ಗಾಡಿಯೊಳಕ್ಕೆ ಎಳೆದುಕೊಂಡು ಹೋದರು.

''ಯಾರು ನೀನು?''

''ಪ್ರಾಧ್ಯಾಪಕ ಹೊರಾಕ್.''

''ಸುಳ್ಳು ಹೇಳುತ್ತಿದ್ದೀಯ ನೀನು.''

ನಾನು ನನ್ನ ಭುಜ ಕುಣಿಸಿದೆ.

''ಅಲುಗಾಡದೆ ಕುಳಿತುಕೋ. ಇಲ್ಲವಾದಲ್ಲಿ ಗುಂಡು ಹಾರಿಸುತ್ತೇವೆ!''

''ಸರಿ ಹಾಗಾದರೆ ಗುಂಡು ಹಾರಿಸಿ.''

ಅದರ ಬದಲು ಅವರು ನನ್ನನ್ನು ಇನ್ನಷ್ಟು ಗುದ್ದಿದರು. ಬಂಧನಗಳ ವಿಭಾಗದ ಹೊಣೆ ಹೊತ್ತಿದ್ದ ನೀಳಕಾಯದ ಅಧಿಕಾರಿಯೊಬ್ಬ ರಿವಾಲ್ವರನ್ನು ತನ್ನ ಜೇಬಿನಲ್ಲಿರಿಸುತ್ತಾ ನನ್ನನ್ನು ತನ್ನ ಕಚೇರಿಗೆ ಕರೆದೊಯ್ದ. ಅವನು ನನ್ನ ಸಿಗರೇಟನ್ನು ಹೊತ್ತಿಸಿದ.

''ಯಾರು ನೀನು?''

''ಪ್ರಾಧ್ಯಾಪಕ ಹೊರಾಕ್.''

''ಸುಳ್ಳಾಡುತ್ತಿರುವೆ.''

ಅವನ ಕೈಯಲ್ಲಿದ್ದ ಗಡಿಯಾರ ಹನ್ನೊಂದು ಗಂಟೆ ತೋರಿಸುತ್ತಿತ್ತು.

''ಇವನನ್ನು ಜಪ್ತಿ ಮಾಡಿ.''

ಅವರು ನನ್ನ ವಸ್ತ್ರಗಳನ್ನು ಕಳಚಿ ಜಪ್ತಿ ಮಾಡಿದರು.

''ಅವನ ಬಳಿ ಗುರುತು ಚೀಟಿಯೊಂದಿದೆ.''

''ಹೆಸರೇನಿದ?''

''ಪ್ರಾಧ್ಯಾಪಕ ಹೊರಾಕ್''

''ಅದನ್ನು ಸರಿಯಾಗಿ ಪರಿಶೀಲಿಸಿ.''

''ಇದನ್ನು ನಿನಗೆ ಯಾರು ಕೊಟ್ಟರು?''

''ಪೊಲೀಸ್ ಕೇಂದ್ರ ಕಚೇರಿಯವರು.''

ಆಗ ಮೊದಲನೆಯ ಲಾಠಿ ಏಟು ಬಿತ್ತು. ಅದರ ಹಿಂದೆಯೇ ಎರಡನೆಯದು ..... ಮೂರನೆಯದು ...... ಅವುಗಳನ್ನು ನಾನು ಎಣಿಸುತ್ತ ಹೋಗಲೆ? ಬೇಡ ಮಗು, ಅಂತಹ ಲೆಕ್ಕಾಚಾರಗಳನ್ನು ನೀನು ಯಾರಿಗೂ ವರದಿ ಮಾಡಬೇಕಾಗಿಲ್ಲ.

ಓರ್ವ ಎಷ್ಟು ಏಟುಗಳನ್ನು ಸಹಿಸಿಕೊಳ್ಳಬಹುದು? ಮಧ್ಯರಾತ್ರಿಯಾಯಿತೆಂದು ರೇಡಿಯೋ ಗುನುಗುತ್ತದೆ. ನೀಳಕಾಯದ ಅಧಿಕಾರಿಯು ಮಂದಸ್ಮಿತನಾಗಿ ಕೋಣೆಯೊಳಕ್ಕೆ ಬಂದ.

''ನೋಡಯ್ಯ, ನಮಗೆ ಎಲ್ಲವೂ ತಿಳಿದಿದೆ. ಎಲ್ಲವನ್ನೂ ಹೇಳಿ ಬಿಡು, ವಿವೇಚನೆಯಿಂದ ವರ್ತಿಸು.''

ಅವರ ವಿಶೇಷ ನಿಘಂಟಿನಲ್ಲಿ 'ವಿವೇಚನೆ' ಎಂಬ ಪದಕ್ಕೆ 'ದ್ರೋಹ' ಎಂಬ ಅರ್ಥವಿದೆ.

ನಾನು ವಿವೇಚನೆಯಿಂದ ವರ್ತಿಸಲು ಸಾಧ್ಯವಿಲ್ಲ. ''ಅವನನ್ನು ಕಟ್ಟಿ ಹಾಕಿ, ಇನ್ನೂ ಸ್ವಲ್ಪ ಹೆಚ್ಚು ಏಟು ಹಾಕಿ.'' ಈಗ ನಾನು ಮತ್ತೆ ಹೊಡೆತಗಳನ್ನು ಎಣಿಸಲು ಸಾಧ್ಯವಾಗಿದೆ. ನಾನು ತುಟಿಗಳನ್ನು ಕಚ್ಚುತ್ತಿರುವ ಜಾಗದಲ್ಲಿ ಮಾತ್ರ ನನಗೆ ನೋವಿನ ಅರಿವಾಗುತ್ತಿದೆ. ರಕ್ತ ಸೋರುತ್ತಿರುವ ನನ್ನ ಒಸಡುಗಳನ್ನು ನನ್ನ ನಾಲಗೆಯು ಸವರಿತು. ಈಗ ಗಂಟೆ ಮೂರಾಗಿರಬೇಕು. ಉಪನಗರಗಳಲ್ಲಿ ಮುಂಜಾವು ಎದ್ದು ಬರುತ್ತಿದೆ.

ಅವರು ನನ್ನ ಪತ್ನಿಯನ್ನು ಒಳಕ್ಕೆ ಕರೆತಂದರು.

''ಇವನು ನಿನಗೆ ಗೊತ್ತೆ?''

ಆಕೆಗೆ ಕಾಣಿಸದಿರಲೆಂದು ನಾನು ನನ್ನ ಬಾಯಿಯ ಸುತ್ತಲೂ ಒಸರಿದ್ದ ರಕ್ತವನ್ನು ನುಂಗುತ್ತೇನೆ.

''ಇವನಾರೆಂದು ನಿನಗೆ ಗೊತ್ತೆ?''

''ಇಲ್ಲ, ನನಗೆ ಗೊತ್ತಿಲ್ಲ.''

ತನಗುಂಟಾಗಿದ್ದ ಭೀತಿಯನ್ನು ಪ್ರಕಟಿಸುವ ಒಂದಿಷ್ಟೂ ಚಿಹ್ನೆಯನ್ನು ತೋರಿಸದೆ ಆಕೆ ಅದನ್ನು ನುಡಿದಳು. ನನ್ನನ್ನು ಎಂದಿಗೂ ಗುರುತಿಸುವುದಿಲ್ಲ ಎಂಬ ವಚನವನ್ನು ಆಕೆ ಅಕ್ಷರಶಃ ಪಾಲಿಸಿದಳು. ಅವರು ಅವಳನ್ನು ಹೊರಗೊಯ್ದರು.

ಗಂಟೆ ನಾಲ್ಕಾಯಿತು. ಸಾವು ಬಹಳ ನಿಧಾನವಾಗಿ ಬರುತ್ತಿದೆ. ಅದನ್ನು ಸಂಧಿಸಲು ನಾನು. ಹೋಗಲೇ? ಆದರೆ ಹೇಗೆ? ನಾನು ಯಾರೋ ಒಬ್ಬನಿಗೆ ಮರು ಏಟು ಕೊಟ್ಟು ನೆಲಕ್ಕುರುಳಿಸಿದೆ. ಅವರು ನನ್ನನ್ನು ಒದೆಯಲಾರಂಭಿಸಿದರು.

ಐದು ಗಂಟೆ, ಆರು ಗಂಟೆ, ಏಳು, ಹತ್ತು. ಆಮೇಲೆ ಮಧ್ಯಾಹ್ನ ನನ್ನ ಮೇಲೆ ಮತ್ತಷ್ಟು ಹೊಡೆತಗಳು ಬೀಳುತ್ತವೆ, ನಂತರ ನನ್ನನ್ನು ಎಚ್ಚರಿಸುವುದಕ್ಕೋಸ್ಕರ ನನ್ನ ಮೇಲೆ ನೀರನ್ನು ಎರಚುತ್ತಾರೆ. ಮತ್ತೆ ಹೊಡೆತಗಳು, ಕೂಗಾಟಗಳು. ''ಹೇಳು! ಹೇಳು!'' ಆದರೆ ನಾನು ಇನ್ನೂ ಸಾಯುತ್ತಿಲ್ಲ. ಅಮ್ಮಾ, ಅಪ್ಪಾ ನನ್ನನ್ನು ಇದೆಲ್ಲವನ್ನು ಸಹಿಸುವಷ್ಟು ಬಲಿಷ್ಟನನ್ನಾಗಿ ಏಕೆ ಮಾಡಿದಿರಿ?

ಸಂಜೆ ಐದು ಗಂಟೆ. ಈಗಾಗಲೇ ಅವರೆಲ್ಲ ಬಳಲಿ ಹೋಗಿದ್ದಾರೆ. ಇದ್ದಕ್ಕಿದ್ದಂತೆ ದೂರದಿಂದ,

ಅಳೆಯಲಾಗದಷ್ಟು ದೂರದಿಂದ ಶಾಂತವಾದ ಸೌಮ್ಯ ಸ್ವರವೊಂದು ತೇಲಿ ಬರುತ್ತದೆ, ಮೈದಡವಿದಷ್ಟು ಮೃದುವಾಗಿ ಕೇಳಿಬರುತ್ತದೆ. ''ಅವನಿಗೆ ಬೇಕಾದಷ್ಟಾಯಿತು.''

ಸ್ವಲ್ಪ ಕಾಲಾನಂತರ ನಾನೊಂದು ಮೇಜಿನ ಬಳಿ ಕುಳಿತಿದ್ದೆ.

ನನ್ನ ಹಿಂದಿನಿಂದ ಯಾರೋ ನನ್ನ ತಲೆಗೆ ಬಡಿಯುತ್ತಾರೆ, ಕೈಗಳನ್ನೆತ್ತಿ, ಕಾಲುಗಳನ್ನು ಬಗ್ಗಿಸಿ ಕುಳಿತುಕೊಳ್ಳುವಂತೆ ಆಜ್ಞಾಪಿಸುತ್ತಾರೆ. ಕೆಳಗೆ-ಮೇಲೆ-ಕೆಳಗೆ ಮೂರನೇ ಸಲ ನಾನು ಕೆಳಗೆ ಉರುಳುತ್ತೇನೆ. ನೀಳಕಾಯದ ಎಸ್ಸೆಸ್ ಪಡೆಯ ವ್ಯಕ್ತಿಯೊಬ್ಬ ನನ್ನ ಮೇಲೆ ನಿಂತು ನನ್ನನ್ನು ತುಳಿಯುತ್ತಾ ಎಬ್ಬಿಸಲು ಯತ್ನಿಸುತ್ತಾನೆ.

''ನಿನಗೆ ಹೃದಯವೇ ಇಲ್ಲ'' ನೀಳಕಾಯದ ಎಸ್ಸೆಸ್ ವ್ಯಕ್ತಿ ಹೇಳುತ್ತಾನೆ.

''ಓ ನನಗೆ ಖಂಡಿತವಾಗಿಯೂ ಹೃದಯವಿದೆ;'' ನಾನು ಹೇಳುತ್ತೇನೆ. ಮತ್ತೆ ದೂರದಿಂದ, ಅಳೆಯಲಾಗದಷ್ಟು ದೂರದಿಂದ ಆ ಮೃದುವಾದ ಹಿತವಾದ ಧ್ವನಿ ಕೇಳುತ್ತದೆ.

''ಅವನು ಬೆಳಗಿನವರೆಗೆ ಉಳಿಯುವುದಿಲ್ಲ'' ಇನ್ನೂ ಐದು ನಿಮಿಷಗಳಲ್ಲಿ ಹತ್ತುಗಂಟೆಯಾಗಲಿದೆ. 1942 ಎಪ್ರಿಲ್ 25 ವಸಂತ ಕಾಲದ ಸುಂದರ ಹಿತಕರ ಸಂಜೆ.

**ಸಾವಿನ ನೆರಳಿನಲ್ಲಿ:-**

**ಸೂರ್ಯನ ತಾಪವೂ ತಾರೆಗಳ ಬೆಳಕೂ .....**
**ನಮಗೆ ಕಾಣದಾದಾಗ, ನಮಗೆ ಕಾಣದಾದಾಗ .....**

ಪ್ರಾರ್ಥನಾ ಭಂಗಿಯಲ್ಲಿ ತಮ್ಮ ಕೈಗಳನ್ನು ಕೆಳಗಡೆ ಜೋಡಿಸಿಟ್ಟುಕೊಂಡು ಇಬ್ಬರು ವ್ಯಕ್ತಿಗಳು ಬಿಳಿ ಗೋಡೆಗಳ ನೆಲಮಾಳಿಗೆಯಲ್ಲಿ ಒಬ್ಬರ ಹಿಂದೊಬ್ಬರು ನಿಧಾನವಾಗಿ ಸುತ್ತುತ್ತಿದ್ದಾರೆ. ತರಬೇತಾಗದ ಅವರ ಧ್ವನಿಗಳು ಶೋಕ ಗೀತೆಯೊಂದನ್ನು ಹಾಡುತ್ತಿವೆ.

**ಆತ್ಮವೆಂತು ಉಲ್ಲಸಿತವಾಗಿ ಗರಿಗೆದರಿ ಹಾರುತ್ತದೆ**
**ಮೇಲಿರುವ ಸ್ವರ್ಗದೆಡೆಗೆ, ಮೇಲಿರುವ ಸ್ವರ್ಗದೆಡೆಗೆ ......**

ಯಾರೋ ಒಬ್ಬರು ಸತ್ತಿರಬೇಕು. ನನ್ನ ಕಣ್ಣುಗಳನ್ನು ಮೇಲಕ್ಕರಳಿಸಿ ಸುತ್ತಲೂ ನೋಡುವುದರಲ್ಲಿ ನಾನು ಸಫಲನಾದೆ. ಇಲ್ಲಿ ಬೇರಾರೂ ಇಲ್ಲ. ನಾನು ಮತ್ತು ಆ ಇಬ್ಬರು ವ್ಯಕ್ತಿಗಳನ್ನು ಬಿಟ್ಟರೆ ಬೇರಾರೂ ನನಗೆ ಕಾಣಿಸುತ್ತಿಲ್ಲ. ಹಾಗಾದರೆ ಅವರು ಯಾರಿಗಾಗಿ ಶೋಕಗೀತೆ ಹಾಡುತ್ತಿದ್ದಾರೆ? ಹಾಗಾದರೆ, ಇದು ನನ್ನ ಶವಸಂಸ್ಕಾರಕ್ಕೆ ತಯಾರಿಯೆ? ಅಯ್ಯೋ ಅಪರಿಚಿತರೇ, ನನ್ನ ಮಾತು ಸ್ವಲ್ಪ ಕೇಳಿ, ನಾನು ಸತ್ತಿಲ್ಲ, ನಾನಿನ್ನೂ ಜೀವಂತವಾಗಿದ್ದೇನೆ. ಅವರಿಗೆ ನನ್ನ ಮಾತು ಕೇಳಿಸುತ್ತಿಲ್ಲ. ಈಗ ನನಗೆ ನೆನಪಾಗುತ್ತಿದೆ. ನನ್ನನ್ನು ಎಬ್ಬಿಸಲು ಮತ್ತು ನನಗೆ ಉಡುಪನ್ನು ತೊಡಿಸಲು ಯಾರೋ ಪ್ರಯಾಸಪಟ್ಟರು. ಆಮೇಲೆ ಅವರು ನನ್ನನ್ನೊಂದು ಪ್ರೇತವಸನದ ಮೇಲಿಟ್ಟು ಎತ್ತಿಕೊಂಡು ಹೋದರು. ಎಲ್ಲೋ ದೂರದ ವೇದನೆ ಮತ್ತು ಬಾಯಾರಿಕೆ ಮಾತ್ರ ನನಗಾಗುತ್ತಿದೆ.

''ನೀರು!''

ಅವರಲ್ಲೊಬ್ಬನು ನನ್ನ ತಲೆಯನ್ನು ಎತ್ತಿ ಹಿಡಿಯುತ್ತಾನೆ. ಇನ್ನೊಬ್ಬ ನೀರಿನ ಪಾತ್ರೆಯನ್ನು ನನ್ನ ತುಟಿಗಳಲ್ಲಿ ಇರಿಸುತ್ತಾನೆ.

''ಅಯ್ಯೋ ಎರಡು ದಿನಗಳಿಂದ ನೀನು ಬರೀ ನೀರನ್ನು ಮಾತ್ರ ಸೇವಿಸುತ್ತಿರುವೆ.''

ನೀರಾದರೋ ತುಂಬಾ ತಣ್ಣಗಿದೆ. ನಿದ್ದೆ, ನಾನು ನಿದ್ದೆ ಮಾಡಬೇಕಾಗಿದೆ.

ಪ್ಯಾಂಕ್ರಾಟ್ಸ್‌ನ ಪೊಲೀಸ ಸೆರೆಮನೆಯ ಅಂಧಕಾರಮಯವಾದ ಹಗೆ ಹೊಗೆಯಾಡುವ ಸ್ವಾಗತ ಕಚೇರಿಯಲ್ಲಿ ನಾನೀಗ ಇದ್ದೇನೆ. ಅವರು ನನ್ನನ್ನು ನೆಲದ ಮೇಲೆ ಇರಿಸುತ್ತಾರೆ. ಉಗ್ರವಾದ ಜರ್ಮನ್

ಧ್ವನಿಯು ಕೇಳಿದ ಪ್ರಶ್ನೆಯನ್ನು ಹುಸಿ ಸ್ನೇಹದ ಚೆಕ್ ಧ್ವನಿಯು ಅನುವಾದಿಸುತ್ತದೆ:

''ಅವಳು ನಿನಗೆ ಗೊತ್ತೆ?''

ಕೈಮಂಚದ ಎದುರು ವಿಶಾಲ ವದನವುಳ್ಳ ಯುವತಿಯೊಬ್ಬಳು ನಿಂತಿದ್ದಾಳೆ. ಆಕೆಯ ಕಣ್ಣುಗಳು ನನ್ನನ್ನು ನೋಡಿ ನನಗೆ ವಂದಿಸುತ್ತಿವೆ.

''ಆಕೆಯ ಪರಿಚಯ ನನಗಿಲ್ಲ.''

ನನಗೆ ನೆನಪಿದೆ . ಪೆಟ್ಚೆಕ್ ಕಟ್ಟಡದಲ್ಲಿ ಆ ಕ್ಷುಬ್ಧ ರಾತ್ರಿಯಂದು ಕೇವಲ ಒಂದೇ ಕ್ಷಣಕಾಲ ನಾನು ಅವಳನ್ನು ನೋಡಿದ್ದೆ. ಈಗ ಎರಡನೇ ಸಲ. ಆಕೆ ಅರ್ನೋಸ್ತ ಲೋರೆಂಜ್ ಅವರ ಪತ್ನಿ. 1942ರ ಸೇನಾಡಳಿತದ ಮೊದಲ ದಿನಗಳಲ್ಲಿಯೇ ಆಕೆಗೆ ಮರಣದಂಡನೆಯನ್ನು ವಿಧಿಸಲಾಯಿತು.

ಅನಿಚ್ಕಾ ಜರಾಸ್ಕೊವಾ! ಆಕೆ ಮುಂದಕ್ಕೆ ಬಾಗಿ ನನಗೆ ಹಸ್ತಲಾಘವ ನೀಡಲು ಮುಂದಾದಾಗ ಅವರು ಆಕೆಯನ್ನು ಬಲಾತ್ಕಾರದಿಂದ ಆಚೆ ತಳ್ಳುತ್ತಾರೆ. ಅವರ ಪ್ರಶ್ನೆಗಳು ನನಗೀಗ ಕೇಳಿಸುವುದೇ ಇಲ್ಲ.

ಗುರುವಾರ. ನನ್ನ ಪ್ರಜ್ಞೆ ಮರಳಿ ಬರುತ್ತಿದೆ. ನನ್ನ ಸಹ ಕೈದಿಗಳ ಪೈಕಿ ಕಿರಿಯವನಿಗೆ ಕರೆಕ್ ಎಂದು ಹೆಸರು. ಅವನು ಹಿರಿಯಾತನನ್ನು 'ಅಪ್ಪಾ' ಎಂದು ಕರೆಯುತ್ತಾನೆ.

ಅಪರಾಹ್ನ. ಕೋಣೆಯ ಬಾಗಿಲು ತೆರೆಯುತ್ತದೆ. ನಿಶ್ಶಬ್ದವಾಗಿ, ಮೆಲುನಡೆಯಲ್ಲಿ ನಾಯಿಯೊಂದು ಒಳ ಪ್ರವೇಶಿಸುತ್ತದೆ. ಮತ್ತೆ ಎರಡು ಜೊತೆ ಭಾರೀ ಬೂಟುಗಳು ಕಂಡು ಬರುತ್ತವೆ. ಅವುಗಳಲ್ಲಿ ಒಂದು ಜೊತೆಯು ಈ ನಾಯಿಯ ಒಡೆಯನಿಗೆ ಸೇರಿದ್ದೆಂದು ನನಗೀಗಲೇ ಗೊತ್ತು. ಅವನು ಪ್ಯಾಂಕ್ರಾಟ್ಸ್ ಸೆರೆಮನೆಯ ಮೇಲ್ವಿಚಾರಣಾಧಿಕಾರಿ. ಎರಡನೆಯ ಜೊತೆಯು ಗೆಸ್ಟಾಪೋ ದಳದ ಕಮ್ಯುನಿಸ್ಟ್ ವಿರೋಧಿ ವಿಭಾಗದ ಮುಖ್ಯಸ್ಥನದ್ದು.

ಅವನು ಒಂದು ಕುರ್ಚಿಯ ಮೇಲೆ ಕುಳಿತುಕೊಂಡು ತನ್ನ ಪ್ರಶ್ನೆಗಳ ಸರಮಾಲೆಯನ್ನು ಆರಂಭಿಸುತ್ತಾನೆ. ''ನೀವು ಆಟದಲ್ಲಿ ಸೋತಿದ್ದೀರಿ. ಕೊನೇ ಪಕ್ಷ ನಿನ್ನನ್ನಾದರೂ ಉಳಿಸಿಕೋ. ಬಾಯಿ ಬಿಡು!'' ''ನೀನು ಬಕ್ಸಾ ಕುಟುಂಬದೊಡನೆ ಎಷ್ಟು ಕಾಲ ವಾಸವಾಗಿದ್ದೆ?'' ಬಕ್ಸಾ ಕುಟುಂಬದೊಡನೆ? ಇದು ತುಂಬಾ ಅತಿರೇಕಕ್ಕೆ ಹೋಗಿದೆ. ಇವರಿಗೆ ಇದನ್ನೆಲ್ಲ ಹೇಳಿದವರು ಯಾರು? ಈ ತನಿಖೆ ಒಂದು ಗಂಟೆಯ ಕಾಲ ನಡೆಯಿತು.

ಈಗ ಸಂಜೆಯಾಗಿದೆ. ಕೈಗಳನ್ನು ಜೋಡಿಸಿದ ಇಬ್ಬರು ವ್ಯಕ್ತಿಗಳು ಒಬ್ಬರ ಹಿಂದೆ ಒಬ್ಬರಂತೆ ಸುತ್ತು ಬರುತ್ತಿದ್ದಾರೆ. ತಮ್ಮ ಶೋಕಭರಿತವಾದ, ಸಮವಾಗಿಲ್ಲದ ಧ್ವನಿಗಳೊಂದಿಗೆ ಸಾವಿನ ಶೋಕ ಗೀತೆಯನ್ನು ಹಾಡುತ್ತಿದ್ದಾರೆ: ''ಸೂರ್ಯನ ತಾಪವೂ ..... ನಮಗೆ ಕಾಣದಾದಾಗ .....'' ಓ ಸಜ್ಜನರೇ ನಿಲ್ಲಿಸಿ! ಇಂದು ಮೇ ಒಂದನೇ ದಿನದ ಮುನ್ನಾ ದಿನ, ಮಾನವನ ಪಾಲಿಗೆ ಅತ್ಯಂತ ಸುಂದರವಾದ ದಿನ.

ಮೇ ದಿನದ ಮುಂಜಾನೆ: ತೆರೆದ ಕಿಟಕಿಯಿಂದ ಹೊಸಗಾಳಿ ನುಗ್ಗಿ ಬಂದು ನೆಲದಲ್ಲಿ ಹಾಸಿರುವ ನನ್ನ ಹುಲ್ಲಿನ ಹಾಸಿಗೆಯ ಸುತ್ತ ಹರಿಯುತ್ತಿರುವ ಅನುಭವ ನನಗಾಯಿತು. ಒಮ್ಮೆಗೇ ಹಾಸಿಗೆಯ ಹುಲ್ಲು ಕಡ್ಡಿಗಳು ಚುಚ್ಚುತ್ತಿರುವ ಅನುಭವವಾಗುತ್ತದೆ. ನನ್ನ ದೇಹದ ಪ್ರತಿಯೊಂದು ಬಿಂದುವಿನಲ್ಲಿಯೂ ಸಾವಿರ ನೋವುಗಳು ತುಂಬಿರುವುದರಿಂದ ಉಸಿರಾಡುವುದಕ್ಕೆ ಕಷ್ಟವೆನಿಸುತ್ತಿದೆ. ನಾನು ಸಾಯುತ್ತಿದ್ದೇನೆ. ಸಾವೇ, ನೀನು ಬರುವುದಕ್ಕೆ ಬಹಳ ಕಾಲ ತೆಗೆದುಕೊಂಡಿರುವೆ. ಓರ್ವ ಸ್ವತಂತ್ರ ಜೀವಿಯಾಗಿ ಜೀವಿಸಬೇಕು, ತುಂಬಾ ದುಡಿಯಬೇಕು, ತುಂಬಾ ಪ್ರೀತಿಸಬೇಕು, ಹಾಡಬೇಕು, ಜಗತ್ತನ್ನೆಲ್ಲ ಸುತ್ತಬೇಕು ಎಂದು ನಾನು ಹಾರೈಸಿದ್ದೆ. ನಾನು ಪ್ರಬುದ್ಧತೆಯನ್ನು ತಲುಪಿದಾಗಲೇ ನನ್ನಲ್ಲಿ ಅಸದೃಶವಾದ ಬಲವಿದ್ದಿತು. ಈಗ ಎಲ್ಲ ನಷ್ಟವಾಗಿದೆ.

ಮೇ ದಿನ! ಬೆಳಗಿನ ಈ ಹೊತ್ತಿನಲ್ಲಿ ಉಪನಗರಗಳಲ್ಲಿ ನಾವು ಎಚ್ಚೆತ್ತು ನಮ್ಮ ಬಾವುಟಗಳನ್ನು ಸಿದ್ಧಪಡಿಸುತ್ತಿದ್ದೆವು. ಈ ಹೊತ್ತಿನಲ್ಲಿ ಮಾಸ್ಕೋದ ಬೀದಿಗಳಲ್ಲಿ ಮೇ ದಿನದ ಪಥ ಸಂಚಲನಕ್ಕಾಗಿ ಸೇನಾಪಡೆಯ ಮುಂದಾಳುಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಬಂದು ನಿಲ್ಲುತ್ತಿರುತ್ತಾರೆ. ನಾನೂ ಅವರಲ್ಲೊಬ್ಬ. ನನಗೆ ಕುತ್ತಿಗೆ ಒತ್ತಿದಂತೆ ಅನಿಸುತ್ತಿದೆ. ನನಗೆ ಉಸಿರಾಡುವುದಕ್ಕೆ ಸಾಧ್ಯವಾಗುತ್ತಿಲ್ಲ. ನನ್ನ ಗಂಟಲಿನ ಗೊರಗೊರ ಸದ್ದು ನನಗೆ ಕೇಳಿಸುತ್ತದೆ. ಸ್ವಲ್ಪ ನೀರು ಕುಡಿದರೆ ಇದು ಕಡಿಮೆಯಾಗಬ ಹುದೇನೋ ..... ಆದರೆ ಪಾತ್ರೆಯಲ್ಲಿದ್ದ ನೀರೆಲ್ಲ ಖಾಲಿಯಾಗಿದೆ. ಕೋಣೆಯ ಮೂಲೆಯಲ್ಲಿರುವ ಶೌಚಾಲಯದಲ್ಲಿ ಬೇಕಾದಷ್ಟು ನೀರಿದೆ. ನಾನು ನನ್ನ ಹೊಟ್ಟೆಯಾಸರೆಯಿಂದ ತೆವಳಿಕೊಂಡು ಹೋಗುತ್ತೇನೆ. ಕೊನೆಗೂ ನಾನಲ್ಲಿಗೆ ತಲುಪುತ್ತೇನೆ. ನೀರನ್ನು ಗಟಗಟನೆ ಕುಡಿಯುತ್ತೇನೆ.

**267ನೇ ಸೆರೆಮನೆ ಕೋಣೆ:-**

ಬಾಗಿಲಿನಿಂದ ಕಿಟಕಿಗೆ ಏಳು ಹೆಜ್ಜೆಗಳು. ಕಿಟಕಿಯಿಂದ ಬಾಗಿಲಿಗೆ ಏಳು ಹೆಜ್ಜೆಗಳು.

ಅದು ನನಗೆ ಚೆನ್ನಾಗಿ ಗೊತ್ತು. ನನ್ನ ಪ್ಯಾಂಕ್ರಾಟ್ಸ್ ಸೆರೆಮನೆ ಕೋಣೆಯ ನೆಲಕ್ಕೆ ಹಾಸಿರುವ ದೇವದಾರು ಹಲಗೆಗಳ ಮೇಲೆ ಶತಪಥ ತುಳಿಯುತ್ತ ಆ ದೂರವನ್ನು ನಾನು ಅದೆಷ್ಟು ಸಲ ಕ್ರಮಿಸಿದ್ದೇನೆ! ನಾನು ಕಿಟಕಿಯ ಪಕ್ಕದಲ್ಲಿ ಹಾಸಿರುವ ಹುಲ್ಲು ಹಾಸಿಗೆಯ ಮೇಲೆ ಕದಲದೆಯೇ ಬಿದ್ದಿದ್ದೇನೆ ಆರು ವಾರಗಳಿಂದ. ನನಗೆ ಈಗಷ್ಟೇ ಪುನರ್ಜನ್ಮ ಬರುತ್ತಿದೆ. ಈ ಕೋಣೆಯಲ್ಲಿ ಕೆಲವು ಬದಲಾವಣೆಗಳಾಗಿವೆ. ಬಾಗಿಲಿನ ಮೇಲೆ ಬರೆಯಲಾಗಿದ್ದ ಮೂರು ಹೆಸರುಗಳಲ್ಲಿ ಈಗ ಎರಡೇ ಉಳಿದಿವೆ. ಕರೆಕ್ ಈಗ ಕಂಡುಬರುತ್ತಿಲ್ಲ. ದಯಾಮಯಿ ಹೃದಯದ ನೆನಪುಗಳನ್ನು ಮಾತ್ರವೇ ಅವನು ಬಿಟ್ಟು ಹೋಗಿದ್ದಾನೆ. ಅವನ ಹೆಸರು ಕರೆಕ್ ಮಾಲೆಟ್ಜ. ಹ್ಯಾಡ್ಲಿಟ್ಜ ಬಳಿಯ ಕಬ್ಬಿಣದ ಗಣಿಯ ಪಂಜರದಲ್ಲಿ ಯಂತ್ರ ಕರ್ಮಿಯಾಗಿ ದುಡಿಯುತ್ತಿದ್ದ. ಭೂಗತ ಸಮರಕ್ಕೆ ಅಗತ್ಯವಾಗಿದ್ದ ಸ್ಫೋಟಕ ವಸ್ತುಗಳನ್ನು ಅವನು ಹೊರಕ್ಕೆ ಒಯ್ಯುತ್ತಿದ್ದ. ಅವನನ್ನೂ ಎರಡು ವರ್ಷಗಳ ಹಿಂದೆ ಬಂಧಿಸಲಾಯಿತು. ಈಗ ಬಹುಶಃ ಬರ್ಲಿನ್‌ನಲ್ಲಿ ವಿಚಾರಣೆಯನ್ನು ಎದುರಿಸುತ್ತಿದ್ದಾನೆ. ಆತನು ನನ್ನ ಮಂಚದ ಮೇಲೆ ಕುಳಿತುಕೊಂಡು ನನಗೆ ಉಣಿಸಲು ಪ್ರಯತ್ನಿಸುತ್ತಿದ್ದ. ನನಗಾದರೋ ತಿನ್ನುವುದಕ್ಕೆ ಆಗುತ್ತಿರಲಿಲ್ಲ. ನಾನಿಲ್ಲಿಗೆ ಬಂದು ಈಗಾಗಲೇ ಎಂಟು ದಿನಗಳಾಗಿವೆಯೇ?

267ನೇ ಕೋಣೆಯಲ್ಲಿ ಉಳಿದಿರುವ ಇಬ್ಬರು ಮಾತ್ರ ಈಗಲೂ ಅದೇ ನಿಷ್ಠೆಯಿಂದ ಕುಳಿತುಕೊಂಡಿದ್ದಾರೆ, ''ಅಪ್ಪ ಮತ್ತು ನಾನು. 'ಅಪ್ಪ' 60 ವರ್ಷ ವಯಸ್ಸಿನ ಅಧ್ಯಾಪಕರು. ಹೆಸರು ಜೋಸೆಫ್ ಪೇಕ್ಷಿರ್. ನನ್ನನ್ನು ಬಂಧಿಸುವುದಕ್ಕೆ 85 ದಿನಗಳ ಮುಂಚೆ ಅವರ ಬಂಧನವಾಯಿತು. ಚೆಕ್ ಜನರು ತಮ್ಮ ಸ್ವಾತಂತ್ರ್ಯವನ್ನು ಪಡೆದ ಬಳಿಕ ಅವರ ಪಾಠಶಾಲೆಗಳ ಕಾರ್ಯವಿಧಾನವನ್ನು ಉತ್ತಮ ಪಡಿಸುವ ಯೋಜನೆಯೊಂದನ್ನೂ ರೂಪಿಸುವುದರ ಮೂಲಕ ''ಜರ್ಮನ್ ರೈಖ್ ಆಡಳಿತದ ವಿರುದ್ಧ ಒಳಸಂಚನ್ನು'' ನಡೆಸಿದರೆಂಬುದು ಅವರ ಮೇಲಿನ ಆರೋಪವಾಗಿತ್ತು. ಅವರು ಪ್ರತಿ ರಾತ್ರಿಯೂ ನನ್ನ ಬಳಿ ಕುಳಿತಿರುತ್ತಿದ್ದರು. ಮೃತ್ಯುವು ನನ್ನ ಹತ್ತಿರ ಸುಳಿದಾಗಲೆಲ್ಲ ತನ್ನ ಬಳಿಯ ಒದ್ದೆ ಬಟ್ಟೆಯಿಂದ ನನ್ನನ್ನು ಒತ್ತುತ್ತ ಅದನ್ನು ಓಡಿಸುತ್ತಿದ್ದರು. ನನ್ನ ಗಾಯಗಳಿಂದ ಒಸರುತ್ತಿದ್ದ ಕೀವನ್ನು ತೆಗೆದು ಅವುಗಳನ್ನು ಶುದ್ಧಗೊಳಿಸುತ್ತಿದ್ದರು. ಮೊದಲನೆಯ ರಾತ್ರಿ ನನ್ನ ಮೇಲೆ ನಡೆದ ಚಿತ್ರಹಿಂಸೆಯ ತರುವಾಯ ನಮ್ಮ ಸಂಬಂಧ ಈ ರೀತಿ ಆರಂಭಗೊಂಡಿತು.

267ನೇ ಕೋಣೆಯಲ್ಲಿ ಜೀವನವು ಸಮೃದ್ಧವಾಗಿ ಸಾಗುತ್ತಿತ್ತು. ಕೆಲವೊಮ್ಮೆ ಬಾಗಿಲು ತೆರೆದುಕೊಳ್ಳುತ್ತಿತ್ತು. ಹಾಗೂ ಪ್ರತಿ ಗಂಟೆಗೊಮ್ಮೆ ನಮ್ಮನ್ನು ಪರೀಕ್ಷಿಸಲಾಗುತ್ತಿತ್ತು. ಆದರೆ ನಾವಿಬ್ಬರೂ ತೀರಾ ಕ್ಷೀಣರಾಗಿದ್ದೆವು. ಬಳಲಿದ್ದೆವು. ಎರಡು ದಿನಗಳ ನಂತರ ಮತ್ತಿಬ್ಬರು ಕೈದಿಗಳ ಪರಿಚಯವಾಯಿತು.

ಪ್ರತಿದಿನ ಪೆಟ್ಚೆಕ್ ಕಟ್ಟಡದ ಅಧಿಕಾರಿ ಮಹಾಶಯರುಗಳು ನನಗೆ ಕರೆ ಕಳುಹಿಸಿದಾಗಲೆಲ್ಲ ಪೊಲೀಸ್ ಅಧಿಕಾರಿಯು ''ಕೈದಿಯು ಸಾಗಿಸಲ್ಪಡುವುದಕ್ಕೆ ತಕ್ಕ ಸ್ಥಿತಿಯಲ್ಲಿಲ್ಲ'' ಎಂದು ಆ ಕರೆ ಪತ್ರದ ಮೇಲೆ ಬರೆದು ಹಿಂದೆ ಕಳುಹಿಸುತ್ತಿದ್ದ. ಆದುದರಿಂದ ನಾನು ಯಾವ ಸ್ಥಿತಿಯಲ್ಲಿದ್ದರೂ ಕಳುಹಿಸಿಕೊಡಬೇಕೆಂದು ಅವರು ಆಜ್ಞಾಪಿಸಿದರು. ನಂಬಿಗಸ್ಥ ಆಳುಗಳ ಅಥವಾ ಸ್ಥಾನೀಯ ಸೇವಕರ ಸಮವಸ್ತ್ರಗಳನ್ನು ಧರಿಸಿದ ಇಬ್ಬರು ಕೈದಿಗಳು ಕೈಮಂಚದೊಡನೆ ನಮ್ಮ ಕೋಣೆಯ ಮುಂದೆ ನಿಲ್ಲುತ್ತಾರೆ. ನನಗೆ ಬಟ್ಟೆಗಳನ್ನು ತೊಡಿಸಲು ಅಪ್ಪ ಹೆಣಗುತ್ತಾರೆ. ನಂಬಿಗಸ್ಥ ಕೈದಿಗಳು ನನ್ನನ್ನು ಕೈಮಂಚದ ಮೇಲೆ ಮಲಗಿಸಿ ಒಯ್ಯುತ್ತಾರೆ. ಜೈಲಿನ ಅಂಗಳದಲ್ಲಿ ನಿಂತಿದ್ದ ಹೇರುವಾಹನದಲ್ಲಿ ಅವರು ಕೈಮಂಚವನ್ನು ಇಳಿಸಿದರು. ಇಬ್ಬರು ಎಸ್ಸೆಸ್ ಜವಾನರು ಚಾಲಕನ ಜೊತೆ ಕುಳಿತರು.

ನನ್ನ ಹೆಂಡತಿಗೆ ಮಾತ್ರ ನನ್ನ ಬಗ್ಗೆ ಏನೂ ಗೊತ್ತಿರಲಿಲ್ಲ. ನಾವಿರುವುದಕ್ಕಿಂತ ಕೆಳಗಿನ ಅಂತಸ್ತಿನಲ್ಲಿ, ನಮ್ಮ ಕೋಣೆಯ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯ ಕೋಣೆಯೊಂದರಲ್ಲಿ ಆಕೆ ಒಂಟಿಯಾಗಿ ಜೀವಿಸುತ್ತಿದ್ದಳು. ಆಕೆ ನನ್ನ ಬಗ್ಗೆ ಕಾತರವನ್ನೂ, ಆಶಯವನ್ನೂ ಹೊತ್ತುಕೊಂಡಿದ್ದಳು. ಒಂದು ದಿನ ಆಕೆಯ ಪಕ್ಕದ ಕೋಣೆಯಲ್ಲಿದ್ದ ಕೈದಿಯೋರ್ವಳು ನನ್ನ ಅಂತ್ಯದ ವಿಚಾರವನ್ನು ಅವಳಿಗೆ ತಿಳಿಸಿದಳು. ಇಷ್ಟು ದಿನವೂ ನನ್ನ ಈ ಅಸಹ್ಯಕರವಾದ ಮಂಚದ ಮೇಲೆ ನಾನು ಹೊರಳಾಡುತ್ತಿದ್ದಾಗ ಪ್ರತಿಸಂಜೆ ನನ್ನ ಗುಸ್ತಿನಾಗೆ ಅತ್ಯಂತ ಪ್ರಿಯವಾಗಿದ್ದ ಹಾಡನ್ನು ಹಾಡಲು ಪ್ರಯತ್ನಿಸುತ್ತಿದ್ದೆ. ನಾನು ಅಷ್ಟೊಂದು ಭಾವಪೂರ್ಣವಾಗಿ ಹಾಡುತ್ತಿದ್ದಾಗಲೂ ಆಕೆಗೆ ಯಾಕೆ ಕೇಳಿಸಲಿಲ್ಲ ? ಇಂದು ಆಕೆಗೆ ಇದೆಲ್ಲವೂ ತಿಳಿದಿದೆ; ಆ ಹಾಡು ಇಂದು ಆಕೆಗೆ ಕೇಳಿಸುತ್ತಿದೆ.

ಸೂರ್ಯನ ಬಿಸಿಲಿಲ್ಲದೆ ಜೀವನವಿಲ್ಲ. ಅಂತೆಯೇ ಹಾಡಿಲ್ಲದೆಯೂ ಜೀವನವಿರದು. ಇಲ್ಲಿ ನಮಗೆ ಹಾಡಿನ ಅವಶ್ಯಕತೆ ಇಮ್ಮಡಿಯಾಗಿದೆ, ಏಕೆಂದರೆ ಇಲ್ಲಿಗೆ ಸೂರ್ಯನ ಬಿಸಿಲು ತಲುಪುವುದಿಲ್ಲ.

**ಕ್ರಮಾಂಕ 400:-**

ಪುನರ್ಜನ್ಮವು ಒಂದು ವಿಶೇಷ ಘಟನೆಯಾಗಿದೆ. ಅದು ಸಾಧಾರಣವಾದುದು. ಚೆನ್ನಾಗಿ ನಿದ್ರಿಸಿ ಎಚ್ಚೆತ್ತ ತರುವಾಯ ಸುಂದರವಾದ ದಿನದಂದು ಜಗತ್ತು ಆಕರ್ಷಣೀಯವಾಗಿರುತ್ತದೆ. ಅಂತೆಯೇ ಪುನರ್ಜನ್ಮದ ದಿನವು ಮಿಕ್ಕೆಲ್ಲ ದಿನಗಳಿಗಿಂತಲೂ ಹೆಚ್ಚು ಸುಂದರವಾದುದು. ಇಲ್ಲಿಯೂ ಸಹ ಹಾಗೆಯೇ ಆಗುತ್ತದೆ. ಅದು ಕೇವಲ ಕ್ಷಣಿಕವಾದುದು ಎಂಬ ಸತ್ಯವನ್ನು ನೀವು ಮನಗಾಣುತ್ತೀರಿ. ಕೊನೆಗೊಂದು ದಿನ ಅವರು ನಿಮ್ಮನ್ನು ಹೊರ ಜಗತ್ತಿಗೆ ಒಯ್ಯುತ್ತಾರೆ. ಒಂದು ದಿನ ಅವರು ಕೈಮಂಚವನ್ನು ಒದಗಿಸದೆಯೇ ನಿಮ್ಮನ್ನು ವಿಚಾರಣೆಗೆ ಬರಹೇಳುತ್ತಾರೆ. ನೀವು ನಡೆಯುವುದಕ್ಕಿಂತ ಹೆಚ್ಚಾಗಿ ತೆವಳುತ್ತಾ ಸಾಗುತ್ತೀರಿ. ಕೆಳಗಡೆ ಸಹ ಕೈದಿಗಳು ನಿಮ್ಮ ಕೈ ಹಿಡಿದುಕೊಂಡು ನಿಮ್ಮನ್ನು ಕಾರಾಗೃಹದ ಬಸ್ಸಿನೊಳಕ್ಕೆ ಒಯ್ಯುತ್ತಾರೆ. ಬಸ್ಸು ಪೆಟ್ಚೆಕ್ ಕಟ್ಟಡದ ಅಂಗಳದೊಳಕ್ಕೆ ಸರಕ್ಕನೆ ತಿರುಗುತ್ತದೆ, ನಿಮ್ಮ ಹೊಸ ಸಂಗಾತಿಗಳನ್ನು, ನಿಮ್ಮನ್ನು ಕೆಳಗೆ ಇಳಿಸುತ್ತಾರೆ. ನೀವೆಲ್ಲರೂ ಒಂದು ವಿಶಾಲವಾದ ಕೋಣೆಯೊಳಕ್ಕೆ ನಡೆಯುತ್ತೀರಿ. ತಮ್ಮಾ, ಅದು ಅವರ ಹೊಸ ಜೀವನದ ಒಂದು ತುಣುಕು. ಅದನ್ನು 'ಸಿನಿಮಾ' ಎಂದು ಕರೆಯುತ್ತಾರೆ. ಆ ಪರದೆಯ ಮೇಲೆಯೇ ನೀವು ನಿಮ್ಮ ಜೀವನವನ್ನು ನೂರಾರು ಸಲ ಸಮೀಕ್ಷಿಸಲಿದ್ದೀರಿ.

ಇಂದು 1943 ಮೇ ತಿಂಗಳ ಮೊದಲ ದಿನ: ನನಗೆ ಬರೆಯಲು ಅವಕಾಶ ದೊರೆಯುವ ವಿರಾಮದ ದಿನ. ಮತ್ತೊಮ್ಮೆ ಕ್ಷಣಕಾಲಕ್ಕಾದರೂ ಕಮ್ಯೂನಿಸ್ಟ ಸಂಪಾದಕನಾಗಿ ಇರಲು, ಹೊಸ ಜಗತ್ತಿನ ಸಮರಶೀಲ ಪಡೆಯ ಮೇ ದಿನದ ಪಥದ ಸಂಚಲನದ ಬಗ್ಗೆ ಬರೆಯಲು, ಅವಕಾಶ ನೀಡುವ ಅದೃಷ್ಟಮಯವಾದ ದಿನ. ಬೆಳಿಗ್ಗೆ ನಮ್ಮ ಪಕ್ಕದ ಕೋಣೆಯ ಮಿತ್ರರು, ಬಿಥೋವೆನ್‌ನ ಸಂಗೀತದ

ಎರಡು ಚರಣಗಳನ್ನು ನುಡಿಸಿ ಶುಭಾಶಯಗಳನ್ನು ಸಲ್ಲಿಸುತ್ತಾರೆ. ನಾವು ನಮ್ಮ ಬಳಿಯಿರುವುದರಲ್ಲೇ ಅತ್ಯುತ್ತಮವಾದ ಬಟ್ಟೆಗಳನ್ನು ಆರಿಸಿ ಧರಿಸಿಕೊಳ್ಳುತ್ತೇವೆ. ನಮಗೆ ಬೆಳಗಿನ ಉಪಾಹಾರ ಅತ್ಯುತ್ತಮವಾಗಿರುತ್ತದೆ. ಸಂಗಾತಿ ಸ್ಕೊರೆಪಾ ತನ್ ಮೇ ದಿನದ ಶುಭಾಶಯದ ರೂಪದಲ್ಲಿ ಎರಡರ ಬದಲಾಗಿ 3 ಬನ್‌ಗಳನ್ನು ನೀಡುತ್ತಾರೆ. ತನ್ನ ಭಾವನೆಗಳನ್ನು ಪ್ರಕಟಿಸಲು ಬನ್‌ಗಳನ್ನು ನೀಡುವಾಗ ನಮ್ಮ ಬೆರಳುಗಳು ಬನ್‌ಗಳ ಅಡಿಯಲ್ಲಿ ಪರಸ್ಪರ ಸ್ಪರ್ಶಿಸಿ ಮೃದುವಾದ ಒತ್ತುವಿಕೆಯನ್ನು ವಿನಿಮಯ ಮಾಡಿಕೊಳ್ಳುತ್ತೇವೆ. ಮಾತನಾಡುವ ಧೈರ್ಯ ಯಾರಿಗೂ ಇಲ್ಲ. ನಮ್ಮ ಕಿಟಕಿಯ ಕೆಳಗಡೆ, ಕೆಳ ಅಂತಸ್ತಿನ ಮಹಿಳಾ ಕೈದಿಗಳು ತಮ್ಮ ನಿಯಮಿತ ವ್ಯಾಯಾಮಗಳಿಗಾಗಿ ಹೊರಗೆ ಓಡಾಡುತ್ತಿದ್ದಾರೆ. ನಂತರ ನಮ್ಮ ಸರದಿ ಬರುತ್ತದೆ. ಮಿತ್ರರೇ ಇಂದು ಮೇ ದಿನ. ನಾವು ಏನಾದರೂ ಹೊಸತಾದುದನ್ನು ಆರಂಭಿಸೋಣ. ಕಾವಲುಗಾರ ನೋಡಿದರೂ, ನೋಡದಿದ್ದರೂ ನಾವು ಲೆಕ್ಕಿಸುವುದು ಬೇಡ. ಮೊದಲನೆಯ ವ್ಯಾಯಾಮ ಕಮ್ಮಾರನ ಸುತ್ತಿಗೆಯನ್ನು ಬೀಸುವುದು, ಒಂದು, ಎರಡು, ಒಂದು, ಎರಡು, ಕಾಳನ್ನು ಕತ್ತರಿಸುವುದು ಎರಡನೇ ವ್ಯಾಯಾಮ. ಸುತ್ತಿಗೆ ಮತ್ತು ಕತ್ತಿ ಸಂಗಾತಿಗಳಿಗೆ ಇದು ಅರ್ಥವಾಗುತ್ತದೆ. ಗೆಳೆಯರೇ ಇದೇ ನಮ್ಮ ಮೇ ದಿನದ ಪ್ರದರ್ಶನ. ನಾವು ಸಾವಿನೆಡೆಗೆ ಸಾಗುತ್ತಿದ್ದರೂ ಕೂಡ, ದೃಢವಾಗಿ ನಿಲ್ಲುವೆವು ಎಂಬ ನಮ್ಮ ಮೇ ದಿನದ ಪ್ರತಿಜ್ಞೆಯನ್ನು ಈ ಮೂಕಾಭಿನಯವು ಸೂಚಿಸುತ್ತದೆ. ಕೋಣೆಗಳಿಗೆ ಮರಳುತ್ತೇವೆ. 1943ರ ಮೇ ದಿನಾಚರಣೆಯು ಯೋಗ್ಯವಾದ ರೀತಿಯಲ್ಲಿ ನಮ್ಮ 267ನೇ ಕೋಣೆಯಲ್ಲಿಯೇ ಮುಕ್ತಾಯವಾಯಿತೆಂದು ನಾವು ಭಾವಿಸಿದ್ದೆವು. ಆದರೆ ಅದೇ ಕೊನೆಯಾಗಿರಲಿಲ್ಲ.

ಪೆಟ್ಚೆಕ್ ಕಟ್ಟಡದಲ್ಲಿ ನಡೆದ 'ಸಿನಿಮಾ' ಮಾತ್ರ ಒಂದಿಷ್ಟೂ ಸಂತೋಷದಾಯಕವಾಗಿರಲಿಲ್ಲ. ಅಲ್ಲಿ ನಿಂತರೆ ಇತರರ ಪ್ರಲಾಪಗಳೂ ಅಳುವಿಕೆಯೂ ನಿಮಗೆ ಕೇಳಿಸುತ್ತವೆ. ನಿಮಗೇನು ಕಾದಿದೆಯೋ ಎಂದು ನೀವು ಚಕಿತರಾಗುತ್ತೀರಿ. ಜನರು ಒಳಗೆ ಹೋಗುವಾಗ ಬಲಶಾಲಿಗಳಾಗಿ ಇರುವುದನ್ನೂ ನೀವು ನೋಡುತ್ತೀರಿ. ಎರಡು ಅಥವಾ ಮೂರು ಗಂಟೆಗಳ ನಂತರ ಅವರು ಹೊರ ಬರುವಾಗ ಚಿತ್ರಹಿಂಸೆಯಿಂದ ಬಳಲಿ, ವಿಕಲಾಂಗರಾಗಿರುತ್ತಾರೆ. ನಾನು ಸಿನಿಮಾದಲ್ಲಿ ಹೆಚ್ಚು ಹೊತ್ತು ಕುಳಿತಿರಲಿಲ್ಲ. ಚೆಕ್ ಭಾಷೆ ಮಾತನಾಡುತ್ತಿದ್ದ ಇಬ್ಬರು ನನ್ನನ್ನು ಮೇಲೆ ಒಯ್ಯುವ ಎಲಿವೇಟರ್‌ನೊಳಕ್ಕೆ ಕರೆದೊಯ್ದರು. 400ನೇ ಸಂಖ್ಯೆಯನ್ನು ಹೊತ್ತ ಬಾಗಿಲಿರುವ ಇನ್ನೊಂದು ವಿಶಾಲವಾದ ಕೋಣೆಯೊಳಕ್ಕೆ ನನ್ನನ್ನು ಒಯ್ದರು. ನಾನು ಏಕಾಂಗಿಯಾಗಿರಲಿಲ್ಲ. ಅಚ್ಚರಿಗಳಿಂದ ತುಂಬಿದ್ದ ಆ ಗಂಟೆಗಳು ಓಡಿದಂತೆಲ್ಲ ಬೆಂಚುಗಳು ತುಂಬಿಕೊಂಡವು. ಕೆಲವೊಂದು ಅಚ್ಚರಿಗಳು ಎಷ್ಟೊಂದು ವಿಚಿತ್ರವಾಗಿದ್ದವೆಂದರೆ ನನಗೆ ಅವು ಅರ್ಥವೇ ಆಗಲಿಲ್ಲ. ಇನ್ನೂ ಕೆಲವು ತೀರಾ ಕ್ರೂರವಾಗಿದ್ದವು.

ಮೊದಲನೆಯ ಅಚ್ಚರಿಯು ವಿಚಿತ್ರವೂ, ಕ್ರೂರವೂ ಆಗಿರಲಿಲ್ಲ. ಆದರೆ ದಯಾಪೂರ್ಣವಾಗಿತ್ತು. ಅಲ್ಪ ಮಹತ್ವದ್ದೂ ಆಗಿತ್ತು. ಆದರೆ ನಾನದನ್ನು ಎಂದಿಗೂ ಮರೆಯಲಾರೆ. ನನ್ನನ್ನು ಕಾಯುತ್ತಿದ್ದ ಗೆಸ್ಟಾಪೋ ಜವಾನನು ನನ್ನತ್ತ ಬಂದು ಅರ್ಧ ಸುಟ್ಟು ಹೋಗಿದ್ದ ಸಿಗರೇಟನ್ನು ಎಸೆದನು. ಅದನ್ನು ನಾನು ಎತ್ತಿಕೊಳ್ಳಬೇಕೆ! ಅಥವಾ ನನ್ನನ್ನು ಒಂದು ಸಿಗರೇಟನ್ನು ಕೊಟ್ಟು ಖರೀದಿಸಲಾಯಿತು ಎಂದು ಅವನು ಭಾವಿಸಲು ಅನುವು ಮಾಡಿಕೊಡಬೇಕೆ? ಆದರೆ ಅವನು ಆ ಸಿಗರೇಟಿನ ಹಿಂದೆ ಇರಿಸಿದ್ದ ದೃಷ್ಟಿಯು ನಿಷ್ಕಪಟವಾಗಿತ್ತು; ಎರಡನೇ ಅಚ್ಚರಿ - ನಾಲ್ಕು ಜನರು ನಾಝಿ ರೀತಿಯಲ್ಲಿ ಹೆಜ್ಜೆ ಹಾಕುತ್ತಾ ಕೋಣೆಯೊಳಕ್ಕೆ ಬಂದು ಅಲ್ಲಿದ್ದವರನ್ನು, ನನ್ನನ್ನು ಸೇರಿಸಿ ಚೆಕ್ ಭಾಷೆಯಲ್ಲಿ ವಂದಿಸಿದರು. ಮೇಜಿನ ಹಿಂದೆ ಕುಳಿತುಕೊಂಡರು. ತಮ್ಮಲ್ಲಿದ್ದ ಕಾಗದ ಪತ್ರಗಳನ್ನು ಬಿಡಿಸಿದರು. ನೋಡಿದರೆ, ಅವರು ಅಧಿಕಾರಿಗಳಂತೆ ಕಂಡು ಬರುತ್ತಿದ್ದರು. ಆದರೆ ನನಗೆ ಅವರ ಪರಿಚಯವಿದೆ. ಅವನು ಟೆರಿಂಗ್‌

ಅಲ್ಲವೆ? ಅವಳು ಅಂಕಾ ವಿಕೋವ. ಆಕೆ ಕಷ್ಟ ಸಹಿಷ್ಣುವಾದ ಹೋರಾಟಗಾತಿಯಾಗಿದ್ದಳು. ಮೂರನೆ ಯುವನು ವಾಷೆಕ್ ರೆಜೆಕ್. ಉತ್ತರ ಬೊಹೆಮಿಯನ್ ಗಣಿಗಳಲ್ಲಿ ದುಡಿಯುತ್ತಿದ್ದ ಇಟ್ಟಿಗೆ ಕಟ್ಟುವ ಕಾರ್ಮಿಕ. ಆಗ ಅವನು ಪಕ್ಷದ ಜಿಲ್ಲಾ ಕಾರ್ಯದರ್ಶಿಯಾಗಿದ್ದ. ಆದರೆ, ಅವರು ಇಲ್ಲೇನು ಮಾಡುತ್ತಿದ್ದಾರೆ? ನನಗೆ ಈ ಪ್ರಶ್ನೆಗಳಿಗೆ ಉತ್ತರ ದೊರೆತಿರಲಿಲ್ಲ. ಈ ವೇಳೆಗೆ ಇತರರು ಬಂದರು. ಮಿರ್ಕಾ ಚೆಲಿನೆಕ್ ದಂಪತಿಗಳು, ಮತ್ತು ಫ್ರೀಡೆ ದಂಪತಿಗಳನ್ನು ಕರೆತಂದರು. ಹೌದು ಅವರೆಲ್ಲರನ್ನೂ ನನ್ನೊಂದಿಗೆ ಬಂಧಿಸಲಾಗಿತ್ತು. ಆದರೆ ಪಾವೆಲ್ ಕ್ರೊಪಾಚೆಕ್ ಇಲ್ಲೇಕೆ ಬಂದರು? ಇದಕ್ಕೆ ಉತ್ತರ ಸಿಗುವುದಕ್ಕೆ ಹೆಚ್ಚು ಕಷ್ಟವೇನಿಲ್ಲ. ಆದರೆ ಇದೊಂದು ಕ್ರೂರವಾದ ಹೊಡೆತವಾಗಿದೆ. ಬಹುಶಃ ಮಿರೆಕ್ ಎಲ್ಲವನ್ನೂ ಹೇಳಿರಬೇಕು. ನಮ್ಮ ಎಲ್ಲರ ಬಗೆಗೂ ವರದಿ ಒಪ್ಪಿಸಿರಬೇಕು. ಚೆಕ್ ಬುದ್ಧಿಜೀವಿಗಳ ರಾಷ್ಟ್ರೀಯ ಕ್ರಾಂತಿಕಾರಿ ಸಮಿತಿಯಲ್ಲಿ ಇರಬೇಕಾಗಿದ್ದ ಲೇಖಕರಾದ ವ್ಲಾದಿಮಿಕ್ ವಾಚುರ; ಪ್ರಾಧ್ಯಾಪಕರಾದ ಫೆಲ್ಬರ್, ಹಾಗೂ ಅವರ ಪುತ್ರ! ಗುರುತು ಸಿಗದಂತೆ ವೇಷ ಮರೆಸಿಕೊಂಡಿದ್ದ ಜೆಡ್.ಬ್ ವಾಕ್ಲವೆಕ್ ಎಲ್ಲರೂ ಅಲ್ಲಿದ್ದರು.

ನಂತರದ ದಿನಗಳಲ್ಲಿ ನನ್ನನ್ನು ಪ್ರತಿ ದಿನವೂ 400ನೇ ಕೋಣೆಗೆ ಕರೆದೊಯ್ಯಲಾಗುತ್ತಿತ್ತು. ನಾನು ಹೊಸ ವಿವರಗಳನ್ನು ಕಂಡುಕೊಳ್ಳುತ್ತಿದ್ದೆ. ಅದು ದುರಂತಮಯವೂ, ಭಯಾನಕವೂ ಆಗಿತ್ತು. ಮಿರೆಕ್ ಕೋಣೆಯಲ್ಲಿ ಶತ್ರುಗಳಿಗೆ ಸಿಕ್ಕಿದ ಗುಪ್ತ ಕಾಗದ ಪತ್ರಗಳ ಗೂಢಾರ್ಥವನ್ನು ಶತ್ರುಗಳಿಗೆ ಹೇಳುವುದಕ್ಕಿಂತ ಸಾಯುವುದೇ ಲೇಸು ಎನ್ನುವುದನ್ನು ಅವನು ಮರೆತ. ಅವನು ಮಾಡಿದ ಈ ಎಲ್ಲಾ ಕೆಲಸಗಳೂ ನನಗೆ ಬೇಸರವನ್ನುಂಟು ಮಾಡಲಿಲ್ಲ. ನಾನೇ ಸ್ವತಃ ಗೆಸ್ಟಾಪೋ ದಳದ ಕೈಗೆ ಸಿಕ್ಕಿ ಬಿದ್ದಿದ್ದೆ. ಈಗ ನನಗೆ ನೋವನ್ನುಂಟು ಮಾಡುವ ವಿಚಾರ ಏನಿರಬಹುದು? ಈಗಲೂ ಜೀವಂತವಾಗಿದ್ದನಾದರೂ ಅವನು ಸತ್ತಂತೆಯೇ ಸರಿ. ಏಕೆಂದರೆ, ಅವನು ತನ್ನ ತಂಡದಿಂದ ತಾನಾಗಿಯೇ ಹೊರಬಂದನು.

400ನೇ ಕೋಣೆಯು ಯುದ್ಧಕ್ಷೇತ್ರದಲ್ಲಿ ಬಹಳ ಮುಂಚೂಣಿಯಲ್ಲಿದ್ದ ಕಂದಕವಾಗಿತ್ತು. ಅದು ವೈರಿಗಳಿಂದ ಸಂಪೂರ್ಣವಾಗಿ ಸುತ್ತುವರಿಯಲ್ಪಟ್ಟಿತ್ತು. ಆದರೆ, ಇಲ್ಲಿ ನೀವು ಮಾತುಗಳ ಹಿಂದೆ ಅಡಗಿಕೊಳ್ಳುವುದಕ್ಕೆ ಸಾಧ್ಯವಿರಲಿಲ್ಲ. ಇಲ್ಲಿ ಅವರು ನಿಮ್ಮ ಮಾತುಗಳನ್ನು ತೂಗುತ್ತಿರಲಿಲ್ಲ. ಬದಲಾಗಿ ನಿಮ್ಮಲ್ಲಿ ಏನಿದೆ, ನೀವು ಯಾವುದರಿಂದ ಮಾಡಲ್ಪಟ್ಟಿದ್ದೀರಿ ಎನ್ನುವುದನ್ನು ಪರೀಕ್ಷಿಸುತ್ತಿದ್ದರು. ಈ ವೇಳೆಗೆ ನಿಮ್ಮ ವ್ಯಕ್ತಿತ್ವವನ್ನು ದೃಢಗೊಳಿಸಿದ, ದುರ್ಬಲಗೊಳಿಸಿದ ಗುಣಗಳೆಲ್ಲ ಸಾಯುವ ಮೊದಲು ಬೀಸುವ ಬಿರುಗಾಳಿಯಲ್ಲಿ ಕೊಚ್ಚಿ ಹೋಗಿರುತ್ತಿತ್ತು. ನಿಷ್ಠನಾದವನು ಪ್ರತಿರೋಧಿಸುತ್ತಾನೆ, ದ್ರೋಹಿಯಾದವನು ಮೋಸ ಮಾಡುತ್ತಾನೆ, ವೀರನಾದವನು ಹೋರಾಡುತ್ತಾನೆ, ದುರ್ಬಲನಾದವನು ಬಿಟ್ಟು ಬಿಡುತ್ತಾನೆ.

**ಪಾತ್ರಗಳು ಮತ್ತು ಚಿತ್ರಗಳು:-**

ಇತಿಹಾಸದ ಈ ಕಾಲಾವಧಿಯಲ್ಲಿ ಬದುಕಿರುವವರಲ್ಲಿ ನಾನು ಒಂದು ವಿನಂತಿ ಮಾಡುತ್ತೇನೆ: ಈ ಹೋರಾಟದಲ್ಲಿ ಭಾಗವಹಿಸಿದ ಜನರನ್ನು ಎಂದಿಗೂ ಮರೆಯಬೇಡಿ. ಪ್ರಸಕ್ತ ಕಾಲವೂ ಕ್ರಮೇಣ ಗತಕಾಲದ ಇತಿಹಾಸವಾಗುತ್ತದೆ. ಇತಿಹಾಸವನ್ನು ಬರೆದ ಅನಾಮಧೇಯ ವೀರರ ಮಹಾಯುಗವೆಂದು ಅದನ್ನು ಕರೆಯಲಾಗುತ್ತದೆ. ಅವರು ನಿಮ್ಮ ಕುಟುಂಬದಲ್ಲೇ ಒಬ್ಬರಾಗಿದ್ದರಂತೆ, ಅಥವಾ ನೀವೇ ಅವರಾಗಿದ್ದಂತೆ ನೀವು ಭಾವಿಸಬೇಕೆಂದು ನಾನು ಬಯಸುತ್ತೇನೆ. ವೀರರ ಇಡೀ ಕುಟುಂಬಗಳನ್ನೇ ಕೊಲೆಗೈಯ್ಯಲಾಗಿದೆ. ಅವರಲ್ಲಿ ಯಾರಾದರೊಬ್ಬರನ್ನು ಆರಿಸಿಕೊಂಡು ನಿಮ್ಮ ಸ್ವಂತ ಮಗ ಅಥವಾ ಮಗಳಂತೆ ಪ್ರೀತಿಸಿರಿ; ಭವಿಷ್ಯತ್ತಿನ ಒಳಿತಿಗಾಗಿ ಜೀವಿಸಿದ್ದ ಓರ್ವ ಮಹಾವ್ಯಕ್ತಿಯೆಂದು ಅವರ ಬಗ್ಗೆ ಹೆಮ್ಮೆಪಡಿರಿ. ಒಬ್ಬ ಪ್ರತ್ಯಕ್ಷದರ್ಶಿಯ ಸಾಕ್ಷ್ಯವನ್ನು ಈ ಕೆಳಗೆ ಕೊಡುತ್ತಿದ್ದೇನೆ.

**ಜೆಲಿನಿಕ್ ದಂಪತಿಗಳು: ಜೊಸೆಫ್** ಮತ್ತು ಮರಿಯ. ಆತ ಟ್ರಾಮ್ ಗಾಡಿಯಲ್ಲಿ ನಿರ್ವಾಹಕನಾಗಿದ್ದ. ಮತ್ತು ಆಕೆ ಮನೆಗೆಲಸದ ಕಾರ್ಮಿಕಳಾಗಿದ್ದಳು. ಮನೆ ನಂಬಲಾಗದಷ್ಟು ಚೊಕ್ಕಟವಾಗಿದ್ದವು. ಅವರಿಬ್ಬರೂ ನಿಷ್ಠೆಯಿಂದ ಸದ್ದುಗದ್ದಲವಿಲ್ಲದೆ ದುಡಿಯುತ್ತಿದ್ದರು. ಶತ್ರುವಿನ ಆಕ್ರಮಣದಿಂದಾಗಿ ಅವರ ಮೇಲೆ ಭಾರಿ ಪ್ರಮಾಣದಲ್ಲಿ ಕೆಲಸಗಳ ಹೊರೆಬಿದ್ದಾಗಲೂ ಕೂಡ ಅವರು ಹಿಂಜರಿಯಲಿಲ್ಲ.

**ಮೇ 19, 1943:** ಇಂದು ರಾತ್ರಿ, ಅವರು ನನ್ನ ಪ್ರೀತಿಯ ಗುಸ್ತಿನಾಳನ್ನು 'ದುಡಿಮೆಗಾಗಿ' ಪೋಲೆಂಡಿಗೆ ಎಳೆದೊಯ್ದರು. ಟೈಫಸ್ ಜ್ವರದಿಂದ ಸಾಯುವುದಕ್ಕಾಗಿ ಆಕೆಯನ್ನು ಕರೆದೊಯ್ದರು. ಆಕೆಗೆ ಇನ್ನು ಜೀವನದಲ್ಲಿ ಕೇವಲ ಕೆಲವೇ ವಾರಗಳು ಉಳಿದಿವೆ. ನನ್ನ ಮೇಲಿನ ಮೊಕದ್ದಮೆಯನ್ನು ನ್ಯಾಯಾಲಯಕ್ಕೆ ಒಪ್ಪಿಸಲಾಗಿದೆ. ನಂತರ ಎರಡು ಅಥವಾ ಮೂರು ತಿಂಗಳಲ್ಲಿ ಅಂತ್ಯವು ಬಂದು ಬಿಡುತ್ತದೆ. ಈ ಟಿಪ್ಪಣಿಗಳು ಎಂದಿಗೂ ಮುಗಿಯುವುದಿಲ್ಲ. ಆದರೆ ಇಂದು ನಾನು ಏನನ್ನೂ ಬರೆಯಲಾರೆ. ನನ್ನ ಮನಸ್ಸಿನಲ್ಲೂ, ಹೃದಯದಲ್ಲೂ ಗುಸ್ತಿನಾಳ ನೆನಪೇ ತುಂಬಿಕೊಂಡಿದೆ. ಓರ್ವ ಸ್ನೇಹಿತ ತನ್ನ ಸ್ನೇಹಿತನಿಗೆ ಸಹಾಯ ಮಾಡುವ ರೀತಿಯಲ್ಲಿಯೇ ನಾವು ಹಲವಾರು ವರ್ಷಗಳ ಕಾಲ, ಪರಸ್ಪರರಿಗೆ ಸಹಾಯ ಮಾಡಿದ್ದೇವೆ. ಜೊತೆಯಾಗಿ ದುಡಿದಿದ್ದೇವೆ. ಹಲವಾರು ವರ್ಷಗಳಿಂದ ನನ್ನ ಲೇಖನಗಳ ಮೊದಲ ಓದುಗಳೂ, ಮೊದಲ ವಿಮರ್ಶಕಳೂ ಆಗಿದ್ದಳು; ಅವಳೇ ನನ್ನ ಗುಸ್ತಿನಾ, ಗಾಢವಾದ ಪ್ರೀತಿ ಮತ್ತು ಮಹತ್ತರ ಶಕ್ತಿಯ ಮೂರ್ತರೂಪ.

**ನನ್ನ ಅಂತಿಮ ಇಷ್ಟ ಪತ್ರ:-**

ನನ್ನಲ್ಲಿ ನನ್ನ ಪುಸ್ತಕಾಲಯದ ಹೊರತು ಬೇರೇನೂ ಇರಲಿಲ್ಲ. ಗೆಸ್ಟಾಪೋ ದಳದವರು ಅದನ್ನೂ ಕೂಡ ನಾಶಪಡಿಸಿದರು. ಅವುಗಳಲ್ಲಿ ಅತ್ಯುತ್ತಮವಾದವುಗಳನ್ನು ಆರಿಸಿ ಐದು ಪುಸ್ತಕಗಳಾಗಿ ವಿಂಗಡಿಸಬೇಕೆಂದು ನನ್ನ ಸಂಗಾತಿ ಲಾಡ್ಯಾ, ಸ್ಟೋಲರಲ್ಲಿ ಕೇಳಿಕೊಳ್ಳುತ್ತೇವೆ: ಆ ಐದು ಕೃತಿಗಳೆಂದರೆ,



1) ರಾಜಕೀಯ ಲೇಖನಗಳು ಮತ್ತು ಚರ್ಚೆಗಳು 2) ಆಂತರಿಕ ವ್ಯವಹಾರಗಳ ಬಗ್ಗೆ ಆಯ್ದು ವರದಿಗಳು 3) ಸೋವಿಯತ್ ಒಕ್ಕೂಟದಿಂದ ಸಂಗ್ರಹಿಸಿದ ಟಿಪ್ಪಣಿಗಳು 4) ಮತ್ತು 5) ಸಾಂಸ್ಕೃತಿಕ ಹಾಗೂ ನಾಟಕದ ಬಗೆಗಿನ ಅಧ್ಯಯನಗಳು ಮತ್ತು ಲೇಖನಗಳು.

ನಮ್ಮ ತಲೆಮಾರಿನ ಜನರ ಬಗ್ಗೆ ಒಂದು ಕಾದಂಬರಿಯನ್ನು ಬರೆಯಲು ನಾನು ಆರಂಭಿಸಿದ್ದೆ. ಅದರ ಎರಡು ಅಧ್ಯಾಯಗಳು ನನ್ನ ಹತ್ತಿರದವರ ಬಳಿ ಇವೆ. ಮಿಕ್ಕ ಅಧ್ಯಾಯಗಳನ್ನು ಬಹುಶಃ ನಾಶ ಮಾಡಲಾಗಿದೆ. ನನ್ನ ಬಗ್ಗೆ ಗೆಸ್ಟಾಪೋ ದಳದವರು ಹೊಂದಿರುವ ಕಡತಗಳಲ್ಲಿ ನನ್ನ ಅನೇಕ ಕಥೆಗಳ ಹಸ್ತಪ್ರತಿಗಳನ್ನು ನಾನು ನೋಡಿದೆ. ಜಾನ್ ನೆರೂದರ ಬಗ್ಗೆ ನನಗಿರುವ ಆದರವನ್ನು, ಮುಂದೆ ಹುಟ್ಟಲಿರುವ ಸಾಹಿತ್ಯೇತಿಹಾಸಕಾರರಿಗೆ ನಾನು ಬಿಟ್ಟು ಕೊಡುತ್ತಿದ್ದೇನೆ. ಅವರು ನಮ್ಮ ಮಹಾನ್ ಕವಿಯಾಗಿದ್ದರು. ನನ್ನ ಸಾವಿನಿಂದಾಗಿ ನಮ್ಮ ಕುಟುಂಬದಲ್ಲಿ ಉಂಟಾಗುವ ತೆರವನ್ನು ನನ್ನ ತಂದೆ ಹಾಗೂ ತಾಯಿ ಮರೆಯುವಂತೆ ಮಾಡಲು ಅವರನ್ನು ಹಾಡು ಮತ್ತು ವಿನೋದಗಳಿಂದ ಸಂತೋಷಪಡಿಸುತ್ತಿರಬೇಕೆಂದು ನಾನು ನನ್ನ ಸಹೋದರಿಯರಾದ ಲಿಬಾ ಮತ್ತು ವೆರಾರಲ್ಲಿ ಕೇಳಿಕೊಳ್ಳುತ್ತೇನೆ. ನಾವು ಸೌಖ್ಯಸಾಧನೆಗಾಗಿಯೇ ಜೀವಿಸಿದೆವು. ಅದಕ್ಕಾಗಿಯೇ ಹೋರಾಟಕ್ಕೆ ಇಳಿದೆವು. ಅದಕ್ಕಾಗಿಯೇ ಸಾಯುತ್ತಿದ್ದೇವೆ. ನಮ್ಮ ಹೆಸರುಗಳೊಂದಿಗೆ ದುಃಖವೆಂದಿಗೂ ಸೇರದೇ ಇರಲಿ.

**ಮೇ 19 1943**

**- ಜ್ಯೂ.ಫ್ಯೂ.**

ನಾನು ಜೆಲಿನೆಕ್ ದಂಪತಿಗಳನ್ನು ವಿವರಿಸಲು ತೊಡಗಿದ್ದೆ. ಗೆಸ್ಟಾಪೋ ದಳದವರು ಅವಳ ಮಾದರಿ ಮನೆಯನ್ನು ಐದು ನಿಮಿಷಗಳಲ್ಲಿ ಪುಡಿಗುಟ್ಟಿದ್ದನ್ನು ನೋಡುವಾಗ ಅವಳ ಕಣ್ಣುಗಳಲ್ಲಿ ಭೀತಿ ತುಂಬಿಕೊಂಡಿತ್ತು. ತಲೆಯನ್ನು ಗಂಡನತ್ತ ತಿರುಗಿಸಿ ''ಈಗೇನಾಗುತ್ತದೆ ಜೋ?'' ಅವನು ಯಾವತ್ತೂ ಹೆಚ್ಚು ಮಾತನಾಡುತ್ತಿದ್ದವನಲ್ಲ. ''ಮರಿಯ, ನಾವು ಸಾಯುವುದಕ್ಕಾಗಿ ಹೋಗಲಿರುವೆವು'' ಅದನ್ನು ಕೇಳಿ ಅವಳು ಚೀರಲಿಲ್ಲ. ನಡುಗಲೂ ಇಲ್ಲ.

ಒಂದು ದಿನ ಅವರು ಜೆಲಿನೆಕ್ ದಂಪತಿಗಳನ್ನು ಬೇರೆಡೆಗೆ ಒಯ್ದರು. ಅವರ ಗತಿ ಏನಾಯಿತೆನ್ನುವುದನ್ನು ಕಂಡು ಹಿಡಿಯಲು ನಾನು ವಿಫಲಯತ್ನ ಮಾಡಿದೆ. ಆಕೆಯ ಕೊನೆಯ ಸಂದೇಶ ಹೀಗಿತ್ತು: ''ನಾಯಕರೇ ನನ್ನ ಮರಣಕ್ಕಾಗಿ ದುಃಖಿಸದಿರುವಂತೆ ಹೊರಗಿರುವ ಸಂಗಾತಿಗಳಿಗೆ ಹೇಳಿ.''

**ವೈಸುಪಿಲ್ ದಂಪತಿಗಳು:** ನಾನು ಆ ದಂಪತಿಗಳನ್ನು ಚೆನ್ನಾಗಿ ಬಲ್ಲೆ. ಅವರು ಪರಸ್ಪರರನ್ನು ಗಾಢವಾಗಿ ಪ್ರೀತಿಸುತ್ತಿದ್ದರು. ತಾವು ಒಬ್ಬರನ್ನೊಬ್ಬರು ತಮಾಷೆಯಾಗಿ ಅಮ್ಮಣ್ಣಿ ಮತ್ತು ಅಪ್ಪಣ್ಣರೆಂದು ಕರೆದುಕೊಳ್ಳುತ್ತ ಸುಖವಾಗಿ ಜೀವಿಸುತ್ತಿದ್ದ ಆ ಪುಟ್ಟ ಸ್ವಪ್ನ ಲೋಕಕ್ಕೆ ತನ್ನ ಪತಿಯನ್ನು ಮರಳಿ ತರುವುದಕ್ಕೆ ಎಷ್ಟೊಂದು ಒಳ ಸಂಚುಗಳನ್ನು ಆಕೆ ರೂಪಿಸಿರಬಹುದು. ಆದರೆ ಆಕೆ ತನ್ನ ಜೀವನವನ್ನು ಸಾಗಿಸಲು ಒಂದೇ ಒಂದು ದಾರಿಯನ್ನು ಕಂಡುಕೊಂಡಳು. ಭೂಗತ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದು. ಒಂದು ತಿಂಗಳ ಬಳಿಕ ಅವಳನ್ನು ಬಂಧಿಸಲಾಯಿತು. 400ನೇ ಕೋಣೆಯಲ್ಲಿದ್ದ ನಮ್ಮ ಬಹು ಜನರು ಆ ಸುದ್ದಿ ಕೇಳಿ ಗಾಬರಿಯಾದರು. ಆಕೆ ಒಂದೇ ಒಂದು ಶಬ್ದವನ್ನೂ ಬಿಟ್ಟುಕೊಡಲಿಲ್ಲ. ಗೆಸ್ಟಾಪೋದ ಅನಾಮಧೇಯ ಸಾಗಾಣಿಕೆಗಳಲ್ಲೊಂದರಲ್ಲಿ ಆಕೆ ಅದೃಶ್ಯಳಾದಳು.

**ಲೀದ:** ಬಕ್ಸಾ ಅವರ ಪರಿವಾರವನ್ನು ಭೇಟಿಯಾಗಲು ನಾನು ೬ನೇ ಮೊದಲ ಬಾರಿಗೆ ಹೋಗಿದ್ದಾಗ ಸಂಜೆಯಾಗಿತ್ತು. ಜೋಸೇ ಮಾತ್ರ ಮನೆಯಲ್ಲಿದ್ದನು. ಆತನ ಜೊತೆಗೆ ಉತ್ಸಾಹ ಪುಟಿಯುವ ಕಣ್ಣುಗಳಿದ್ದ ಪುಟ್ಟ ಹುಡುಗಿಯೊಬ್ಬಳೂ ಇದ್ದಳು. ಅವಳನ್ನು ಲೀದ ಎಂದು ಕರೆಯುತ್ತಿದ್ದರು. ನಾವು ಬೇಗನೆ ಸ್ನೇಹಿತರಾದೆವು. ಈ ಪುಟ್ಟ ಮಗುವಿಗೆ 19 ವರ್ಷ ವಯಸ್ಸು ಎಂದು ತಿಳಿದಾಗ ನನಗೆ ಆಶ್ಚರ್ಯವೇ ಆಯಿತು. ಆ ಮನೆಯಲ್ಲಿ ಸುಮಾರು 6 ತಿಂಗಳುಗಳ ಕಾಲ ವಾಸಿಸಿದ ಬಳಿಕ ನಾನು

ಮೊದಲ ಬಾರಿಗೆ ಮನೆಯನ್ನು ಬಿಟ್ಟು ಹೊರಟಾಗ ಆಕೆಯೂ ನನ್ನೊಡನೆ ಬಂದಳು. ಈ ನಮ್ಮನ್ನು ಹಾದುಹೋಗುತ್ತಿದ್ದವರು ನನಗಿಂತ ಹೆಚ್ಚಾಗಿ ಅವಳನ್ನೇ ನೋಡುತ್ತಿದ್ದರು. ಈ ಕಾರಣದಿಂದಲೇ ಆಕೆ ನನ್ನೊಡನೆ ತಿರುಗಾಟಕ್ಕೆ ಬರುತ್ತಿದ್ದಳು. ಈ ಕಾರಣದಿಂದಲೇ ಮೊದಲ ಸಲ ಕಾನೂನು ಬಾಹಿರ ಸಭೆಗೆ ನಾನು ಹೋದಾಗ ಆಕೆ ನನ್ನೊಡನೆ ಬಂದಳು. ಕಾರಣದಿಂದಲೇ ಆಕೆ ನನ್ನ ಮೊದಲ ಗುಪ್ತವಸತಿಗೆ ಬಂದು ನೆಲೆಸಿದಳು. ಹೀಗೆ ಆಕೆ ಸಹಜವಾಗಿಯೇ ನನ್ನ ಭೂಗತ ಸಂದೇಶವಾಹಕಳಾಗಿ ಬೆಳೆದಳು. ಈ ಕಾರ್ಯದಲ್ಲಿ ಆಕೆಗೆ ಮಿರೆಕ್‌ನ ಪರಿಚಯವಾಯಿತು. ಅವನಾಗಲೇ ಸಾಕಷ್ಟು ಕೆಲಸ ಮಾಡಿ ಪರಿಣಿತನಾಗಿದ್ದ. ಆತ ಅವಳ ಮೇಲೆ ಸಾಕಷ್ಟು ಪ್ರಭಾವ ಬೀರಿದ. 1942ರ ಆರಂಭದಲ್ಲಿ ಆಕೆ ಪಕ್ಷದ ಸದಸ್ಯತ್ವದ ಬಗ್ಗೆ ಅಳುಕುತ್ತಾ ಪ್ರಶ್ನಿಸತೊಡಗಿದಳು. 1942ರ ಫೆಬ್ರುವರಿಯಲ್ಲಿ ಕೇಂದ್ರೀಯ ಸಮಿತಿಯ ಬಹುಮತದ ನಿರ್ಧಾರದಿಂದಾಗಿ ಆಕೆ ನೇರವಾಗಿ ಪಕ್ಷದೊಳಕ್ಕೆ ಪ್ರವೇಶ ಪಡೆದಳು. ಭಾರಿ ಮಂಜು ಮುಸುಕಿದ್ದ ರಾತ್ರಿಯಲ್ಲಿ ನಾವು ಮನೆ ಕಡೆ ನಡೆಯುತ್ತ ಹೊರಟೆವು. ಇಂದು ಮೌನವಾಗಿದ್ದಳು; ಮನೆಯ ಬಳಿ ಮೈದಾನವನ್ನು ದಾಟುತ್ತಿರುವಾಗ ಆಕೆ ಒಮ್ಮಿಂದೊಮ್ಮೆಗೇ ನಿಂತಳು. ಹೀಗೆ ಹೇಳಿದಳು: ''ಇದು ನನ್ನ ಜೀವನದ ಅತ್ಯಂತ ಮುಖ್ಯವಾದ ದಿನವೆಂದು ನನಗೆ ಗೊತ್ತಿದೆ. ಇಂದಿನಿಂದ ನಾನು ಸ್ವತಃ ನನ್ನ ಅಧಿಕಾರಕ್ಕೆ ಒಳಪಟ್ಟವಳಾಗಿರುವುದಿಲ್ಲ'' ಉನ್ನತ ನಾಯಕತ್ವದೊಂದಿಗೆ ನಮ್ಮ ಅತ್ಯಂತ ಗುಪ್ತವಾದ ಕಾರ್ಯ ಸಂಬಂಧಗಳನ್ನು ಆಕೆಯೇ ನಿರ್ವಹಿಸಿದಳು. ನಮ್ಮ ಬಂಧನವಾದ ಒಂದು ತಿಂಗಳ ಬಳಿಕ ಅವಳನ್ನು ಬಂಧಿಸಲಾಯಿತು. ಅವಳಿಗೆ ಹಲವಾರು ವಿಚಾರಗಳು ತಿಳಿದಿದ್ದವು, ಆದರೆ ಒಂದೇ ಒಂದು ವಿಚಾರವನ್ನೂ ಆಕೆ ಬಿಟ್ಟುಕೊಡಲಿಲ್ಲ. ಅದಕ್ಕಿಂತಲೂ ಮುಖ್ಯವಾಗಿ ಆಕೆ, ತನ್ನ ಮೊದಲಿನ ಕೆಲಸವನ್ನು ಮುಂದುವರಿಸಿದಳು. ಈಗ ಆಕೆ ರೈಖ್‌ನಲ್ಲಿ ವಿಚಾರಣೆಯನ್ನು ಎದುರಿಸಲು ನಮ್ಮೊಂದಿಗೆ ಹೋಗುತ್ತಿದ್ದಾಳೆ. ಸ್ವಾತಂತ್ರ್ಯ ಸಿಗುವವರೆಗೆ ಬದುಕಿ ಉಳಿಯುತ್ತೇನೆನ್ನುವ ಯುಕ್ತವಾದ ಆಶೆಯನ್ನು ಇಟ್ಟುಕೊಂಡಿರುವುದು ನಮ್ಮ ಇಡೀ ಗುಂಪಿನಲ್ಲಿ ಆಕೆ ಮಾತ್ರ.

**1942ರ ಸೇನಾಡಳಿತ:-**

ಮೇ 27, 1943: ಇದು ಕೇವಲ ಒಂದು ವರ್ಷದ ಹಿಂದಿನ ಮಾತು. ಮತ್ತೊಮ್ಮೆ ಚಿತ್ರಹಿಂಸೆ ನೀಡಿಯಾದ ಬಳಿಕ, ಅವರು ನನ್ನನ್ನು 'ಸಿನಿಮಾ' ಕೋಣೆಗೆ ಕರೆದೊಯ್ದರು. ಮೊಗಸಾಲೆಯಲ್ಲಿ ನಾವು ಜನರಲ್ ಎಲಿಯಾಷಾ ಅವರನ್ನು ಸಂಧಿಸಿದೆವು. ಅವನ ಕಣ್ಣುಗಳಲ್ಲಿ ಭಾವಾವೇಶ ಕುಣಿಯುತ್ತಿತ್ತು. ಕಾವಲುಗಾರರ ಬೇಲಿಯಾಚೆಯಿಂದಲೇ ಅವನು ನನ್ನನ್ನೂ ಗುರುತಿಸಿ ನನ್ನ ಬಳಿ ಬಂದು ಉಸುರಿದ. ''ಸೇನಾಡಳಿತವನ್ನು ಘೋಷಿಸಲಾಗಿದೆ'' ನನ್ನ ಪ್ರಶ್ನೆಗೆ ಉತ್ತರಿಸಲು ಅವನಿಗೆ ಅವಕಾಶವಿರಲಿಲ್ಲ. ಪೆಟ್ಜೆಕ್ ಕಟ್ಟಡದಿಂದ ನಾವು ಬೇಗನೆ ಹಿಂದಿರುಗಿ ಬಂದುದನ್ನು ನೋಡಿ ಪ್ಯಾಂಕ್ರಾಟ್ಸನ ಕಾವಲುಗಾರರು ಆಶ್ಚರ್ಯಚಕಿತರಾದರು. ಮರುದಿನ ಅವರು ನಮ್ಮನ್ನು ಮೊಗಸಾಲೆಯಲ್ಲಿ ಸಾಲಾಗಿ ನಿಲ್ಲಿಸಿ ಚಿತ್ರಹಿಂಸೆಗೆ ಕರೆದೊಯ್ಯಲು ಅಣಿಗೊಳಿಸಿದರು. ನಮ್ಮ ಜೊತೆ ಸಂಗಾತಿ ವಿಕ್ಟರ್ ಸೈನೆಕ್ ಕೂಡ ಇದ್ದರು. ಅವರು ಪಕ್ಷದ ಕೇಂದ್ರಸಮಿತಿಯ ಕಟ್ಟಕಡೆಯ ಜೀವಂತ ಸದಸ್ಯರಾಗಿದ್ದರು. ಸೆರೆಮನೆಯ ಅಧಿಕಾರಿಯೊಬ್ಬ ಬಿಳಿಯ ಕಾಗದದ ತುಂಡೊಂದನ್ನು ಅವರ ಕಣ್ಣೆದುರು ಆಡಿಸುತ್ತಿದ್ದ. ಆ ತುಂಡಿನ ಮೇಲೆ ದಪ್ಪಕ್ಷರಗಳಲ್ಲಿ ಹೀಗೆ ಬರೆದಿತ್ತು: 'ಬಿಡುಗಡೆಯ ಆಜ್ಞೆ' ಆತ ಕರ್ಕಶವಾಗಿ ನಗುತ್ತಿದ್ದಾನೆ. ''ಎಲ್ಲಾದರೂ ಸಾಧ್ಯವುಂಟೆ ....'' ಹಾಗೆ ಹೇಳಿ ಅವನು ತನ್ನ ಬೆರಳನ್ನು ತನ್ನ ಕುತ್ತಿಗೆಯ ಸುತ್ತ ಎಳೆದುತೋರಿಸಿದ.

''ನಾಳೆಯ ಒಳಗೆ ನಿನಗೆ ಬುದ್ಧಿ ಬಾರದೇ ಹೋದಲ್ಲಿ ನಿನ್ನನ್ನು ಗುಂಡಿಕ್ಕಿ ಕೊಲ್ಲಲಾಗುವುದು'' ಎಂದು ನನಗೆ ಅವರು ಅಂತ್ಯದಲ್ಲಿ ಹೇಳುತ್ತಾರೆ. ಆ ಮಾತುಗಳಿಗೆ ಇನ್ನೇನೂ ಅಷ್ಟೊಂದು ಹೆದರಬೇ

ಕಾದ ಅಗತ್ಯವಿಲ್ಲ. ಅಂದು ರಾತ್ರಿ ನಾನು ನನ್ನ 'ವಿಚಾರಣೆ'ಯನ್ನೂ ಮುಗಿಸಿ ಕೋಣೆಗೆ ಮರಳಿದಾಗ ತುಂಬಾ ತಡವಾಗಿತ್ತು. ಕೆಳಗಡೆ ಗೋಡೆಯ ಬಳಿಯಲ್ಲಿ ವ್ಲಾದೀಮೀರ್ ವಂಚಾರ ನಿಂತಿದ್ದರು. ಅವರ ಕಣ್ಣುಗಳು ನಮ್ಮ ಬಾಳುಗಳಿಂದಾಚೆಗೆ ಎಷ್ಟೋ ದೂರದಲ್ಲಿ ಏನನ್ನೋ ದಿಟ್ಟಿಸುತ್ತಿದ್ದವು. ಅರ್ಧ ಗಂಟೆಯ ತರುವಾಯ ಅವರ ಹೆಸರನ್ನು ಕೂಗಲಾಯಿತು .....

ಹೆಣಗಳ ರಾಶಿ ಬೆಳೆಯುತ್ತಿದೆ. ಅವುಗಳನ್ನು ಹತ್ತರಂತೆ ಅಥವಾ ನೂರರಂತೆ ಲೆಕ್ಕ ಹಾಕುವಂತಿಲ್ಲ. ಸಾವಿರಗಟ್ಟಲೆ ಎಣಿಸಬೇಕಾದ ಸ್ಥಿತಿ ಬಂದಿದೆ. ಆದರೆ ಇಂತಹ ಭಯಾನಕ ಸನ್ನಿವೇಶದಲ್ಲಿಯೂ ಜನರು ಜೀವನ ಸಾಗಿಸುತ್ತಿದ್ದಾರೆ. ಅದನ್ನು ನಂಬುವುದೇ ಸಾಧ್ಯವಿಲ್ಲ.

ಸೇನಾಡಳಿತದ ಮಧ್ಯಭಾಗದಲ್ಲಿ ನನ್ನ ಅಧಿಕಾರಿಯು ನನ್ನನ್ನು ಹೊರಗಡೆ ಬ್ರಾನಿಕ್‌ಗೆ ಕರೆದೊಯ್ದನು. ಜೂನ್ ತಿಂಗಳ ಆ ಸುಂದರ ವಾತಾವರಣವು ಪರಿಮಳ ಭರಿತವಾಗಿತ್ತು. ಕೆಲವೊಮ್ಮೆ ನಾನು ಪೊಲೀಸ್ ಕಾರಿನಲ್ಲಿ ಕುಳಿತು ವಿಚಾರಣೆಗೆ ಹೋಗುತ್ತಿದ್ದೆ. ಆಗ ನಾನು ಕಿಟಕಿಯಿಂದಾಚೆ ಹೊರಲೋಕವನ್ನು ನೋಡಬಹುದಾಗಿತ್ತು. ಸಾಮಾನ್ಯವಾಗಿ ಅವರು ನನ್ನನ್ನು ಸಾಕಷ್ಟು ತಡವಾಗಿಯೇ ಕೋಣೆಗೆ ವಾಪಾಸು ತರುತ್ತಿದ್ದರು. ನಾನು ಹಿಂದಿರುಗಿ ಬರುತ್ತೇನೋ ಇಲ್ಲವೋ ಎಂದು ಅಪ್ಪ ಪೆಷೆಕ್ ಸದಾ ಚಿಂತಿತರಾಗುತ್ತಿದ್ದರು. ನಾನು ಒಳ ಬಂದೊಡನೆಯೇ ನನ್ನನ್ನು ಅಪ್ಪಿಕೊಳ್ಳುತ್ತಿದ್ದರು. ನಾನು ನನಗೆ ದೊರೆತ ಸುದ್ದಿಯನ್ನು ಅವರಿಗೆ ತಿಳಿಸುತ್ತಿದ್ದೆನು.

**ಇತಿಹಾಸದ ಒಂದು ತುಣುಕು**

**ಜೂನ್ 9 1943:** ನನ್ನ ಕೋಣೆಯಿಂದ ಮುಂದೆ ನಡುಕಟ್ಟೊಂದು ತೂಗಾಡುತ್ತಿದೆ. ನನ್ನದೇ ನಡುಕಟ್ಟು. ಸದ್ಯೋ ಭವಿಷ್ಯದಲ್ಲಿ ನನ್ನನ್ನು ಸಾಗಿಸಲಾಗುವುದೆಂಬುದರ ಚಿಹ್ನೆ ಅದು. ರಾತ್ರಿಯ ಹೊತ್ತು ಅವರು ನನ್ನನ್ನು ವಿಚಾರಣೆಗಾಗಿ ರೈಖ್‌ಗೆ ಕರೆದೊಯ್ಯಲಿದ್ದಾರೆ, ಇವೇ ಮುಂತಾದ ವಿಚಾರಗಳನ್ನು ಅದು ಸೂಚಿಸುತ್ತಿತ್ತು. ಆದರೆ, ಬೇರೆ ಎಲ್ಲೇ ಆದರೂ ಕೂಡ ಬರೆಯುವುದಕ್ಕೆ ನನಗೆ ಯಾವ ಅವಕಾಶವೂ



ಸಿಗದು. ಆದುದರಿಂದಲೇ ಇದು ನನ್ನ ಕಟ್ಟಕಡೆಯ ಪ್ರಮಾಣ ಪತ್ರವಾಗಿರುತ್ತದೆ.

1941ರ ಫೆಬ್ರುವರಿಯಲ್ಲಿ ಜೆಕೊಸ್ಲವಾಕಿಯಾದ ಕಮ್ಯುನಿಸ್ಟ ಪಕ್ಷದ ಇಡೀ ಕೇಂದ್ರೀಯ ಸಮಿತಿಯನ್ನು ಅವರು ಬಂಧಿಸಿದರು. ನಮ್ಮ ಪತನದ ತರುವಾಯ ಪಕ್ಷದ ಕೆಲಸಗಳನ್ನು ವಹಿಸಿಕೊಳ್ಳಲು ಸಿದ್ಧರಾಗಿದ್ದ ಎರಡನೆಯ ತಂಡದ ನಾಯಕರನ್ನು ಕೂಡ ಅವರು ಬಂಧಿಸಿದರು. ಕಾರಣಗಳೇನು ಎನ್ನುವುದು ಇನ್ನೂ ಸಂಪೂರ್ಣವಾಗಿ ತಿಳಿದಿಲ್ಲ. ಪ್ರಾಯಶಃ ಮುಂದೊಂದು ದಿನ ಅದಕ್ಕೆ ವಿವರಣೆ ಸಿಗಬಹುದೇನೋ. ಗೆಸ್ಟಾಪೋ ಅಧಿಕಾರಿಗಳು ಸೆರೆಸಿಕ್ಕಿ ಅವರ ಬಾಯಿ ಬಿಡಿಸಲು ಸಾಧ್ಯವಾದಾಗ ಅದು ಬೆಳಕಿಗೆ ಬರಬಹುದು. ವೈರಿ ಸೇನೆಯು ಸೋವಿಯತ್ ಒಕ್ಕೂಟದ ಮೇಲೆ ದಾಳಿ ಮಾಡಲು ಸರ್ವ ಸನ್ನದ್ಧವಾಗಿದ್ದ ಸಮಯದಲ್ಲೇ ನಮ್ಮ ಮೇಲೆ ಈ ಪ್ರಹಾರವು ಬಿದ್ದಿತು. ಮೊದಲೇ ಹಾಕಿಕೊಳ್ಳಲಾಗಿದ್ದ ಯೋಜನೆಯಂತೆ ಉಳಿದವರು ನನ್ನನ್ನು ಸಂಪರ್ಕಿಸುವರೆಂದು ಭಾವಿಸಿ ನಾನು ಕಾಯುತ್ತಾ ಕುಳಿತೆ. ಆದರೆ ನನ್ನ ಕಾಯುವಿಕೆಯು ವ್ಯರ್ಥವಾಯಿತು. ಸುಮ್ಮನೆ ಕಾಯುತ್ತ ಕುಳಿತಿರಬಾರದೆಂದು ಒಂದು ತಿಂಗಳ ನಂತರ ಸ್ಪಷ್ಟವಾಗಿಯೇ ತಿಳಿದು ಬಂದಿತು. ಆದುದರಿಂದ ನಾನು ಇಲ್ಲಿಂದ ಹೊರಗಡೆ ಸಂಪರ್ಕವನ್ನೂ ಅರಸತೊಡಗಿದೆನು. ಮೊಟ್ಟಮೊದಲು ನಾನು ಕಂಡ ಇಂತಹ ವ್ಯಕ್ತಿಯೆಂದರೆ ಹೊನ್ಜಾ ವೈಸ್ಕೊಲುಲ್. ಅವರು ಪಕ್ಷದ ಕೇಂದ್ರ ಬೊಹಿಮಿಯಾ ವಿಭಾಗದ ನಾಯಕರಾಗಿದ್ದರು. ಪಕ್ಷಕ್ಕೆ ಒಂದು ಪತ್ರಿಕೆಯಿಲ್ಲದಂತೆ ಆಗಬಾರದೆಂದು 'ಕೆಂಪು ಹಕ್ಕುಗಳು' ಪತ್ರಿಕೆಯ ಪ್ರಕಟಣೆಯನ್ನು ಪುನರಾರಂಭಿಸಲು ಅವರಾಗಲೇ ಒಂದಷ್ಟು ವಿಷಯಗಳನ್ನು ಸಿದ್ಧಪಡಿಸಿದ್ದರು. ನಾನು ಮುಖ್ಯ ಸಂಪಾದಕೀಯವನ್ನು ಬರೆದೆನು. ಆದರೆ ನಾನು ನೋಡದೇ ಇರುವ ಮಿಕ್ಕ ಲೇಖನಗಳನ್ನು 'ಕೆಂಪು ಹಕ್ಕುಗಳು' ಎಂಬ ಹೆಸರಿನಡಿಯಲ್ಲಿ ಪ್ರಕಟಿಸಬಾರದೆಂದೂ ಬದಲಾಗಿ 'ಮೇ ಪತ್ರಿಕೆ' ಎಂಬ ಹೆಸರಲ್ಲಿ ಪ್ರಕಟಿಸಬೇಕೆಂದು ನಾವು ಪರಸ್ಪರ ಒಪ್ಪಂದಕ್ಕೆ ಬಂದೆವು. ಮುಂದಿನ ತಿಂಗಳುಗಳನ್ನು ಪಕ್ಷದ ಕಾರ್ಯಕರ್ತರ ಕೆಲಸಗಳಿಗೆ ಮಿಸಲಾಗಿಡಲಾಯಿತು. ಆ ಪ್ರಹಾರವು ಎಷ್ಟೇ ಉಗ್ರವಾಗಿದ್ದರೂ ಕೂಡ ಪಕ್ಷವನ್ನು ಕೊಲ್ಲುವುದಕ್ಕೆ ಅವರಿಗೆ ಸಾಧ್ಯವಾಗಲಿಲ್ಲ. ಪಕ್ಷದ ಕಾರ್ಯಕರ್ತರ ತಂಡವೊಂದು ಪ್ರಕಟಿಸಿದ 'ಕೆಂಪು ಹಕ್ಕುಗಳು' ಪತ್ರಿಕೆಯ ಪ್ರತಿಯೊಂದನ್ನು ನಾನು ಕಂಡೆ. ಅದರಲ್ಲಿ ಅನುಭವಿ ರಾಜಕಾರಣಿಯೊಬ್ಬರು ಕೆಲಸ ಮಾಡಿದ್ದನ್ನು ನಾನು ಗಮನಿಸಿದೆ. ಕಟ್ಟಕಡೆಗೆ ನಮ್ಮಿಬ್ಬರನ್ನೂ ಬಲ್ಲವರೂ, ನಮ್ಮಿಬ್ಬರ ಬಗೆಗೂ ಖಾತರಿಯನ್ನೂ ಸ್ವತಃ ನೀಡಬಲ್ಲವರೂ ಆಗಿದ್ದ ವ್ಯಕ್ತಿಯೊಬ್ಬರನ್ನು ನಾವು ಕಂಡುಹಿಡಿದೆವು. ಆತನ ಹೆಸರು ಡಾ.ಮಿಲೋಷ್ ನೆದ್‌ವೆದ. ಆತ ಒಳ್ಳೆಯ ಯುವಕನಾಗಿದ್ದ. ಆತನೇ ನಮ್ಮ ಪ್ರಥಮ ಸಂದೇಶವಾಹಕನಾದನು. ಡಾ.ನೆದ್‌ವೆದ್‌ರನ್ನು ಕಂಡುಹಿಡಿದು ಆತನನ್ನು ನಾನು ಅಡಗಿಕೊಂಡಿದ್ದ ಬಾಕ್ಸ್ ಪರಿವಾರದ ಮನೆಗೆ ಕರೆದು ತರುವಂತೆ ಲೀದಳನ್ನು ಕಳುಹಿಸಿದೆನು. ಆತ ಕೂಡಲೇ ಬಂದನು. ಮೇ ಪತ್ರಿಕೆಯಲ್ಲಿ ಆ ಸಂಪಾದಕೀಯವನ್ನು ಬರೆದಿದ್ದ ವ್ಯಕ್ತಿಯನ್ನು ಕಂಡುಹಿಡಿಯುವ ಕೆಲಸವನ್ನು ಅವನಿಗೆ ಒಪ್ಪಿಸಲಾಗಿತ್ತು ಎನ್ನುವ ವಿಷಯವನ್ನು ಅವನ ಮಾತಿನ ಮಧ್ಯೆ ಅತೀವ ಎಚ್ಚರಿಕೆಯಿಂದ ನನಗೆ ತಿಳಿಸಿದನು. ಅದನ್ನು ನಾನೇ ಬರೆದಿದ್ದೆ ಎನ್ನುವ ಯಾವ ಸಂದೇಹವೂ ಅವನಿಗೆ ಉಂಟಾಗಿರಲಿಲ್ಲ. ಏಕೆಂದರೆ ಅತ್ತ ಕಡೆ ಇದ್ದ ಸದಸ್ಯರೆಲ್ಲರೂ, ನನ್ನನ್ನು ಬಂಧಿಸಲಾಗಿದೆಯೆಂದೂ ಬಹುಶಃ ಈಗಾಗಲೇ ವಧಿಸಲಾಗಿದೆಯೆಂದೂ ಖಚಿತವಾಗಿ ನಂಬಿದ್ದರು.

1941ರ ಜೂನ್ 22ರಂದು ಹಿಟ್ಲರನು ಸೋವಿಯತ್ ಒಕ್ಕೂಟದ ಮೇಲೆ ದಾಳಿ ಮಾಡಿದನು. ನಾನು ಅಷ್ಟು ದೀರ್ಘ ಕಾಲದಿಂದ ಅರಸುತ್ತಿದ್ದ ವ್ಯಕ್ತಿಯನ್ನು ಕೊನೆಗೆ ಜೂನ್ 30ರಂದು ನಾನು ಭೇಟಿಯಾದೆನು. ತಾನು ಯಾರನ್ನು ಭೇಟಿಯಾಗಲಿದ್ದೇನೆ ಎನ್ನುವುದು ಆತನಿಗೆ ತಿಳಿದಿದ್ದುದರಿಂದ ಆತನು ನಾನು ಸೂಚಿಸಿದ್ದ ವಿಳಾಸಕ್ಕೆ ಬಂದನು. ಅವನಾರೆಂಬುದು ನನಗಿನ್ನೂ ತಿಳಿದಿರಲಿಲ್ಲ. ಅದು ಪ್ರೇಮಿಗಳ

ಮಿಲನಕ್ಕೆ ತಕ್ಕುದಾದ ರಾತ್ರಿಯಾಗಿತ್ತು. ನಾನು ದೀಪವನ್ನು ಹೊತ್ತಿಸಿದಾಗ ನಾವಿಬ್ಬರೂ ಪರಸ್ಪರ ಅಪ್ಪಿಕೊಂಡಿದ್ದೆವು. ಅವರು ಹೊನ್ಸಾ ಜಿಕಾ. ನಾವಿಬ್ಬರೂ ಒಂದು ಒಪ್ಪಂದಕ್ಕೆ ಬರಲು ಕೆಲವೇ ನಿಮಿಷಗಳು ಸಾಕಾದವು. ಕೆಲವೇ ದಿನಗಳಲ್ಲಿ, ಹೊಸ ನಾಯಕತ್ವದ ಮೂರನೇ ಸದಸ್ಯನ ಪರಿಚಯವೂ ನನಗಾಯಿತು. ಅವರೇ ಹೊನ್ಸಾ ಚೆರ್ನಿ. ಅವರು ಪ್ರತಿಭಾವಂತರಾಗಿದ್ದು, ಸದಾ ಹೊಸ ಉಪಕ್ರಮಗಳನ್ನು ಕೈಗೊಳ್ಳುತ್ತಿದ್ದರು. ಅನೇಕ ತಿಂಗಳುಗಳ ಪಟ್ಟು ಬಿಡದ ಹೋರಾಟವು ನಮ್ಮನ್ನು ಅತ್ಯುತ್ತಮ ಸಂಗಾತಿಗಳನ್ನಾಗಿ ಮಾಡಿತು. ಚೆರ್ನಿ, ವಿಧ್ವಂಸಕ ಕಾರ್ಯಗಳು ಮತ್ತು ಸಶಸ್ತ್ರ ಕ್ರಾಂತಿಯ ತಯಾರಿಗಳ ಹೊಣೆ ವಹಿಸಿಕೊಂಡಿದ್ದರು. ನನ್ನ ಮೇಲೆ ಪತ್ರಿಕೋದ್ಯಮದ ಹೊಣೆ ಇತ್ತು. ನಮ್ಮ ಕಾರ್ಯಭಾರಗಳ ವಿಭಜನೆಯು ಜವಾಬ್ದಾರಿಯ ವಿಭಜನೆಯಾಗಿತ್ತೇ ಹೊರತು ಕೆಲಸಗಳ ವಿಭಜನೆಯಾಗಿರಲಿಲ್ಲ. ನಮಗೆ ಜೀವಿಸುವುದಕ್ಕೇ ಜಾಗ ಇಲ್ಲದಿರುವಾಗ ಕೆಲಸ ಮಾಡುವುದು ತೀರಾ ಕಷ್ಟದಾಯಕವಾಗಿರುತ್ತಿತ್ತು. ಪಡಿತರ ಚೀಟಿಗಳಲ್ಲದೆ ಆಹಾರವನ್ನು ಪಡೆಯುವುದೂ ಸಾಧ್ಯವಿರಲಿಲ್ಲ. ನಾವು ಹೋರಾಟದಲ್ಲಿ ಸಕ್ರಿಯ ಪಾತ್ರವನ್ನು ವಹಿಸಲೇಬೇಕಾಗಿದ್ದ ವೇಳೆಯಲ್ಲಿ ಈ ಎಲ್ಲಾ ಅಡೆತಡೆಗಳನ್ನು ನಾವು ದಾಟಬೇಕಾಗಿತ್ತು. ದುರಾಕ್ರಮಣಕಾರರ ವಿರುದ್ಧ ಆಂತರಿಕ ಸೇನಾರಂಗದಲ್ಲಿ ಹೋರಾಡಬೇಕಾದುದು ನಮ್ಮ ಕರ್ತವ್ಯವಾಗಿದೆ. ನಮ್ಮ ಸ್ವಂತದ ಸದಸ್ಯ ಬಲದಿಂದ ಮಾತ್ರವಷ್ಟೇ ಅಲ್ಲದೆ, ಇಡೀ ಚೆಕ್ ಜನಾಂಗದ ಬಲವನ್ನು ಕೂಡ ಸಾಧ್ಯವಾದಷ್ಟು ಮಟ್ಟಿಗೆ ಬಳಸಿ ನಾವು ಹೋರಾಡಬೇಕಾಗಿದೆ.

1941ರ ಸೆಪ್ಟೆಂಬರ ಆದಿ ಭಾಗದ ವೇಳೆಗೆ ಗಣನೀಯವಾದ ಕಾರ್ಯಭಾರಗಳನ್ನು ವಹಿಸಿಕೊಳ್ಳಲು

## ಅಜ್ಞಾನ

★ ಅಜ್ಞಾನಿಯಾಗಿರುವುದಕ್ಕಿಂತ ಹುಟ್ಟದಿರುವುದೇ ಲೇಸು. ಏಕೆಂದರೆ ಅಜ್ಞಾನವೇ ಎಲ್ಲ ಕೆಟ್ಟದ್ದಕ್ಕೆ ಮೂಲ. *(ಪ್ಲೇಟೋ)*

★ ಅಜ್ಞಾನವೇ ಮೋಹ ಮತ್ತು ಸ್ವಾರ್ಥಕ್ಕೆ ಮೂಲವಾದುದರಿಂದ ಅಜ್ಞಾನಿ ದುಷ್ಟನಾಗಿರುತ್ತಾನೆ. *(ಮಹಾತ್ಮಾ ಗಾಂಧೀಜಿ)*

★ ಅಜ್ಞಾನವೆನ್ನುವುದು ಚಂದ್ರನಕ್ಷತ್ರಗಳಿಲ್ಲದ ರಾತ್ರಿಯಂತೆ. *(ಕನ್‌ಫ್ಯೂಶಿಯಸ್)*

★ ಅರಿಯದ ವಿಷಯದಲ್ಲಿ ಅಜ್ಞಾನವನ್ನು ಒಪ್ಪಿಕೊಳ್ಳಲು ನನಗೆ ಸ್ವಲ್ಪವೂ ಲಜ್ಜೆಯಿಲ್ಲ. *(ಸಿಸೇರೋ)*

★ ಅಜ್ಞಾನದಂತಹ ಶತ್ರು, ಇನ್ನೊಂದಿಲ್ಲ. *(ಚಾಣಕ್ಯ)*

★ ದುಃಖಕ್ಕೆ ಕಾರಣ ಅಜ್ಞಾನವೆಂಬ ಮಾತು ಹಗಲಿನಂತೆ ಸ್ಪಷ್ಟ. *(ಸ್ವಾಮಿ ವಿವೇಕಾನಂದ)*

(ಸಂಗ್ರಹ) ಬಿ. ವಾಸುದೇವ ವರ್ಣ

ಸಮರ್ಥವಾಗಿದ್ದ ಕೇಂದ್ರೀಯ ಘಟಕವನ್ನು ಮತ್ತೆ ದೃಢವಾಗಿ ಸಂಘಟಿಸಿದ್ದೇವೆ ಎಂದು ನಾವು ಹೇಳಿಕೊಳ್ಳಬಹುದಾಗಿತ್ತು. ಜನರ ಗಮನವನ್ನು ಸೆಳೆಯುವುದಕ್ಕಾಗಿ ಪ್ರಚಾರ ಕಾರ್ಯಗಳು ಆರಂಭಗೊಂಡವು. ಎಲ್ಲೆಡೆ ಕಾರ್ಖಾನೆಗಳಲ್ಲಿ ಮುಷ್ಕರಗಳು ನಡೆದುವು. ಹೆಚ್ಚು ದೃಢವಾಗಿ ಬೆಳೆಯುತ್ತಿದ್ದ ನಮ್ಮ ಸಕ್ರಿಯ ಪ್ರತಿರೋಧವನ್ನು ಮುರಿಯುವಲ್ಲಿ ಸೇನಾಡಳಿತವು ವಿಫಲವಾಯಿತು.

ನಮ್ಮ ವಾರ್ತಾಪತ್ರಿಕೆಗಳು ವ್ಯಾಪಕವಾಗಿ ಪ್ರಸಾರವಾಗುತ್ತಿದ್ದವು. ಹಿಟ್ಲರನ ವಿರುದ್ಧ ಜಗತ್ತು ಎಂಬ ಹೆಸರಿನಲ್ಲಿ ತಮ್ಮ ಸ್ವಂತ ಪತ್ರಿಕೆಯೊಂದನ್ನು ಹೊರಡಿಸುತ್ತಿದ್ದ ಪುಕ್ಸ್ ಲೋರೆಂಜಾ ತಂಡವೂ ಉತ್ತಮವಾಗಿ ಕೆಲಸ ಮಾಡುತ್ತಿತ್ತು. ನಾನೇನಾದರೂ ಸಿಕ್ಕಿಬಿದ್ದರೆ ನನ್ನ ಕೆಲಸವನ್ನು ವಹಿಸಿಕೊಳ್ಳಲು ಬದಲಿ ವ್ಯಕ್ತಿಯನ್ನು ಬಹು ಮೊದಲೇ ಸಿದ್ಧಪಡಿಸಲಾಗಿತ್ತು. ಹೀಗೆ ನನ್ನ ಬಂಧನವಾದಾಗ ಕೇಂದ್ರೀಯ ಸಮಿತಿಯು ತನ್ನ ಸಾಮಾನ್ಯಕಾರ್ಯವನ್ನು ಮುಂದುವರಿಸಿತ್ತು. 1942 ಮೇ 27ರ ರಾತ್ರಿ ಹೊನ್ಜಾ ಜಿಕಾ ಅವರನ್ನು ಬಂಧಿಸಲಾಯಿತು. ಅವರು ತನ್ನ ನಲ್ಮೆಯ ಮಂದಹಾಸವನ್ನು ಸೂಸುತ್ತ ನನ್ನಲ್ಲಿ ಹೀಗೆಂದು ಹೇಳಿದರು: ''ಜೂಲಿಯೊ! ನಿನ್ನ ಆರೋಗ್ಯದ ಕಡೆ ಗಮನವಿರಲಿ'' 1942ರ ಬೇಸಗೆಯಲ್ಲಿ ಹೊನ್ಜಾ ಚೆರ್ನಿಯವರನ್ನೂ ಬಂಧಿಸಲಾಯಿತು. ಶತ್ರುಗಳು ಅವರನ್ನು ದೀರ್ಘಕಾಲ ಸೆರೆಮನೆಯಲ್ಲಿಟ್ಟರು. ಸೆರೆಮನೆವಾಸವು ಅವರಲ್ಲಿ ಯಾವ ಬದಲಾವಣೆಯನ್ನೂ ಉಂಟುಮಾಡಲಿಲ್ಲ. ಎಪ್ರಿಲ್ ತಿಂಗಳಿನ ಕೊನೆಯ ಭಾಗದಲ್ಲಿ ಶತ್ರುಗಳು ಅವರನ್ನು ಒಮ್ಮಿಂದೊಮ್ಮೆಗೇ ಪ್ಯಾಂಕ್ರಾಟ್ಸ್‌ನಿಂದ ಹೊರಗೊಯ್ದರು. ಆದರೆ ಚೆರ್ನಿಯವರನ್ನು ಮತ್ತೆ ಕಾಣುವೆನೆಂಬ ಆಶೆ ನನ್ನಲ್ಲಿಲ್ಲ.

ನನ್ನ ಸ್ವಂತ ಜೀವನ ನಾಟಕದ ಅಂತ್ಯವು ಸಮೀಪಿಸುತ್ತಿದೆ. ಆ ಅಂತ್ಯದ ಬಗ್ಗೆ ಬರೆಯಲು ನನಗೆ ಸಾಧ್ಯವಿಲ್ಲ. ಏಕೆಂದರೆ ಅದು ಹೇಗಿರುತ್ತದೆಯೆಂದು ನನಗೆ ಈಗಲೂ ಗೊತ್ತಿಲ್ಲ. ಇದು ಇನ್ನೇನೂ ನಾಟಕವಾಗಿ ಉಳಿದಿಲ್ಲ. ಇದುವೇ ಜೀವನ.

ನಿಜ ಜೀವನದಲ್ಲಿ ಪ್ರೇಕ್ಷಕರಿರುವುದಿಲ್ಲ; ನೀವೆಲ್ಲರೂ ಜೀವನದಲ್ಲಿ ಪಾತ್ರವಹಿಸುತ್ತೀರಿ. ಕೊನೆಯ ಅಂಕದ ಪರದೆಯು ಏಳುತ್ತಿದೆ. ಗೆಳೆಯರೇ ನಾನು ನಿಮ್ಮೆಲ್ಲರನ್ನೂ ಪ್ರೀತಿಸಿದ್ದೆನು. ಎಚ್ಚರದಿಂದಿರಿ!



Printed and Published by **B.S.SAVANOOR** on behalf of Loka Shikshana Trust at 'Samyukta Karnataka Press', Koppikar Road, Hubli - 580 020. (Phone: 64303); No. 2, Residency Road, Bangalore - 560 025 (Phone: 213265).
**Managing Editor: K.SHAMARAO**
Representatives: Bombay: V.Satyamurthy (Phone: 5510592)
Madras: S.K.Murthi (Phone: 414870)
New Delhi: V.K.Chopra (Phone: 7114785)
Registered with the Registrar of Newspapers for India
under No. 3633/57.

